ಸಂಪಾದಕರು ಮತ್ತು ಪ್ರಕಾಶಕರು :
ಬುರ್ಲಿ ಬಿಂದುಮಾಧವ
ಮಿಂಚಿನ ಬಳ್ಳಿ ಕಾರ್ಯಾಲಯ, ಧಾರವಾಡ



## ಮುಂಬರಲಿರುವ ಪುಸ್ತಕಗಳು

೧ ಪ್ರಸನ್ನ ವೆಂಕಟದಾಸರು

೨ ಭಾರತದ ರಾಜಕಾರಣ

೩ ಜಗನ್ನಾಥದಾಸರು

೪ ಗುರು ಪುರಂದರದಾಸರು

ಇತ್ಯಾದಿ

ಇವಲ್ಲದೆ ಪ್ರಿನ್ಸಿಪಾಲ ಗೋಕಾಕ, ಪ್ರೊ. ಮುಗಳಿ, ಮಾನ್ವಿ ನರಸಿಂಗರಾವ ಮೊದಲಾದವರ ಗ್ರಂಥಗಳು ಪ್ರಕಟವಾಗಲಿವೆ.

ಮೊದಲ ಮುದ್ರಣ : ೧೯೫೫

ಮುದ್ರಕರು :
ಶೇ. ಗೋ. ಕುಲಕರ್ಣಿ
ಸಾಧನ ಮುದ್ರಣಾಲಯ, ಧಾರವಾಡ

## ಹರಿಃ ಓಂ

# ಅರಿಕೆ

ಕರ್ನಾಟಕದ ಸುಪ್ರಭಾತದ ಈ ಮಂಗಲ ಸಮಯದಲ್ಲಿ, ಮಾನವ ಪ್ರೇಮಿಯಾದ 'ಮಾನವಪುತ್ರ-ಜೀಸಸ್' ಎಂಬ ಈ ಗ್ರಂಥವು ಪ್ರಕಟವಾಗುತ್ತಿರುವದು ಒಂದು ಶುಭಲಕ್ಷಣವೆಂದು ಬಗೆಯುವೆ. ಬಳ್ಳಿಗೆ ೧೮ನೇ ವರ್ಷ ಪ್ರಾರಂಭವಾಯಿತು. ಧರ್ಮಾತ್ಮರ, ಸುಜೀವಿಗಳ ಶುಭ-ಆಶೀರ್ವಾದಗಳನ್ನು ಅದು ಕೋರುತ್ತದೆ. ಬೆಳಕಿನತ್ತ ಸಾಗಲು ಬಯಸುತ್ತಿದೆ. ಸುವಿಚಾರ ಪ್ರಚಾರ ಹಾಗು ರಾಷ್ಟ್ರನಿರ್ಮಾಣದ ತನ್ನ ಸಂಕಲ್ಪವನ್ನು ಪುನರುಚ್ಚರಿಸುತ್ತದೆ. ಸುಹೃದಯರಾದ ಕನ್ನಡಿಗರ, ಸನ್ಮಿತ್ರರ ಸಹಾಯದಿಂದ ಮುಂದಡಿಯಿಡಲು ಪ್ರಯತ್ನಿಸುತ್ತಿದೆ.

ಎಳೆಗೆಳೆಯರಾದ ದೇಸಾಯಿ ದತ್ತಮೂರ್ತಿಯವರ ('ದೇವದತ್ತ') 'ಮಾನವಪುತ್ರ ಜೀಸಸ್' ಎಂಬ ಕೃತಿಯು ಸುಪ್ರಸಿದ್ಧ ಆಂಗ್ಲಕವಿಯಾದ ಖಲಿಲ ಗಿಬ್ರಾನನ 'ಜೀಸಸ್-ದಿ ಸನ್ ಆಫ್ ಮ್ಯಾನ್' ಎಂಬ ಕೃತಿಯ ಅನುವಾದ. ಇದನ್ನು ಓದುವಾಗ ಮಹಾತ್ಮರ ಜೀವನವನ್ನೇ ನಾನು ಕಂಡೆ. ಉದಾತ್ತವಾದ ವಿಚಾರಲಹರಿಯಲ್ಲಿ ನನ್ನನ್ನೇ ನಾನು ಮರೆತೆ. ದತ್ತಮೂರ್ತಿಯ ಹೃದಯವು ಇದರಲ್ಲಿ ಕಾವ್ಯಪ್ರವಾಹವಾಗಿ ಹರಿದಿದೆ. ಬಾಯಬಲ್ ಓದಿದಾಗ ಆದ ಅನುಭವಕ್ಕಿಂತಲೂ ಇದನ್ನೋದುವಾಗ ಜೀಸಸ್‌ನ ದಿವ್ಯಜೀವನವು ಕಣ್ಣೆದುರು ನಿಲ್ಲುತ್ತದೆ. ಕನ್ನಡಿಗರು ಇದನ್ನೋದಿಯೇ ಇದರ ಸವಿಯನ್ನು ಸವಿಯಬೇಕಾಗಿ ಬಿನ್ನವಿಸುವೆ. ತಮ್ಮ ಈ ಕೃತಿಯನ್ನು ಬಳ್ಳಿಯಲ್ಲಿ ಅರಳುವಂತೆ ಮಾಡಿದಕ್ಕಾಗಿ, ಅವರಿಗೂ ಉಳಿದ ಗೆಳೆಯರಿಗೂ ಧನ್ಯವಾದಗಳನ್ನರ್ಪಿಸುವೆ. ಗೆಳೆಯರಾದ ವಿ. ಕೃ. ಗೋಕಾಕರು ಮುನ್ನುಡಿಯನ್ನು ಬರೆದುದಕ್ಕಾಗಿ ನಾನು ಋಣಿಯಾಗಿರುವೆ.

ಎಂದಿನಂತೆ ಉದಾರ ಹೃದಯಿಗಳಾದ ಕನ್ನಡಿಗರು ಸಕ್ರಿಯ ಸಹಾಯ ನೀಡಬೇಕಾಗಿ ಬಿನ್ನವಿಸುವೆ. ಕನ್ನಡಿಗರು ಮನಸ್ಸು ಮಾಡಿದರೆ, ಇದೊಂದು

ಸ್ಥಿರವಾದ ಲೋಕಸೇವಾ ಸಂಸ್ಥೆಯಾಗಿ ಬಾಳುವದರಲ್ಲಿ ಸಂಶಯುವಿಲ್ಲ. ಮುಂಚಿನಬಳ್ಳಿಯು ಕೈಕೊಂಡ ಈ ಕಾರ್ಯದಲ್ಲಿ ಸಕಲ ಸಜ್ಜನರ ಆಶೀರ್ವಾದಗಳೂ ಪರಮಾತ್ಮನ ಅನುಗ್ರಹವೂ ಆಗಲೆಂದು ಸರ್ವಾಂತರಾತ್ಮನಾದ ಶ್ರೀಹರಿಯಲ್ಲಿ ಪ್ರಾರ್ಥಿಸುವೆ.

ವಿಜಯ ದಶಮಿ
೨೬–೧೦–೫೫

ತಮ್ಮ ಸೇವಕ
**ಬಿಲ್ಗಿ ಬಿಂದುಮಾಧವ**

# ಮುನ್ನುಡಿ

ಖಾಲಿಲ ಜಿಬ್ರಾನನ ಈ ಕೃತಿರತ್ನವು ಕನ್ನಡದಲ್ಲಿ ಅನುವಾದವಾದುದರಿಂದ ಒಂದು ಮಹತ್ಕಾರ್ಯವಾದಂತಾಗಿದೆ.

ಕ್ರಿಸ್ತನು ಜಗತ್ತಿನ ಅವತಾರಿಕ ಪುರುಷರಲ್ಲೊಬ್ಬ. ಇಂಥವರ ಮಹಾ ಜೀವನವನ್ನು ಕಾವ್ಯವಸ್ತುವಾಗಿಸಿಕೊಂಡು ಹುಟ್ಟಿದ ಕೆಲವೇ ಮಹೋನ್ನತ ಕೃತಿಗಳಲ್ಲಿ ಜಿಬ್ರಾನನ ಈ ಕೃತಿಯೂ ಒಂದು. ಓರ್ವ ಮಹಾಕವಿಯು ಈ ಕೃತಿಯಲ್ಲಿ ಒಂದು ಮಹಾಜೀವನಕ್ಕೆ ತನ್ನ ಹೃದಯದ ಕನ್ನಡಿಯನ್ನು ಎತ್ತಿ ಹಿಡಿದಿದ್ದಾನೆ.

'ಪ್ರವಾದಿ' ಎಂಬ ಜಿಬ್ರಾನನ ಕೃತಿಯಲ್ಲಿ ಜಗತ್ತನ್ನು ಓರ್ವ ಮಹಾ ಪುರುಷನ ದೃಷ್ಟಿಕೋನದಿಂದ ನೋಡಿದ ಹವಣಿಕೆಯಿದೆ. 'ಮಾನವಪುತ್ರ-ಜೀಸಸ್'ದಲ್ಲಿ ಓರ್ವ ಮಹಾಪುರುಷನ ಜೀವನವನ್ನು ಜಗತ್ತಿನ ವಿವಿಧ ದೃಷ್ಟಿಕೋನಗಳಿಂದ ನೋಡಿದ ಉಪಕ್ರಮವಿದೆ.

ಈ ಉಪಕ್ರಮಕ್ಕೆ ಮೊದಲಿನಿಂದ ಬಂದ ಸಾಮಗ್ರಿಯಿದ್ದಿತು, ನಿಜ. ಕ್ರಿಸ್ತನ ಅನೇಕ ಶಿಷ್ಯರು ಬರೆದ ಚರಿತ್ರಗಳು ಉಪಲಬ್ಧವಾಗಿವೆ. ಜ್ಯೂ ಜನಾಂಗದ ಇತಿಹಾಸವೆಲ್ಲ 'ಪುರಾತನ ಉಲ್ಲೇಖನ'ದಲ್ಲಿ ಸಂಗ್ರಹಿತವಾಗಿದೆ. ಆದರೆ ಪರಂಪರೆಯೂ ಧರ್ಮಾಂಧತೆಯೂ ಬೆಳೆದು ಬಂದು ಕ್ರಿಸ್ತೀ ಧರ್ಮದ ಆಡಂಬರದಲ್ಲಿ ಕ್ರಿಸ್ತನೇ ಮುಚ್ಚಿಹೋಗಿದ್ದಾನೆ. ಜಿಬ್ರಾನನು ಈ ಎಲ್ಲ ಆವರಣಗಳನ್ನು ಬದಿಗೆ ಸರಿಸಿದ. ಕ್ರಿಸ್ತನ ದಿವ್ಯ ವ್ಯಕ್ತಿತ್ವವನ್ನು ಎದುರಿಗಿರಿಸಿಕೊಂಡು ಅದರ ಶುದ್ಧ ಚಿತ್ರಣಕ್ಕಾಗಿ ಇದ್ದ ಸಾಮಗ್ರಿಯನ್ನೆಲ್ಲ ಜಾಳಿಸಿ ಉಪಯೋಗಿಸಿದ. ಜೀವಾತ್ಮನ ಏಕಮೇವ ಅವತಾರವೆಂದು ಕ್ರಿಸ್ತನನ್ನು ಕ್ರಿಸ್ತೀ ಪಂಥದವರು ಬಗೆದರೆ, ಅನೇಕ ಅವತಾರಿಕ ಪುರುಷರಲ್ಲಿಯಂತೆ ಜೀಸಸ್‌ನಲ್ಲಿಯೂ ಜೀವಾತ್ಮನು ಅವತರಿಸಿದ್ದನೆಂದು ಜಿಬ್ರಾನನು ಸೂಚಿಸುತ್ತಾನೆ. ಜೀಸಸ್‌ನು ಈ ಕಾರಣದ ಮೂಲಕ 'ಮಾನವಾತೀತ ಮಾನವ'. ಸೆಗ್ಗಲಿ ಮುಳ್ಳುಗಂಟಿಗಳ ನಡುವಿಂದ ಗಗನಚುಂಬಿಯಾಗಿ ಬೆಳೆದ ದೇವದಾರು ವೃಕ್ಷ.

ಜಿಬ್ರಾನನು ಈ ಚರಿತ್ರವನ್ನು ಕಾಲಮಾಪಕ ರೀತಿಯಲ್ಲಿ ಬರೆಯ ಲಿಲ್ಲ. —ಜನನ, ಬಾಲ್ಯ, ತಾರುಣ್ಯ. ಮುಂತಾಗಿ. ಆದರೆ ಅವನು ಕಲ್ಪಿಸಿದ ವಿವಿಧ ಕೈಫಿಯತ್ತುಗಳ ಮೂಲಕ ಹಿಂದುಮುಂದಾದರೂ ಸಮಗ್ರ ಚರಿತ್ರೆಯು ನಮ್ಮ ಕಣ್ಣೆದುರು ಹಾಯ್ದುಹೋಗುತ್ತದೆ. ಜೀಸಸ್‌ನ ತಾಯಿ ಮೇರಿ ಹಾಗು ಆಕೆಯ ತಾಯಿ ಏನ್ನಾಳಿಂದ ಅವನ ಬಾಲ್ಯದ ವೃತ್ತಾಂತ ತಿಳಿಯು ತ್ತದೆ. ಅವನ ಶಿಷ್ಯರಿಂದ ಮುಂದಿನ ಜೀವನದ ಚಿತ್ರಣ ದೊರೆಯುತ್ತದೆ. ಪೈಲೇಟ್, ಸುಸಾನಾ ಮುಂತಾದವರಿಂದ ಅವನ ಮರಣದ ವೃತ್ತಾಂತ ಲಬ್ಧವಾಗುತ್ತದೆ.

ಜೀಸಸ್‌ನ ವ್ಯಕ್ತಿತ್ವದ ಅದ್ಭುತರಮ್ಯತೆಯು ಈ ತಂತ್ರದಿಂದ ಅತ್ಯಂತ ಮನೋಹರವಾಗಿ ಅರಳುತ್ತದೆ. ಅವನ ಶಿಷ್ಯವೃಂದದಿಂದ ಜೀಸಸ್‌ನ ಚಾಣ್ಮೆ ಹಾಗು ಸದ್ಗುಣಗಳೂ ದೈವಿಕತೆಯೂ ವ್ಯಕ್ತವಾದರೆ, ದಕ್ಷಿಣ ಲೆಬನಾನದ ಒಬ್ಬ ಕುರುಬ, ಜೆರೂಸಲೇಮದಲ್ಲಿಯ ಒಬ್ಬ ಮೊಟ್ಟೆಗಾರ ಮೊದಲಾದವರಿಂದ ಸಾಮಾನ್ಯರ ಮೇಲೆ ಅವನ ವ್ಯಕ್ತಿತ್ವವು ಮಾಡಿದ ಪರಿಣಾಮವು ವ್ಯಕ್ತವಾಗುತ್ತದೆ. ಮೊಟ್ಟೆಗಾರನು ಹೇಳುತ್ತಾನೆ: "ಅವನು ಹೇಳಿದ್ದೆಲ್ಲ ನನ್ನ ಮನಸ್ಸಿಗೆ ತಿಳಿಯುತ್ತಿದ್ದಿಲ್ಲ. ಆದರೆ ಆ ದನಿ ಮಾತ್ರ ನನ್ನ ಕಿವಿಗಳಿಗೆ ಅರ್ಥವಾಗುತ್ತಿತ್ತು!" ಜೀಸಸ್‌ನ ಶತ್ರುಗಳ ಕೈಫಿಯತ್ತುಗಳಲ್ಲಿ,—ದೇವಾಂಶವನ್ನು ಹೊರತಳ್ಳಿದ ಮಾನವೀಯ ಕುರುಡುತನವನ್ನು ನಾವು ಕಾಣುತ್ತೇವೆ. "ಅವನು ಸರಳ ಜನಜಂಗುಳಿಯ ಮನವನ್ನು ವಿಷಪೂರಿತ ವನ್ನಾಗಿಸಿದ್ದ" ಎಂದು ಕೈಪಸ್ ಪುರೋಹಿತನು ಹೇಳುತ್ತಾನೆ. ಎನಾಸ್ ಎಂಬ ಪುರೋಹಿತನೂ ದೂಷಿಸುತ್ತಾನೆ. "ಅವನು ನನ್ನ ಚೊಚ್ಚಿಲ ಹಾಗು ಒಬ್ಬನೇ ಒಬ್ಬನಾದ ಮಗನನ್ನು ಅಪಹರಿಸಿಬಿಟ್ಟಿದ್ದಾನೆ" ಎಂದು ಗ್ಯಾಲಿಲಿಯ ಒಬ್ಬ ವಿಧವೆ ಜೀಸಸ್‌ನನ್ನು ದ್ವೇಷಿಸುತ್ತಾಳೆ. "ನಮ್ಮ ಬಗ್ಗೆಯೂ ನಮ್ಮ ಅಜ್ಜ ಮುತ್ತಜ್ಜಂದಿರ ಬಗ್ಗೆಯೂ ಅವನು ಕೆಡುನುಡಿ ಗಳನ್ನೇ ಆಡುತ್ತಿದ್ದ" ಎಂದು ಒಬ್ಬ ಜ್ಯೂ ಮುದುಕ ದೂರುತ್ತಾನೆ. "ನಮ್ಮ ಸ್ತ್ರೀಯರ ದುಃಸ್ವಪ್ನಗಳ ವಿರುದ್ಧ ರೋಮವು ಬಾಳಿ ಬದುಕುವದು ಅವಶ್ಯದ ಮಾತಾಗಿದೆ" ಎಂದು ಜೀಸಸ್‌ನಿಗೆ ಮರಣದಂಡನೆ ವಿಧಿಸಿದ ಪೈಲೇಟ್ ಆತ್ಮಸಮರ್ಥನೆ ಮಾಡಿಕೊಳ್ಳುತ್ತಾನೆ.

ಜೀಸಸ್‌ನ ವ್ಯಕ್ತಿತ್ವದ ಅನಂತ ವಿವಿಧತೆ ಇದಕ್ಕೂ ಮನೋಹರವಾಗಿ ಮೂಡಿದೆ. ಒಬ್ಬ ಉತ್ತಮ ಗ್ರೀಕ್ ವೈದ್ಯನು ದುಃಖಿಸುತ್ತಾನೆ: "ಎಲ್ಲಕ್ಕೂ ಮಹತ್ತಮವೆನಿಸಿದ ವೈದ್ಯನು, ಕೇವಲ ಮಾರುಗಟ್ಟೆಯ ಮುಂದಿನ ಮಾತು ಗಾರನೆಂಬುದಕ್ಕೇ ಜೋಲುಬಿದ್ದುದು ನಿಜವಾಗಿಯೂ ಶೋಚನೀಯ." ಮಹತ್ತಮ ವೈದ್ಯನಾಗಬಹುದಾಗಿದ್ದ ಜೀಸಸ್‌ನ ಬಗ್ಗೆ ಗ್ರೀಕ ಕವಿ ರುಮ್ಯಾನಸ್ ಹೀಗೆ ಹೇಳುತ್ತಾನೆ: "ಒಂದು ಕಾಲದಲ್ಲಿ ನಾನು ಕವಿಯೆನಿಸಿ ಕೊಂಡಿದ್ದೆ; ಆದರೆ ಬೆಥನಿಯಲ್ಲಿ ಯಾವಾಗ ಅವನೆದುರು ಬಂದು ನಿಂತೆನೋ, ಆಗ ಸಕಲ ವಾದ್ಯ-ವಾದನಗಳ ಮೇಲೂ ಪ್ರಭುತ್ವವಿದ್ದವ ನೆದುರು ನಾನೊಬ್ಬ ಏಕದಾರಿಯವನಾಗಿದ್ದೆನೆಂಬುದು ನನಗೆ ಗೊತ್ತಾ ಯಿತು." ಇರಾಣಿ ವೇದಾಂತಿಯ ಸಮತಾಭಾವ, ಜ್ಯೋತಿಷಿ ಮೆಲಾ ಚೀಯ ಉಕ್ತಿ, ಒರ್ವ ತತ್ವಜ್ಞಾನಿಗಾದ ತನ್ನ ಶುಷ್ಕ ವೇದಾಂತದ ಅರಿವು, ಜ್ಯೋಥಮ್ ಎಂಬವನಿಗೆ ಜೀಸಸ್‌ನ ಏಕಾಕಿತ್ವದಲ್ಲಿ ಕಂಡು ಬಂದ ಸಾರ್ವ ಭೌಮತ್ವ,—ಇವೇ ಮೊದಲಾದ ಚಿತ್ರಗಳಿಂದ ಜೀಸಸ್‌ನ ವ್ಯಕ್ತಿತ್ವವು ಕಾಂತಿಯುತವಾಗುತ್ತದೆ.

ಜಿಬ್ರಾನನ ಉಪಮೆಗಳ ಕಾಂತಿ ಅನುಪಮವಾದುದು. ಆಗೀಗ ಒಂದು ಉಪಮೆಯನ್ನು ಉಪಯೋಗಿಸಿದರೆ ಅದು ನಮಗೆ ಒಂದು ಜೀವನದ ಮೂಲವನ್ನೇ ತೆರೆದು ತೋರಿಸುತ್ತದೆ. ಕ್ರಿಸ್ತನನ್ನು ಶಿಲುಬೆಗೇರಿಸಿದಾಗ ಅದನ್ನು ನೋಡಿದ ತಾಯಿ ಮೇರಿಯ ಮನಃಸ್ಥಿತಿ ಹೇಗಿತ್ತು? ಸುಸಾನಾಳ ಶಬ್ದಗಳಲ್ಲಿ ಜಿಬ್ರಾನ್ ಈ ಉಪಮೆಯನ್ನು ಜೋಡಿಸುತ್ತಾನೆ: "ಆಕೆಯ ಮುಖಮುದ್ರೆ ದುಃಖಿತ ಸ್ತ್ರೀಯಂತಿರಲಿಲ್ಲ; ಎಂದೆಂದಿಗೂ ಮಗುಗಳನ್ನು ಹಡೆಯುತ್ತಿದ್ದ ಹಾಗೂ ಹೂಳುತ್ತಿದ್ದ ಫಲವತ್ತಾದ ಭೂಮಾತೆಯಂತೆ ಅದು ಕಂಗೊಳಿಸುತ್ತಿತ್ತು."

ಗ| ದತ್ತಮೂರ್ತಿ ದೇಸಾಯಿಯವರು ಈ ಶ್ರೇಷ್ಠ ಕೃತಿಯನ್ನು ಸರಳವಾಗಿ, ಕಾವ್ಯಮಯವಾಗಿ ಅನುವಾದಿಸಿದ್ದಾರೆ. ಅವರ ಕವಿಹೃದಯ ಮರೆಗೆ ನಿಂತು ಈ ಅನುವಾದಕ್ಕೆ ತನ್ನ ಕಂಪನ್ನು ಕೂಡಿಸಿದೆ. ಜಿಬ್ರಾನನ ಸಾಹಿತ್ಯ ಅವರಿಂದ ಕನ್ನಡಕ್ಕೆ ಶೋಭಾಯುತವಾಗಿ ಬರುತ್ತಲಿದೆ. ಇದೊಂದು ಸಂತೋಷದ ವಿಷಯ. ಇಲ್ಲಲ್ಲಿ ಕೆಲವು ಹಳೆಯ ಹೆಸರುಗಳ ಉಚ್ಚಾರವನ್ನು

ಕನ್ನಡಲ್ಲಿ ಕಾಯಬೇಕಿತ್ತು. ಜ್ಯೂ-ಕ್ರಿಸ್ತೀ ಧರ್ಮಗಳ ಹಿನ್ನೆಲೆಯನ್ನು ಕುರಿತು ಒಂದು ಪೀಠಿಕೆಯನ್ನೂ ಬರುವ ಅನೇಕ ಪಾತ್ರಗಳ ವಾಸ್ತವಿಕ ಇಲ್ಲವೆ ಕಾಲ್ಪನಿಕ ಹಿನ್ನೆಲೆಯನ್ನು ಕುರಿತು ಟಿಪ್ಪಣಿಗಳನ್ನೂ ಬರೆಯಬೇಕಿತ್ತು. ಅಂದರೆ ಅನುವಾದವನ್ನು ಓದಿ ತಿಳಿಯಲು ಇನ್ನಿಷ್ಟು ಸುಗಮವಾಗುತ್ತಿತ್ತು. ಮುಂದಿನ ಆವೃತ್ತಿಯಲ್ಲಿ ಈ ಕೊರತೆಯನ್ನು ಅವರು ಪೂರೈಸಬೇಕೆಂದು ಬಿನ್ನವಿಸುತ್ತೇನೆ. ರಸವತ್ತಾದ ಅನುವಾದವನ್ನು ನೀಡಿದುದಕ್ಕಾಗಿ ಅವರನ್ನು ಅಭಿನಂದಿಸುತ್ತೇನೆ.

ಶೂನ್ಯಸಂಪಾದನೆಯ ಅಲ್ಲಮಪ್ರಭು, ಕುಮಾರವ್ಯಾಸನ ಕೃಷ್ಣ, ರತ್ನಾಕರವರ್ಣಿಯ ಭರತೇಶ,-ಇವರೊಡನೆ ಮಾನವಪುತ್ರ ಜೀಸಸ್‌ನೂ ಕನ್ನಡದಲ್ಲಿ ಮೆರೆಯುವನೆಂಬ ಬಗ್ಗೆ ಯಾವ ಸಂಶಯವೂ ಇಲ್ಲ.

ಕರ್ನಾಟಕ ಕಾಲೇಜು
ಧಾರವಾಡ
೨೩–೧೦–೧೯೫೫

**ವಿ. ಕೃ. ಗೋಕಾಕ**

# ಮು ಡಿ ಪು

ನನ್ನ ಬಾಳಿನ ಸುಳಿಗಾಳಿ-ಬಿರುಗಾಳಿಗಳೆರಡರಲ್ಲೂ
ಸವಿಗೆಡದಂತೆ ಸಂಸಾರನೌಕೆಯನ್ನು
ಸಾಗಿಸಿಕೊಂಡು ಬರುತ್ತಿರುವ
ಸ ಂ ಗಾ ತಿ
**'ಸುಲೋಚನ'ಗೆ—**

— ದತ್ತಮೂರ್ತಿ

# ನನ್ನ ನುಡಿ

"ನೀವು ಒಬ್ಬರನ್ನೊಬ್ಬರು ಪ್ರೇಮದಿಂದ ಕಾಣುತ್ತಿರುವಲ್ಲಿ, ಜೀವನದ ಮಾಧುರ್ಯದ ಬಗ್ಗೆ ಅಚ್ಚರಿಪಡುತ್ತಿರುವಲ್ಲಿ, ಒಳ್ಳೇ ಉಲ್ಲಾಸದಿಂದಿರುವಲ್ಲಿ, ನನ್ನನ್ನು ನೆನೆಸುತ್ತಿರುವಲ್ಲಿ, ಅಲ್ಲಿ ನನ್ನ ರಾಜ್ಯವಿದೆ" ಎಂದು ಆ ರಾಜ್ಯದ ರಾಜನಾದ "ಮಾನವ ಪುತ್ರ ಜೀಸಸ್" ನುಡಿದನೆಂದು ಹೇಳುತ್ತಿರುವ ಮಹಾಕವಿ, ವಿಲಕ್ಷಣ ಚಿತ್ರಕಾರ, ಅನುಪಮ ತತ್ವವೇತ್ತಾ, ಕಹ್ಲಿಲ ಗಿಬ್ರಾನ ಕಂಡ "ಮಾನವಪುತ್ರ ಜೀಸಸ್"ನನ್ನು 'ಕನ್ನಡಿ'ಸಿ ನನ್ನ ಕನ್ನಡ ಜನರೆದುರು ಇಡಲು ನನಗೆ ತುಂಬ ಆನಂದವೆನಿಸುತ್ತದೆ.

ಜೀಸಸ್‌ನ ಜೀವಮಾನದಲ್ಲಿ ಜೀವಿಸಿದ ಜನಗಳ— ಅವನನ್ನು ಹೊಗಳುವವರ ಹಾಗೂ ತೆಗಳುವವರ— ಅಭಿಪ್ರಾಯವನ್ನು ಕಹ್ಲಿಲ್ ಕವಿ ತನ್ನ ಅಮೃತವಾಣಿಯಿಂದ ಇಲ್ಲಿ ಮೂಡಿಸಿದ್ದಾನೆ. ಮಾನವ-ಮಾನವ ರಲ್ಲಿಯ ವಿಷಮತೆಯಳಿದು, ದಯೆ-ಸತ್ಯ-ಪ್ರೇಮಗಳ ಬೆಳಕಿನಲ್ಲಿ ಸಮರಸತೆ ಬೆಳೆದು, ಸಕಲ ಚರಾಚರ ವಸ್ತುಗಳಲ್ಲಿಯೂ ದೇವದೇವನ ಆ ಒಂದೇ ತಂತು ಮಿಡಿಯುತ್ತಿರುವುದನ್ನು ತಿಳಿದು, ಆ ಮಧುರಮಿಡಿತದಿಂದ ಅಮರ ಜೀವನವನ್ನನುಭವಿಸಲು ಈ 'ಮಾನವ ಪುತ್ರ' ಮಾನವರಿಗೆಲ್ಲ ಸಾರಿ ಸಾರಿ ಹೇಳುತ್ತಲಿದ್ದಾನೆ.

ಇಂಥ ಈ 'ಮಾನವ ಪುತ್ರ'ನನ್ನು, ಕನ್ನಡ ನಾಡಹಬ್ಬದ ಮಂಗಲ ಮುಹೂರ್ತವಾದ 'ಮಾನೋಮಿ' ದಿನವೇ ಕನ್ನಡಿಗರೆದುರಿಗೆ ಇಡುವಂತೆ ಮಾಡಿದ ನನ್ನ ಹಿರಿಯ ಮಿತ್ರ ಶ್ರೀ ಬುರ್ಲಿ ಬಿಂದುಮಾಧವರಿಗೂ, ಈ 'ಮಾನವ ಪುತ್ರ'ನಿಗೆ ಮುನ್ನುಡಿ ಬರೆದು ಮೆರಗು ತಂದುಕೊಟ್ಟ ಹಿರಿಯ ಮಿತ್ರ ಶ್ರೀ ಗೋಕಾಕ 'ವಿನಾಯಕ'ರಿಗೂ, ಮುದ್ದಾಗಿ ಮುದ್ರಿಸಿದ ಸಾಧನಾ ಮುದ್ರಣದವರಿಗೂ ನನ್ನ ಅಭಿನಂದನೆಗಳು

ಈ 'ಮಾನವ ಪುತ್ರ'ನನ್ನು ಕನ್ನಡಿಸಲು ಅಣತಿಯಿತ್ತು, ಆಶೀರ್ವದಿಸಿದ ಅಣ್ಣಾ 'ಅಂಬಿಕಾತನಯದತ್ತ'ರಿಗೆ ನಾನು ಚಿರಋಣಿ. ಸಕಲವಿಧದಲ್ಲೂ

ಪುಟ

# ೧. ಝುಬೇದಾನ ಮಗ ಜೇಮ್ಸ್

ಆ ವರ್ಷದ ವಸಂತಕಾಲದ ಒಂದು ದಿನದಲ್ಲಿ, ಜೆರುಸಲೇಮಿನ ದಾರುವ ಕಟ್ಟೆಯ ತಾಣದಲ್ಲಿ ನಿಂತು, ಜೀಸಸ್‌ನು ಜನಜಂಗುಳಿಯೆದುರು ಸ್ವರ್ಗಸಾಮ್ರಾಜ್ಯದ ಬಗ್ಗೆ ಮಾತನಾಡಿದನು.

ಆ ಸಾಮ್ರಾಜ್ಯಕ್ಕಾಗಿ ಹಾತೊರೆಯುವವರ ದಾರಿಯಲ್ಲಿ, ಕಂಟಕಗಳನ್ನೂ ಕಂದಕಗಳನ್ನೂ ತಂದೊಡ್ಡುವ ಅಕ್ಕರಿಗರನ್ನೂ ದಾಂಭಿಕರನ್ನೂ ಅವನು ಆರೋಪಿಸಿದನು; ಅವರನ್ನವನು ಅಲ್ಲಗಳೆದನು.

ಆ ಜನಜಂಗುಳಿಯಲ್ಲಿ ಇಂಥ ಅಕ್ಕರಿಗರನ್ನೂ ದಾಂಭಿಕರನ್ನೂ ಬೆನ್ನು ಕಟ್ಟುವ ಒಂದು ಗುಂಪಿದ್ದಿತು. ಅವರು ಜೀಸಸ್‌ನ ಮೇಲೂ, ನಮ್ಮೆಲ್ಲರ ಮೇಲೂ ಕೈಮಾಡಲು ಹವಣಿಸಿದರು.

ಆದರೆ ಜೀಸಸ್‌ನು ಅವರನ್ನು ತಪ್ಪಿಸಿ, ಬೇರೆ ಬದಿಗೆ ತಿರುಗಿ ನಗರದ ಉತ್ತರದ್ವಾರದೆಡೆಗೆ ಸಾಗಿಹೋದನು.

ಅವನು ನಮಗೆ ಹೀಗೆಂದ: ನನ್ನ ಕಾಲವಿನ್ನೂ ಸನ್ನಿಹಿತವಾಗಿಲ್ಲ. ಈ ಜಗವೆದುರು ನಾನು ಬಂದು ನಿಲ್ಲುವ ಮುನ್ನ ನಾನು ನಿಮಗೆ ಹೇಳಬೇಕಾದ ಇನ್ನೂ ಅನೇಕ ವಿಷಯಗಳಿವೆ; ಗೈಯಬೇಕಾದ ಇನ್ನೂ ಅನೇಕ ಕೃತಿಗಳಿವೆ.

ಆ ಬಳಿಕ ಅವನು, ನಲವು-ನಗೆದುಂಬಿದ ದನಿಯಲ್ಲಿ ಹೀಗೆ ನುಡಿದ: "ನಾವೀಗ ಉತ್ತರ ದೇಶಕ್ಕೆ ಹೋಗಿ ಅಲ್ಲಿ ವಸಂತವನ್ನು ಕಳೆಯೋಣ. ನನ್ನೊಡನೆ ಬೆಟ್ಟಗಳಿಗೆ ಬನ್ನಿ; ಈಗ ಚಳಿಗಾಲ ಕಳೆದಿದೆ, ಅಲ್ಲದೆ ಲೆಬನಾನದ ಹಿಮವು ಹಳ್ಳಗಳೊಡನೆ ಹಾಡಲೆಂದು ಕೊಳ್ಳಕ್ಕಿಳಿಯತೊಡಗಿದೆ. ಅಲ್ಲಿಯ ಹೊಲಗಳು, ತೋಟಪಟ್ಟಿಗಳು ಜಡತೆಯನ್ನು ಳಿದೆದ್ದು ಎಚ್ಚರಾಗಿ ತಮ್ಮ ಹೊಸ ಹಸಿರು ಪೈರುಗಳಿಂದ, ನಸನಳಿಸುವ ಫಲಗಳಿಂದ ಸೂರ್ಯನನ್ನು ಸ್ವಾಗತಿಸುತ್ತಲಿವೆ."

ಅವನು ಹೀಗೆಂದು ಮುಂದುಮುಂದೆ ನಡೆದ; ನಾವೆಲ್ಲ ಅವನನ್ನು ಹಿಂಬಾಲಿಸಿದೆವು. ಹೀಗೆಯೇ ಆ ದಿನ ಹಾಗೂ ಮರುದಿನ ಕೂಡ ನಾವು ಪ್ರಯಾಣ ಮಾಡಿದೆವು.

ಮೂರನೆಯ ದಿನ ಮಧ್ಯಾಹ್ನಕ್ಕೆ ನಾವು ಹೆರ್ಮನ್ ಪರ್ವತ ಶಿಖರವನ್ನು ತಲುಪಿದೆವು. ಆ ಶಿಖರದ ಮೇಲೆ ನಿಂತು ಅವನು ಕೆಳಗಿನ ಬಯಲು, ಊರುಗಳನ್ನು ನೋಡತೊಡಗಿದ.

ಆಗ ಅವನ ಮುಖವು ಪುಟಕ್ಕಿಟ್ಟ ಚಿನ್ನದಂತೆ ಬೆಳಗತೊಡಗಿತು. ಅವನು ತನ್ನ ಎರಡೂ ಕೈಗಳನ್ನೆತ್ತಿ ನಮಗಾಗಿ ನುಡಿದ: "ಅಕೋ, ಹಸಿರುಟ್ಟ ಭೂಮಿತಾಯಿಯನ್ನು ನೋಡಿ; ಇಕೋ ಈ ಹೊಳೆಹಳ್ಳಗಳು ಆ ಹಸಿರುಡಿಗೆಯ ಬೆಳ್ಳಿಯಂಚುಗಳಂತೆ ಹೊಳೆಯುತ್ತಿರುವುದನ್ನು ನೋಡಿ. ನಿಜವಾಗಿಯೂ ಭೂಮಿತಾಯಿ ಚೆಲುವೆ; ಅಂತೆಯೇ ಭೂಮಿತಾಯಿಯ ಮೇಲಿರುವುದೆಲ್ಲವೂ ಸುಂದರವೇ!

"ಆದರೆ ನೀವು ಕಾಣುತ್ತಿರುವ ಇದೆಲ್ಲದರಾಚೆಗೆ ಒಂದು ರಾಜ್ಯವಿದೆ; ಅಲ್ಲಿ ನನ್ನ ಆಳಿಕೆ. ನಿಮಗೆ ಬೇಕಾಗಿದ್ದರೆ, ನೀವು ಬಯಸುತ್ತಿದ್ದರೆ, ನೀವೂ ಅಲ್ಲಿ ಬಂದು ನನ್ನೊಡನೆ ಆ ರಾಜ್ಯವಾಳಬಹುದು. ಅಲ್ಲಿ ನನ್ನ ಮುಖಕ್ಕಾಗಲಿ, ನಿಮ್ಮ ಮುಖಗಳಿಗಾಗಲಿ ಮುಖವಾಡಬೇಕಿಲ್ಲ; ಖಡ್ಗವನ್ನಾಗಲಿ ರಾಜದಂಡವನ್ನಾಗಲಿ ನಾವು ಹಿಡಿಯಬೇಕಿಲ್ಲ. ಅಲ್ಲಿಯ ನಮ್ಮ ಪ್ರಜೆಗಳು ಸುಖವಾಗಿ ನಮ್ಮನ್ನು ಪ್ರೀತಿಸುತ್ತಾರೆ; ನಮಗಾಗಿ ಅವರಲ್ಲಿ ಭಯವಿಲ್ಲ."

ಜೀಸಸ್ ಹೀಗೆ ನುಡಿದೊಡನೆ, ಪೃಥ್ವಿಯ ಮೇಲಿನ ಎಲ್ಲ ರಾಜ್ಯ ಸಾಮ್ರಾಜ್ಯಗಳು, ಪಟ್ಟಣ, ಕೋಟೆ ಕೊತ್ತಳ, ಗೋಪುರಗಳು ನನ್ನ ಕಣ್ಣಿಗೆ ಕಾಣದಂತಾದವು. ನಾನು ಗುರುವನ್ನನುಸರಿಸಿ ಆತನ ಸಾಮ್ರಾಜ್ಯಕ್ಕೇ ಹೋಗಬೇಕೆಂದೇ ನನ್ನ ಹೃದಯದೊಳಗಿನೊಳಗೆ ದನಿಸುತ್ತಿತ್ತು.

ಅಷ್ಟರಲ್ಲಿ ಇಸ್ಕಾರಿಯಟ್‌ದ ಜುಡಾಸನು ಅಲ್ಲಿಗೆ ಬಂದನು. ಅವನು ನೆಟ್ಟಗೆ ಜೀಸಸ್‌ನ ಬಳಿಗೆ ನಡೆದುಬಂದು ಅವನನ್ನು ಕುರಿತು ಹೀಗೆ ನುಡಿದನು: "ನೋಡು, ಈ ಭೂ ಸಾಮ್ರಾಜ್ಯಗಳು ವಿಸ್ತಾರವಾದವುಗಳು. ಇಕೋ, ಈ ಡೇವಿಡ್, ಸಾಲೋಮನ್ನರ ನಗರಗಳೂ ರೋಮನ್ನರ ವಿರೋಧಿಗಳಾಗಿ ಬಾಳಿ ಬದುಕಿಯಾವು. ನೀನು ಜ್ಯೂ ಜನಾಂಗದ ರಾಜನಾದರೆ, ನಾವೆಲ್ಲ ನಮ್ಮ ಖಡ್ಗ ಢಾಲುಗಳೊಡನೆ ನಿನ್ನ ಜತೆಗೂಡಿ ನಿಲ್ಲುವೆವು. ಇದರಿಂದ ಪರದಾಸ್ಯವನ್ನೂ ಮೀರಿ ನಾವು ನಿಲ್ಲಬಲ್ಲೆವು."

ಈ ಮಾತು ಕೇಳಿದೊಡನೆ ಜೀಸಸ್‌ನು ಜುಡಾಸನ ಕಡೆ ತಿರುಗಿದನು;

ಅವನ ಮುಖವು ಕೋಪದಿಂದ ಕೆಂಪಗಾಗಿತ್ತು. ಮುಂಗಾರ ಗುಡುಗಿನಂತೆ ಭೀಕರವಾದ ಸ್ವರದಿಂದ ಅವನು ಹೀಗೆ ನುಡಿದ: "ತೊಲಗಾಚೆ ಶನಿಯೇ! ಈ ಕ್ಷುದ್ರ ರಾಜ್ಯವನ್ನು ಮೂರು ಗಳಿಗೆ ಆಳಲೆಂದೇ ನಾನು ಅಲ್ಲಿಂದಿಲ್ಲಿಗೆ ಬಂದಿರುವೆನೆಂದು ತಿಳಿದಿದ್ದೀಯಾ?

"ನಿನ್ನ ಕಣ್ಣಳವಿನ ಆಚೆಗೆ ನನ್ನ ಸಿಂಹಾಸನವಿದೆ. ಯಾರ ತೋಳುಗಳು ಸಮಗ್ರ ಭೂಖಂಡವನ್ನೇ ಅಪ್ಪಬಲ್ಲವೋ ಅವರು ಇಂಥ ಪರಿತ್ಯಕ್ತ ಹಾಗೂ ವಿಸ್ಮೃತ ಗೂಡಿನಲ್ಲಿ ಆಶ್ರಯಪಡೆವರೇ?

"ಜೀವಂತನು ಮೃತ-ವಸ್ತ್ರಧಾರಿಗಳಿಂದ ಮಾನೋನ್ನತಿಗಳನ್ನು ಪಡೆಯಬಲ್ಲನೆ?

"ನನ್ನ ರಾಜ್ಯವು ಈ ಇಹಪ್ರಪಂಚದ್ದಲ್ಲ; ನನ್ನ ಸಿಂಹಾಸನವು ನಿಮ್ಮ ಪೂರ್ವಜರ ಕಪಾಲಗಳ ಮೇಲೆ ಕಟ್ಟಿದ್ದಲ್ಲ.

"ನೀನು ಕಿಂಚಿತ್ತಾದರೂ ಆತ್ಮಸಾಮ್ರಾಜ್ಯಕ್ಕಾಗಿ ಹವಣಿಸುತ್ತಿದ್ದರೆ ನನ್ನಷ್ಟಕ್ಕೆ ನನ್ನನ್ನು ಬಿಟ್ಟು ನೀನಿಲ್ಲಿಂದ ಹೊರಟುಬಿಡು. ಮುನ್ನಿನ ಮುಕುಟಾಂಕಿತ ಮಸ್ತಕಗಳು ತಮ್ಮ ಗೋರಿಗಳಲ್ಲಿ ದರಬಾರ ನಡೆಸುತ್ತಿರುವ, ಹಾಗೂ ತಮ್ಮ ಪೂರ್ವಜರ ಅಸ್ಥಿಗಳಿಗೆ ಸನ್ಮಾನ ಸುರಿಸುತ್ತಿರುವ, ನಿನ್ನ ಮೃತಾತ್ಮರ ಗೂಡುಗಳೆಡೆಗೆ ನಡೆದುಬಿಡು.

"ನನ್ನ ಮಸ್ತಕವು ಅಮೃತಾಭಿಷೇಕವನ್ನು ಇಲ್ಲವೆ ನಿಮ್ಮ ಮುಳ್ಳು ಕಿರೀಟವನ್ನು ಶೋಧಿಸುತ್ತಿರುವಾಗ ನೀನು ನನಗೆ ನಿನ್ನ ಆ ಕೀಳುಕಿರೀಟದ ಆಶೆದೋರಿಸುವ ಧೈರ್ಯಮಾಡುವಿಯಾ?

"ವಿಸ್ಮೃತ ಕುಲವು ಕಂಡ, ಆ ಕನಸಿನ ಸಲುವಾಗಿಯಲ್ಲವೇ ನಾನು ನನ್ನ ಶಾಂತಿಕ್ಷಿತಿಜದ ಮೇಲೇರುತ್ತಿರುವ ನಿಮ್ಮ 'ಸೂರ್ಯ' ನಿಂದ ಕದಡದಿದ್ದುದು ಹಾಗೂ ನಿಮ್ಮ 'ಚಂದ್ರ'ನು ನನ್ನ ನೆರಳನ್ನು ನಿಮ್ಮ ಪಥದ ಮೇಲೆ ಕೆಡವದಂತೆ ಮಾಡಿದ್ದುದು?

"ಒಬ್ಬ ತಾಯಿಯ ಬಯಕೆಗಾಗಿಯಲ್ಲವೇ, ನಾನು ಅರ್ಭಕವಸನವನ್ನು ಕಳೆದೊಗೆದು ಪಾರಾಗಿ ತಿರುಗಿ ಬಯಲಿಗೆ ಬಂಧದ್ದು?

"ನಿಮ್ಮೆಲ್ಲರಲ್ಲಿ ತುಂಬಿದ ದುಃಖದ ಸಲುವಾಗಿಯಲ್ಲವೇ ನಾನಲ್ಲಿ ಆಳಲೆಂದು ನಿಲ್ಲದಿದ್ದುದು.

"ಇಸ್ಕಾರಿಯಟ್‌ದ ಜುಡಾಸನೇ ನೀನಾರು! ನೀನೆಲ್ಲಿಯವನು! ಏಕೀತೆರ ನನ್ನನ್ನು ವಿಲೋಭನೆಗೊಳಿಸುತ್ತೀ!

"ನಿಜವಾಗಿಯೂ ನೀನು ನನ್ನ ಆಳವನ್ನು ಅಳೆದು ನೋಡಿರುವಿಯಾ? ಈ ಕುಕ್ಷಕಲಿ ಸೇನಾನಾಯಕನಾಗಿ ಅದನ್ನು ಮುನ್ನಡೆಸಲು ನಾನು ತಕ್ಕವನೆಂದುಕೊಂಡಿರುವೆಯಾ? ನಿಮ್ಮ ದ್ವೇಷದಲ್ಲೇ ತಳವೂರಿದ ಹಾಗೂ ನಿಮ್ಮ ಭಯದಲ್ಲೇ ಮುನ್ನಡೆಯುತ್ತಿರುವ ಆ ವೈರಿಯ ವಿರುದ್ಧ ನಿಮ್ಮ ಘಸಾರುಂಡ ರಥಗಳನ್ನು ನಡೆಸಲು ನಾನೇ ತಕ್ಕವನೆಂದುಕೊಂಡಿರುವಿಯಾ?

"ನನ್ನ ಪದತಲದಲ್ಲಿ ಅಸಂಖ್ಯ ಜಂತುಗಳು ಹರಿದಾಡುತ್ತಲಿದ್ದರೂ ನಾನವುಗಳನ್ನು ವಿರೋಧಿಸಿಲ್ಲ; ಈ ಅಪಹಾಸ್ಯ ಕಂಡು ನಾನು ಬೇಸತ್ತಿದ್ದೇನೆ. ತಮ್ಮ ಕೋಟಿ ಕೊತ್ತಲಗಳೊಳಗೆ ನಾನೂ ಬಂದು ತಮ್ಮೊಡನೆ ಇರುತ್ತಿಲ್ಲವೆಂದು ನನ್ನನ್ನು ಪುಕ್ಕನೆಂದೆಣಿಸುವ ಈ ಪತಿತರಿಗಾಗಿ ಕನಿಕರಿಸಿ ನಾನು ಬೇಸತ್ತಿದ್ದೇನೆ.

"ಈ ತೆರ ನಾನು ಕೊನೆವರೆಗೂ ಕನಿಕರಿಸುತ್ತಲೇ ಇರಬೇಕಾದುದೂ ಕರುಣಾಜನಕವಾಗಿದೆ. ನಾನು ಉದಾರತರ ಮಾನವರು ವಾಸಿಸುತ್ತಿದ್ದ ವಿಶಾಲತರ ವಿಶ್ವದೆಡೆಗೆ ನನ್ನ ಪದಗತಿಯನ್ನು ಹೊರಳಿಸುವಂತಾಗಿದ್ದರೆ.... ಆದರೆ ಅದು ಹೇಗಾದೀತು?

"ನಿಮ್ಮ ಪಾದ್ರಿಗಳೂ, ನಿಮ್ಮ ಸಾಮ್ರಾಟರೂ ನನ್ನ ರಕ್ತವನ್ನೇ ಹೀರಲಿ. ನಾನಿಲ್ಲಿಂದ ಹೊರಡುವ ಮೊದಲು ಅವರು ತೃಪ್ತಿಪಡಲಿ. ನಿಯಮ ಗತಿಯನ್ನು ನಾನು ಬದಲಿಸದಿರಲಿ. ಮೌಢ್ಯವನ್ನು ನಾನು ಆಳದಿರಲಿ.

"ತನ್ನ ಮುಪ್ಪಿನಿಂದ ತಾನೇ ದಣಿವವರೆಗೂ ಅಜ್ಞಾನದ ಅವತಾರವೇ ಆಡುತ್ತಲಿರಲಿ.

"ಕುರುಡರು ಕುರುಡರನ್ನು ಕೈವಿಡಿದು ಕೂಪದೆಡೆಗೆ ಕರೆದೊಯ್ಯಲಿ.

"ಭೂಮಿತಾಯಿಗೆ, ತನ್ನ ಕಟು ಫಲದಿಂದಲೇ ತನ್ನ ಬಾಯಿ ಕಟ್ಟುವವರೆಗೆ, ಮೃತರು ಮೃತರನ್ನು ಹೂಳುತ್ತಲಿರಲಿ. ನನ್ನ ಸಾಮ್ರಾಜ್ಯವು ಈ ಪ್ರಪಂಚದ್ದಲ್ಲ. ನೀವು ಒಬ್ಬರನ್ನೊಬ್ಬರು ಪ್ರೇಮದಿಂದ ಕಾಣುತ್ತಿರುವಲ್ಲಿ, ಜೀವನದ ಮಾಧುರ್ಯದ ಬಗ್ಗೆ ಅಚ್ಚರಿಬಡುತ್ತಿರುವಲ್ಲಿ, ಒಳ್ಳೇ ಉಲ್ಲಾಸದಿಂದಿರುವಲ್ಲಿ, ನನ್ನನ್ನು ನೆನೆಸುತ್ತಿರುವಲ್ಲಿ, ಅಲ್ಲಿ ನನ್ನ ಸಾಮ್ರಾಜ್ಯವಿದೆ."

ಬಳಿಕ ಅವನು ಕೂಡಲೆ ಜುಡಾಸನೆಡೆಗೆ ತಿರುಗಿ ಹೀಗೆ ನುಡಿದ :

“ಏ ಮನುಷ್ಯ, ತೊಲಗಾಚೆ, ಸರಿಯತ್ತ, ನಿಮ್ಮ ರಾಜ್ಯಗಳೆಂದೂ ನನ್ನ ರಾಜ್ಯದಲ್ಲಿ ಬರಲಾರವು.”

† † †

ಇಷ್ಟೊತ್ತಿಗೆ ಸಂಜೆಯಾಯಿತು. ಅವನು ನಮ್ಮೆಡೆಗೆ ತಿರುಗಿ ಹೀಗೆಂದ: “ನಾವಿನ್ನು ಹೊರಡೋಣ; ರಾತ್ರಿಯಾಗುತ್ತ ಬಂತು. ನಮ್ಮೊಡನೆ ಬೆಳಕಿರುವಾಗಲೇ ಬೆಳಕಿನಲ್ಲಿ ನಾವು ನಡೆದುಬಿಡೋಣ.”

ಬಳಿಕ ಅವನು ಬೆಟ್ಟವಿಳಿಯತೊಡಗಿದ; ನಾವೆಲ್ಲ ಅವನನ್ನು ಹಿಂಬಾಲಿಸಿದೆವು. ಜುಡಾಸನೂ ಸ್ವಲ್ಪ ದೂರವಾಗಿ ನಮ್ಮನ್ನು ಹಿಂಬಾಲಿಸಿದ. ಬಯಲಿಗೆ ನಾವು ಬಂದು ಮುಟ್ಟಿದಾಗ ರಾತ್ರಿಯಾಗಿತ್ತು.

ಡಯಾಫನೀಸನ ಪುತ್ರ ಥಾಮಸನು ಜೀಸಸ್‌ನಿಗೆ ಹೀಗೆಂದ: “ಗುರುವೇ ಕತ್ತಲಾಯಿತು. ಇನ್ನು ನಮಗೆ ದಾರಿ ಕಾಣದಂತಾಯಿತು. ತಾವು ಬಯಸುತ್ತಿದ್ದರೆ ನಮ್ಮನ್ನು ಮುಂದಿನ ಹಳ್ಳಿಯ ಬೆಳಕಿನತ್ತ ಮುನ್ನಡೆಸು; ಅಲ್ಲಿ ನಮಗೆ ಆಹಾರ-ಆಶ್ರಯ ದೊರೆಯಬಹುದು.

ಜೀಸಸ್‌ನು ಥಾಮಸನ ಮಾತಿಗೆ ಹೀಗೆ ಉತ್ತರವಿತ್ತ: “ನೀವು ಹಸಿದಾಗ ನಾನು ನಿಮ್ಮನ್ನು ಮೇಲೆ ಎತ್ತರಕ್ಕೆ ಕರೆದೊಯ್ದೆ; ನಿಮ್ಮ ಹಸಿವೆ ಇನ್ನೂ ಹೆಚ್ಚಿದಾಗ ನಿಮ್ಮನ್ನು ಈ ಬಯಲಿಗಿಳಿಸಿಕೊಂಡು ಬಂದೆ. ಆದರೆ ಈ ರಾತ್ರಿ ನಾನು ನಿಮ್ಮೊಡನಿರುವಂತಿಲ್ಲ. ನನಗೆ ಏಕಾಂತಬೇಕಾಗಿದೆ.”

ಬಳಿಕ ಸಾಯ್‌ಮನ್ ಪೀಟರನು ಮುಂದೆ ಬಂದು ನುಡಿದ: “ಗುರುವೇ ಈ ಕತ್ತಲೆಯಲ್ಲಿ- ನಮ್ಮನ್ನು ಬಿಟ್ಟುಹೋಗಿ ನಾವು ಪಾಡು ಪಡುವಂತೆ ಮಾಡದಿರು- ಈ ಇಕ್ಕಟ್ಟಿನಲ್ಲಿ ನಾವೆಲ್ಲ ನಿನ್ನೊಡನಿರುವಂತೆ ನಮ್ಮನ್ನು ಕರುಣಿಸು. ಈ ಇರುಳು, ಇರುಳ ಛಾಯೆ ಬಹಳ ಹೊತ್ತಿರಲಾರದು; ನೀನು ನಮ್ಮೊಡನಿದ್ದರೆ ನಾವು ಬಹು ಬೇಗ ಪ್ರಭಾತವನ್ನು ಕಾಣಬಲ್ಲೆವು.”

ಜೀಸಸ್ ಮರುನುಡಿದ: “ಈ ರಾತ್ರಿಯಲ್ಲಿ, ನರಿಗಳಿಗೆ ತಮ್ಮ ಗುದ್ದುಗಳಿವೆ. ಹಾರುವ ಹಕ್ಕಿಗಳಿಗೆ ತಮ್ಮ ಗೂಡುಗಳಿವೆ; ಆದರೆ ಈ ಮಾನವ

ಪುತ್ರನಿಗೆ ತನ್ನ ತಲೆಯಿಡಲು ಈ ಪೃಥ್ವಿಯಲ್ಲಿ ತಾಣವಿಲ್ಲವಲ್ಲ. ಅವಶ್ಯವಾಗಿಯೂ ನಾನು ಏಕಾಕಿಯಾಗಿರಬೇಕಾಗಿದೆ. ನಾನು ನಿಮ್ಮನ್ನು ಕಂಡ ಆ ಸರೋವರದೆಡೆಗೆ ಮತ್ತೆ ನೀವು ನನ್ನನ್ನು ಕಾಣಬಯಸುತ್ತೀ-ರಲ್ಲವೇ ? ''

ಅವನನ್ನುಳಿದು ಹೊರಡುವ ಮನಸಿಲ್ಲದಿದ್ದರೂ, ನಾವು ಭಾರವಾದ ಹೃದಯದಿಂದ ಅವನನ್ನು ಬಿಟ್ಟು ಹೊರಹೊರಟೆವು.

ಅನೇಕಸಲ ನಾವು ತಡೆತಡೆದು ಆವನನ್ನು ತಿರುತಿರುಗಿ ನೋಡುತ್ತ ನಡೆದೆವು. ಆವನು ಏಕಾಂತ ಪ್ರಭುವಿನಂತೆ ಪಶ್ಚಿಮದೆಡೆಗೆ ಸಾಗುತ್ತಿರುವುದನ್ನು ನೋಡಿದೆವು.

ಹೀಗೆ ನಮ್ಮಿಂದ ಏಕಾಕಿಯಾದ ಅವನನ್ನು ಹೊರಳಿ ನೋಡದ ನಮ್ಮೊಳಗಿನ ಒಬ್ಬನೇ ಒಬ್ಬನೆಂದರೆ ಇಸ್ಕಾರಿಯೆಟದ ಜುಡಾಸ.

ಅಲ್ಲದೆ ಅಂದಿನಿಂದವನು ಸಿಡುಕು ಮೋರೆಯವನೂ, ದೂರಾದವನೂ ಆಗಿಬಿಟ್ಟ. ಅವನ ಕಣ್ಣುಕುಣಿಕೆಯಲ್ಲಿ ಏನೋ ಒಂದು ಭಯಂಕರತೆ ಇದ್ದು ದಾಗಿ ನನಗೆ ತಿಳಿದುಬಂತು.

## ೨. ಮೇರಿಯ ತಾಯಿ ಆ್ಯನಾ

ನನ್ನ ಮಗಳ ಮಗನಾದ ಜೀಸಸ್‌ನು ನಾಝರೆಥದಲ್ಲಿ ಜನೆವರಿ ತಿಂಗಳಲ್ಲಿ ಜನಿಸಿದನು. ಜೀಸಸ್‌ನು ಜನಿಸಿದ ಆ ರಾತ್ರಿ, ಮೂಡಣೆಡೆಯಿಂದ ಹಲವು ಜನ ನಮ್ಮಲ್ಲಿಗೆ ಬಂದರು. ಆವರು ಇರಾಣಿಯರು; ಮಿಡಿಯಾ ಸಿಟೀಜದ ಒಂಟೆ ಸವಾರರೊಡಗೂಡಿ ಎಸ್ಡ್ರಿಯಾಲೊನಕ್ಕೆ ಅವರು ಬಂದಿದ್ದು ಹಾಗೆಯೆ ಮುಂದೆ ಇಜಿಪ್ತಕ್ಕೆ ಅವರು ಹೋಗುವವರಿದ್ದರು. ಅವರಿಗೆ ಹಾಟೆಲ ದಲ್ಲಿ ತಂಗುವದಕ್ಕೆ ಸ್ಥಳ ದೊರೆಯದ್ದರಿಂದ ನಮ್ಮಲ್ಲಿ ಬಂದು ಇಳಿದು ಕೊಂಡಿದ್ದರು.

ಅವರನ್ನು ನಮ್ಮಲ್ಲಿ ಸ್ವಾಗತಿಸಿ, ನಾನವರಿಗೆ ಹೀಗೆಂದೆ: ''ಈ ರಾತ್ರಿ ನನ್ನ ಮಗಳು ಗಂಡು ಕೂಸನ್ನು ಹಡೆದಿದ್ದಾಳೆ. ಹೀಗಾಗಿ ಮನೆಯೊಡತಿಗೆ

ತಕ್ಕಂತೆ ನಿಮ್ಮನ್ನು ಸ್ವಾಗತಿಸಿ ಆತಿಥ್ಯಗೈಯುವುದರಲ್ಲಿ ನನಗೆ ಏನಾದರೂ ಕುಂದುಕೊರತೆಯುಂಟಾದರೆ ನೀವು ನನ್ನನ್ನು ಕ್ಷಮಿಸುವಿರೆಂದು ತಿಳಿಯುತ್ತೇನೆ. ”

ಆಶ್ರಯ ಕೊಟ್ಟುದಕ್ಕಾಗಿ ಅವರು ನನಗೆ ಧನ್ಯವಾದ ಕೊಟ್ಟರು. ಊಟ ಉಡಿಗೆ ಮುಗಿದ ಬಳಿಕ ಅವರು ನನಗೆಂದರು : “ ನಾವು ಹೊಸ ಕೂಸನ್ನು ನೋಡಲಾಸಿಸುವೆವು.

ನನ್ನ ಮಗಳು ಮೇರಿಯ ಕೂಸು ಕಣ್ಣಿಗೆ ಬಹಳ ಚೆಲುವಾಗಿತ್ತು; ಮೇರಿಯೂ ಚೆಲುವೆಯೇ ಇದ್ದಳು.”

ಆ ಇರಾಣಿಯರು ಬಂದು ಮೇರಿಯನ್ನೂ ಆಕೆಯ ಮಗುವನ್ನೂ ನೋಡಿದರು. ತಮ್ಮ ಚೀಲದೊಳಗಿಂದ ಬೆಳ್ಳಿ–ಬಂಗಾರ, ನಗ–ನಾಣ್ಯಗಳನ್ನು ತೆಗೆದು ಆ ಕೂಸಿನ ಚರಣದಡಿ ಅವನ್ನಿಟ್ಟರು. ಬಳಿಕ ಮೊಳಕಾಲೂರಿ ವಿಚಿತ್ರ ದನಿಯಿಂದ ಪ್ರಾರ್ಥನೆಗೈದರು. ಅದೇನೆಂದು ನಮಗೆ ತಿಳಿಯಲಿಲ್ಲ.

ಆಮೇಲೆ ನಾನವರನ್ನು ಅವರಿಗಾಗಿ ಸಿದ್ಧಪಡಿಸಿದ ಶಯ್ಯಾಗ್ರಹಕ್ಕೆ ಕರೆದೊಯ್ಯುತ್ತಿರುವಾಗ ಅವರು ತಾವು ಕಂಡದ್ದರ ಬಗ್ಗೆ ಏನೋ ಭಯಭೀತರಾಗಿದ್ದಂತೆ ಕಂಡುಬಂತು.

ಬೆಳಗಾದೊಡನೆ ಅವರು ನಮ್ಮ ಮನೆ ಬಿಟ್ಟು ಇಜಿಪ್ತದ ಹಾದಿ ಹಿಡಿದು ಹೊರಟು ಹೋದರು.

ಆದರೆ ಅವರು ಹೊರಡುತ್ತಿರುವಾಗ, ನನ್ನನ್ನು ಕರೆದು ಅವರು ಹೀಗೆ ನುಡಿದರು: “ಈ ಕೂಸು, ಕೇವಲ ಒಂದು ದಿನವಾದರೂ ಅದರ ಕಂಗಳಲ್ಲಿ ನಮ್ಮ ದೇವರಪ್ರಭೆ ಕಂಡಿತು; ಅದರ ತುಟಿಗಳಲ್ಲಿ ನಮ್ಮ ದೇವರ ನಗೆ ಕಂಡಿತು. ಈ ಕೂಸನ್ನು ನೀವು ಚೆನ್ನಾಗಿ ರಕ್ಷಿಸಿರಿ, ಮುಂದೆ ಅದು ನಿಮ್ಮೆಲ್ಲರನ್ನು ರಕ್ಷಿಸುವುದು.” ಹೀಗೆಂದು ನುಡಿದು ಅವರು ತಮ್ಮ ಒಂಟೆಗಳನ್ನೇರಿ ಮುಂದೆ ಸಾಗಿದರು. ಅವರನ್ನು ಮುಂದೆ ನಾವೆಂದೂ ನೋಡಲೇ ಇಲ್ಲ.

ಇಂತಹ ತುಂಬು ವಿಸ್ಮಯ, ಆಶ್ಚರ್ಯಜನಕವಾದ ತನ್ನ ಚೊಚ್ಚಲು

ಮಗನನ್ನು ಕಂಡು ಮೇರಿ ಮಾತ್ರ ಯಾಕೋ ಅಷ್ಟು ಸಂತಸಪಡಳೆದಂತೆ ತೋರಲಿಲ್ಲ.

ಅವಳು ತನ್ನ ಕೂಸಿನ ಕಡೆ ಬಹಳ ಹೊತ್ತು ನಿಟ್ಟಿಸುತ್ತ ಕೂಡುವಳು; ಬಳಿಕ ಅತ್ತ ಮುಖ ತಿರುಗಿಸಿ ಕಿಡಕಿಯಿಂದಾಚೆ, ಕನಸು ಕಾಣುತ್ತಿರುವವ ರಂತೆ, ನೀಲಗಗನವನ್ನು ನಿರೀಕ್ಷಿಸುತ್ತ ಕೂಡುವಳು.

ಹೀಗಾಗಿ, ಅವಳ ಮತ್ತು ನನ್ನ ನಡುವೆ ಆಳವಾದ ಕಂದಕ ಕಡಿದಂತಾಗಿದ್ದಿತು.

ಕೂಸು ಮೈಯಿಂದಲೂ ಮನದಿಂದಲೂ ಬೆಳೆದಿತು. ಅದು ಬೇರೆ ಮಕ್ಕಳುಗಳಿಗಿಂತ ವಿಶಿಷ್ಟವಾಗಿದ್ದಿತು. ಅವನು ಒಂಟಿಯಾಗಿರುತ್ತಿದ್ದುದಲ್ಲದೆ, ಕೈಮೀರಿದ ಹುಡುಗನಾಗಿದ್ದನು. ನಾನಂತೂ ಅವನನ್ನು ಆಳವಿನಲ್ಲಿಡಲು ಅಸಮರ್ಥಳಾಗಿದ್ದೆನು.

ಆದರೆ ಅವನು ಇಡೀ ನಾಝರೆಥದ ಅಚ್ಚು ಮೆಚ್ಚಾಗಿದ್ದನು; ಅದೇ ಕೆಂಬದು ನನಗೊಬ್ಬಳಿಗೆ ಮಾತ್ರ ಗೊತ್ತು.

ಆಗಾಗ್ಗೆ ಅವನು ಮನೆಯಲ್ಲಿಯ ಅನ್ನವನ್ನೊಯ್ದು ಬೀದಿ ಹೋಕರಿಗೆ ಕೊಟ್ಟು ಬಿಡುತ್ತಿದ್ದನು. ನಾನು ಅವನಿಗೆ ಕೊಟ್ಟ ಮಿಠಾಯಿಯನ್ನು ತಾನು ತಿನ್ನುವ ಬದಲು ಅವನು ತನ್ನ ಜತೆ ಹುಡುಗರಲ್ಲಿ ಹಂಚಿಬಿಡುತ್ತಿದ್ದನು.

ನಮ್ಮ ತೋಟದೊಳಗಿನ ಗಿಡಹತ್ತಿ ಹಣ್ಣು ಹರಿಯುತ್ತಿದ್ದನು; ಆದರೆ ತನಗೆ ತಿನ್ನಲಿಕ್ಕೆಂದು ಮಾತ್ರ ಅಲ್ಲ

ಅವನು ತನ್ನ ಜತೆ ಹುಡುಗರೊಡನೆ ಓಡುವ ಜಿದ್ದು ಕಟ್ಟುತ್ತಿದ್ದನು. ಕಾಲಲ್ಲಿ ಅವನು ಬಹಳ ಹಗುರಿದ್ದುದರಿಂದ ಅವನೇ ಮುಂದಾಗುತ್ತಿದ್ದನು. ಆದರೆ ಫಜಾರಗಟ್ಟಿಯನ್ನು ತನಗಿಂತ ಮೊದಲು ಜತೆಗಾರರೇ ಮುಟ್ಟ ಬೇಕೆಂದು ಅವನು ನಡುವೇ ತಡೆದು ನಿಲ್ಲುತ್ತಿದ್ದನು.

ಒಮ್ಮೊಮ್ಮೆ ಮಲಗಿಸಲೆಂದು ಹಾಸಿಗೆಗೆ ಅವನನ್ನು ಕರೆದೊಯ್ದಾಗ ಅವನು ಎನ್ನುತ್ತಿದ್ದ: "ನನ್ನ ತಾಯಿಗೂ, ಉಳಿದವರಿಗೂ, ಕೇವಲ ನನ್ನ ದೇಹ ಮಾತ್ರ ಮಲಗುತ್ತದೆಂದು ಹೇಳು. ನಾಳೆ ಬೆಳಗು ಬರುವವರೆಗೂ ನನ್ನ ಮನಸು ಅವರ ಮನಸಿನೊಡನೆ ಜತೆಯಾಗಿಯೇ ಇರುವದೆಂದು ಹೇಳು."

ಅವನು ಹುಡುಗನಾಗಿದ್ದಾಗ ಇನ್ನೂ ಅನೇಕ ಇಂತಹ ಆಶ್ಚರ್ಯಜನಕ

ಮಾತುಗಳನ್ನು ಹೇಳುತ್ತಿದ್ದ; ಈಗ, ನಾನು ತೀರ ಮುದುಕಿಯಾಗಿರುವದ ರಿಂದ ಅವೆಲ್ಲವೂ ನನಗೆ ನೆನಪುಳಿವಿಲ್ಲ. ಈಗ ಅವರು ಹೇಳುತ್ತಾರೆ: ಇನ್ನು ಆವನನ್ನು ನಾನು ನೋಡಲಾರೆನೆಂದು. ಆದರೆ ಆವರ ಮಾತನ್ನು ನಾನು ಹೇಗೆ ನಂಬಲಿ?

ಅವನ ನಗೆ,ಇನ್ನೂ ನನಗೆ ಕೇಳಿಸುತ್ತಲಿದೆ, ನನ್ನ ಮನೆ ಸುತ್ತು ಮುತ್ತು ಅವನ ಓಡಾಟದ ಹೆಜ್ಜೆ ಕೇಳಿಸುತ್ತಲಿದೆ. ಅಲ್ಲದೆ ಯಾವಾಗ ನಾನು ನನ್ನ ಮಗಳ ಕೆನ್ನೆಯನ್ನು ಮುತ್ತಿಡುವೆನೋ ಆಗೆಲ್ಲ ಅವನ ಮುದ್ದಿನ ಸವಿಯೇ ನನಗೆ ಅನುಭವವಾಗುತ್ತದೆ, ಅವನೇ ನನ್ನ ಬಗಲಲ್ಲಿ ಕೂತಂತೆನಿಸುತ್ತದೆ.

ಅವರೆ ಅವನ ತಾಯಿಯೇ ತನ್ನ ಚೊಚ್ಚಿಲ ಮಗನ ಬಗ್ಗೆ ನನ್ನೆದರು ಮಾತೆತ್ತದಿರುವುದು ಆಶ್ಚರ್ಯಕರವಲ್ಲವೆ? ಒಮ್ಮೊಮ್ಮೆ ಅವನ ತಾಯಿಗಿಂತ ನಾನೇ ಅವನನ್ನು ಹೆಚ್ಚು ಹಚ್ಚಿಕೊಂಡಿದ್ದೆನೆಂದೆನಿಸುತ್ತದೆ. ಮೊದಲಿ ನಂತೆಯೇ ಈಗೂ ಅವಳು ಕಂಚಿನ ಪ್ರತಿಮೆಯಂತೆ ಸ್ಥಿರವಾಗಿದ್ದಾಗ್ಯೂ, ನನ್ನ ಹೃದಯ ಮಾತ್ರ ಕರಗಿ ನೀರಾಗಿಹರಿಯುತ್ತದೆ.

ಒಂದುವೇಳೆ ನಾನರಿಯದುದರ ಅರಿವು ಆಕೆಗಿರಬೇಕು. ಆದರೆ ಅದನ್ನೇಕೆ ಆಕೆ ನನಗೆ ಹೇಳಬಾರದು?

## ೩. ಮೊದಲ ಮಾತುಗಾರ 'ಅಸಫ'

ಅವನ ಮಾತಿನ ಬಗ್ಗೆ ನಾನೇನು ಹೇಳಲಿ? ಒಮ್ಮೊಮ್ಮೆ ಅವನ ಪುರುಷನೇ ಅವನ ಶಬ್ದಗಳಿಗೆ ಶಕ್ತಿಯೀಯುತ್ತಿದ್ದು ಅವನ ಮಾತು ಕೇಳಿ ದವರೆಲ್ಲ ಅವನ ಪ್ರಭಾವಕ್ಕೊಳಪಡುತ್ತಿದ್ದರು. ಏಕೆಂದರೆ ಅವನು ಚೆಲುವ ನಾಗಿದ್ದನಲ್ಲದೆ ದಿನದ ಪ್ರಭೆ ಅವನ ಮುಖಮಂಡಲವನ್ನು ಬೆಳಗುತ್ತಿತ್ತು.

ಅವನ ವಾದವಿವಾದ ಕೇಳುವುದಕ್ಕಿಂತಲೂ, ಸ್ತ್ರೀಪುರುಷರು, ಅವನನ್ನೇ ಹೆಚ್ಚಾಗಿ ದಿಟ್ಟಿಸಿ ನೋಡುತ್ತಿದ್ದರು. ಒಮ್ಮೊಮ್ಮೆ ಅವನು ಆತ್ಮ ಶಕ್ತಿಯುತನಾಗಿ ಮಾತನಾಡುತ್ತಿದ್ದ. ಅವನ ಮಾತನ್ನು ಕೇಳಿದವರ ಮೇಲೆಲ್ಲ ಆ ಆತ್ಮವು ಅಧಿಕಾರಯುತವಾಗಿತ್ತು.

ನನ್ನ ಹರೆಯದ ಕಾಲದಲ್ಲಿ, ನಾನು, ರೋಮ್, ಅಥೆನ್ಸ್, ಹಾಗೂ ಅಲೆಕ್ಸಾಂಡ್ರಿಯಾದ ಭಾಷಣಕಾರರನ್ನು ಕಂಡಿದ್ದೇನೆ. ಆದರೆ ಈ ಯುವಕ ನಾಝರೀನನು ಅವರೆಲ್ಲರಿಗಿಂತಲೂ ವಿಶಿಷ್ಟತರದವನಾಗಿದ್ದಾನೆ. ಅವರು ನಮ್ಮ ಕಿವಿಗಳನ್ನು ಸೆರೆಹಿಡಿಯುವಂತೆ ಶಬ್ದಗಳನ್ನು ಹೆಣೆಯುತ್ತಿದ್ದರೆ, ಇವನ ಭಾಷಣ ಕೇಳಿದಾಗ, ನೀವು ನಿಮ್ಮನ್ನೇ ಮರೆತು ಯಾವದೋ ಒಂದು ಕಾಣದ ರಾಜ್ಯದಲ್ಲಿ ವಿಹರಿಸುತ್ತಿದ್ದಂತೆ ಆಗುವದು.

ಅವನು ಕಥೆ, ರೂಪಕಗಳನ್ನು ಹೇಳುತ್ತಿದ್ದ; ಅಂಥ ಕಥೆ-ರೂಪಕಗಳನ್ನು ಸಿರಿಯಾ ದೇಶದಲ್ಲೇ ನೀವು ಎಂದೂ ಕೇಳಿರಲಿಕ್ಕಿಲ್ಲ. ಕಾಲವು ವರ್ಷ, ತಲೆಮಾರುಗಳನ್ನು ಹೆಣೆಯುತ್ತಿದ್ದಂತೆ ಅವನು ಅವುಗಳನ್ನು ಋತುಮಾನ ಗಳಿಂದ ಹೆಣೆದುಕೊಳ್ಳುವಂತೆ ತೋರುತ್ತಿತ್ತು.

ಒಂದು ಕಥೆಯನ್ನು ಅವನು ಹೀಗೆ ಹೇಳಲು ಪ್ರಾರಂಭಿಸುತ್ತಿದ್ದ: "ಒಬ್ಬ ರೈತ ಬೀಜ ಬಿತ್ತಲಿಕ್ಕೆಂದು ಹೊಲದಕಡೆ ಹೊರಟ."

ಅಥವಾ "ಒಬ್ಬ ಸಿರಿವಂತನಿಗೆ ಅನೇಕ ದ್ರಾಕ್ಷಾವನಗಳಿದ್ದವು"

ಅಥವಾ ಒಬ್ಬ ಕುರುಬ ಸಂಜೆಗೆ ತನ್ನ ಕುರಿಗಳನ್ನೆಣಿಸಿದಾಗ ಒಂದು ಕುರಿ ಕಡಿಮೆಯಿತ್ತು."

ಇಂಥ ಮಾತುಗಳು ಅವನ ಕೇಳುಗರನ್ನು ಅವರ ಸರಳತರ ಸ್ವತಹದ ಆಳಕ್ಕೂ, ಅವರ ದಿನಮಾನದ ಪೂರ್ವ ಕಾಲಕ್ಕೂ ಕರೆದೊಯ್ಯುತ್ತಿದ್ದವು.

ಅಂತರಾಳದಲ್ಲಿ ನಾವೆಲ್ಲರೂ ರೈತರೇ, ದ್ರಾಕ್ಷಾವನಗಳನ್ನು ಪ್ರೀತಿಸು ವವರೇ. ನಮ್ಮ ನೆನಪಿನ ಹುಲ್ಲುಗಾವಲದಲ್ಲಿ, ಕುರುಬ, ಕುರಿಹಿಂಡು, ಹಾಗೂ ಕಳೆದ ಕುರಿ ಇದ್ದದ್ದೇ. ಅಲ್ಲದೆ ನೇಗಿಲ ಕುಳ, ದ್ರಾಕ್ಷಾಚಕ್ರ, ಕಾಳಿನ ಕಣ ಇದ್ದದ್ದೇ. ನಮ್ಮ ಪುರಾತನ ಆತ್ಮದ ಮೂಲ ಅವನಿಗೆ ಗೊತ್ತಿತ್ತು; ನಮ್ಮನ್ನೇ ನೆಯ್ದ ಛಲದ ನೂಲೂ ಅವನಿಗೆ ಗೊತ್ತಿತ್ತು.

ಗ್ರೀಕ ಹಾಗೂ ರೋಮನ್ ಮಾತುಗಾರರು, ತಮ್ಮ ಶ್ರೋತೃಗ ಳೆದುರು, ತಮ್ಮ ಮನಸಿಗೆ ತೋಚಿದ ಬದುಕಿನ ಬಗ್ಗೆ ಮಾತನಾಡುತ್ತಿದ್ದರು. ನಾಝರೀನನೋ, ಹೃದಯತಳದಲ್ಲಿ ನೆಲೆಗೊಂಡ ಆಕಾಂಕ್ಷೆಯ ಬಗ್ಗೆಯೇ ಮಾತನಾಡುತ್ತಿದ್ದ.

ಇವರು, ನಮ್ಮ-ನಿಮ್ಮಗಿಂತಲೂ, ಸ್ವಲ್ಪ ತಿಳಿಯಾದ ದೃಷ್ಟಿಯಿಂದ

ಬದುಕನ್ನು ನೋಡುತ್ತಿದ್ದರೆ, ನಾರ್ಝರೀನನು ದೈವೀ ಬೆಳಕಿನಲ್ಲಿ ಬದುಕನ್ನು ಕಂಡಿದ್ದ.

ಅವನು ಜನಜಂಗುಳಿಯೆದುರು ಮಾತನಾಡುತ್ತಿದ್ದಾಗ ಬೆಟ್ಟವೊಂದು ಬಯಲಿನೊಡನೆ ಮಾತನಾಡಿದಂತೆ ಆಗಾಗ ನನಗೆ ಅನಿಸುತ್ತಿತ್ತು.

ಅವನ ಮಾತಿನಲ್ಲಿ, ಈ ಅಥೇನ್ಸ್, ರೋಮುಗಳ ಭಾಷಣಕಾರರು ಪಡೆಯದ ಒಂದು ಅಪಾರ ಮಹಾಶಕ್ತಿಯಿತ್ತು.

## ೪. ಮೇರಿ ಮ್ಯಾಗ್ಡಾಲೀನ

ನಾನು ಅವನನ್ನು ಮೊತ್ತಮೊದಲು ಕಂಡುದು ಜೂನತಿಂಗಳಲ್ಲಿ. ನಾನು ನನ್ನ ಕೈಯಾಳುಗಳೊಂದಿಗೆ ಹೊರಟಿದ್ದಾಗ ಅವನು ಗೋದಿ ಹೊಲದಲ್ಲಿ ಏಕಾಕಿಯಾಗಿ ನಡೆದು ಬರುತ್ತಿದ್ದ.

ಅವನ ಪದಗತಿ ಉಳಿದವರಿಗಿಂತ ಬೇರೆಯೆ ಆಗಿತ್ತು, ಅವನ ಅಂಗಾಂಗ ಚಲನವಲನವು ನಾನು ಹಿಂದೆ ಎಂದೆಂದೂ ಕಂಡಿರದಂತಹದಾಗಿತ್ತು.

ಆ ರೀತಿಯ ಪದಗತಿ ಈ ಬುವಿಯ ಮಾನವರದಲ್ಲವೇ ಅಲ್ಲ. ಅವನ ನಡೆ ತೀವ್ರಗತಿಯಾಗಿತ್ತೋ, ಮಂದಗತಿಯಾಗಿತ್ತೋ, ಎಂಬದು ಈಗೂ ಕೂಡ ನನಗೆ ಖಚಿತವಾಗಿಲ್ಲ.

ನನ್ನ ಕೈಯಾಳುಗಳು ಅವನ ಕಡೆಗೆ ಬೆರಳುಮಾಡಿ ತೋರಿಸುತ್ತ ತಮ್ಮತಮ್ಮೊಳಗೇ ನಸು ಬೆದರಿಕೆಯಲ್ಲಿ ಪಿಸುಗುಟ್ಟುತ್ತಿರುವುದನ್ನು ಕಂಡೆ. ನಾನೂ ಕೂಡ ಚಣಕಾಲ ತಡೆದುನಿಂತು ಅವನನ್ನು ಅಭಿನಂದಿಸಲೆಂದು ಕೈಯೆತ್ತಿದೆ. ಆದರೆ ಅವನು ಮೋರೆದಿರುವಲಿಲ್ಲ; ಕಣ್ಣೆತ್ತಿ ನನ್ನನ್ನು ನೋಡಲಿಲ್ಲ. ಅವನ ಬಗ್ಗೆ ನನಗೆ ದ್ವೇಷಬಂತು. ನನ್ನೊಳಗೇ ನಾನು ಉಡುಗಿಹೋದೆ; ಬರ್ಫದಕುಂಡದಲ್ಲಿದ್ದಂತೆ ನಾನು ತಣ್ಣಗಾದೆ; ನನ್ನೊಳಗೇ ನಾನು ನಡುಗಿಹೋದೆ.

ಅದೇ ಇರುಳು ನಾನು ಅವನನ್ನು ಕನಸಿನಲ್ಲಿ ಕಂಡೆ; ಆ ಇರುಳು ನಿದ್ದೆಯಲ್ಲಿ ನಾನು ಚೀರಿದೆನೆಂದೂ, ಹಾಸಿಗೆಯಲ್ಲಿ ಒದ್ದಾಡುತ್ತಿದ್ದೆನೆಂದೂ ಮರುದಿನ ನನಗೆ ಹೇಳಿದರು.

ಅಗಷ್ಟ ತಿಂಗಳಲ್ಲಿ ಮತ್ತೊಮ್ಮೆ ನಾನವನನ್ನು ನನ್ನ ಕಿಡಕಿಯಲ್ಲಿಂದ ಕಂಡೆ. ಅವನು ನನ್ನ ತೋಟದಾಚೆ ಸೈಪ್ರಸ್ ಗಿಡದ ನೆರಳಿನಲ್ಲಿ ಕುಳಿತಿದ್ದ; ಕಲ್ಲಿನಲ್ಲಿ ಕಟೆದ ಮೂರ್ತಿಯಂತೆ ಅವನು ಅತ್ಯಂತ ನಿಶ್ಚಲನಾಗಿ ಕುಳಿತಿದ್ದ. ಆ ಭಂಗಿ ಆ್ಯಂಟಿಯೊಕ್ ಮತ್ತು ಇತರ ಉತ್ತರದೇಶದ ಪಟ್ಟಣಗಳಲ್ಲಿ ಕಟೆದ ಶಿಲಾಮೂರ್ತಿಯಂತಿತ್ತು.

ನನ್ನ ಇಜಿಪ್ಶಿಯನ್ ಗುಲಾಮ ನನ್ನೆಡೆಗೆ ಬಂದು ಹೇಳಿದ: "ಆ ಮನುಷ್ಯ ಮತ್ತೆ ಇಲ್ಲಿಗೆ ಬಂದಿದ್ದಾನೆ. ನಿಮ್ಮ ತೋಟದಾಚೆಗೆ ಅಲ್ಲಿ ಕುಳಿತಿದ್ದಾನೆ."

ನಾನು ಅವನತ್ತ ನೋಡಿದೆ. ನನ್ನ ಆತ್ಮವು ಒಳಗೊಳಗೇ ನಡುಗಿ ಬಿಟ್ಟಿತು; ಏಕೆಂದರೆ ಅವನು ಬಹಳ ಚೆಲುವನಾಗಿದ್ದ. ಅವನ ಶರೀರವು ಏಕಾಕಿಯಾಗಿದ್ದು ಅದರೊಳಗಿನ ಪ್ರತಿ ಒಂದು ಭಾಗವು ಇನ್ನೊಂದನ್ನು ಪ್ರೀತಿಸುವಂತಿತ್ತು.

ಕೂಡಲೆ ನಾನು ದಮಾಸ್ಕಸ್ ಬಟ್ಟೆಯಿಂದಲಂಕೃತಳಾಗಿ ನನ್ನ ಮನೆಬಿಟ್ಟು ಅವನೆಡೆಗೆ ಹೊರಟೆ.

ಅವನೆಡೆಗೆ ನನ್ನನ್ನು ಸೆಳೆದದ್ದು, ನನ್ನ ಏಕಾಕಿತನವೋ ಅಥವಾ ಅವನ ಸೌಗಂಧವೋ? ಸೌಂದರ್ಯದ ಬಯಕೆಯಿಂದ ನನ್ನ ಕಂಗಳೇ ಹಸಿದಿದ್ದವೋ ಅಥವಾ ಅವನ ಸೌಂದರ್ಯವೇ ನನ್ನ ಕಣ್ಣುಗಳನ್ನು ಸೆರೆಹಿಡಿಯಿತೊ? ಇಂದಿಗೂ ನನಗದು ತಿಳಿದಿಲ್ಲ.

ನಾನು ನನ್ನ ಗಮಗಮಿಸುವ ವಸ್ತ್ರಗಳೊಡನೆ, ಮತ್ತು ಹೊಂಬಣ್ಣದ ಪಾದತ್ರಾಣಗಳೊಡನೆ—ಈ ಪಾದತ್ರಾಣಗಳನ್ನು ರೋಮನ್ ಕ್ಯಾಪ್ಟನ್ನನೊಬ್ಬ ನನಗೆ ಕೊಟ್ಟಿದ್ದ–ಅವನೆಡೆಗೆ ಹೋದೆ. ಅವನ ಬಳಿಗೆ ಹೋದೊಡನೆ ನಾನೆಂದೆ: "ನಿನಗೆ ಸುಪ್ರಭಾತ"

ಅವನು ನುಡಿದ: "ನಿನಗೂ ಸುಪ್ರಭಾತ ಮಿರಿಯಮ್."

ಅವನು ನನ್ನನ್ನು ನೋಡಿದ. ಅವನ ಇರುಳ್ಗಂಗಳು, ನನ್ನನ್ನು ನೋಡಿದ ಹಾಗೆ ಇನ್ನಾವ ಮನುಷ್ಯನೂ ನನ್ನನ್ನು ನೋಡಿದ್ದಿಲ್ಲ. ಕೂಡಲೆ, ನಾನು ಬತ್ತಲ ಬುರಕಿಯಾಗಿದ್ದಂತೆ ಆಗಿ ತುಂಬಾ ನಾಚಿಬಿಟ್ಟೆ.

ಆದರೂ ಅವನು ನುಡಿದದ್ದು ಕೇವಲ 'ನಿನಗೂ ಸುಪ್ರಭಾತ' ಎಂದಿಷ್ಟೆ ಮಾತ್ರ.

ಬಳಿಕ ನಾನವನಿಗೆಂದೆ: "ನೀನು ನನ್ನ ಮನೆಗೆ ಬರುವದಿಲ್ಲವೆ? "

ಅವನೆಂದ: "ಈಗಾಗಲೇ ನಾನು ನಿನ್ನ ಮನೆಯೊಳಗಿಲ್ಲವೆ?"

ಅವನು ಹಾಗೆಂದುದು ಆಗ ನನಗೆ ಅರ್ಥವಾಗಲಿಲ್ಲ; ಈಗ ಅರ್ಥವಾಗಿದೆ.

ಅವನಿಗೆ ನಾನೆಂದೆ: "ನನ್ನೊಡನೆ ದ್ರಾಕ್ಷಾರಸ-ರೊಟ್ಟಿಗಳನ್ನು ಸ್ವೀಕರಿಸುವದಿಲ್ಲವೆ?

ಅವನೆಂದ: "ಆಗಲಿ ಮಿರಿಯಮ್, ಆದರೆ ಈಗಲ್ಲ "

ಈಗ ಅಲ್ಲ, ಈಗ ಅಲ್ಲ ಎಂದು ಅವನೆಂದ. ಆ ಎರಡೇ ಶಬ್ದಗಳಲ್ಲಿ ಸಾಗರದ ನಿಸ್ವನ ತುಂಬಿತ್ತು; ಮಾರುತನ ಹಾಗೂ ಮರಗಳ ನಿಸ್ವನ ತುಂಬಿತ್ತು. ಅವನು ನನಗೆ ಹೀಗೆಂದಾಗ ಜೀವನವು ಮರಣಕೆದುರು ನುಡಿದಂತಿತ್ತು.

ಏಕೆಂದರೆ, ಮಿತ್ರಾ ಕೇಳಿಲ್ಲಿ, ನಾನು ಸತ್ತಂತೆಯೇ ಇದ್ದೆ. ತನ್ನ ಆತ್ಮಕ್ಕೇ ಸೋಡಚೀಟಿಕೊಟ್ಟ ಹೆಂಗಸಿನಂತಾಗಿದ್ದೆ ನಾನು. ಈಗ ನೀನು ನನ್ನಲ್ಲಿ ಕಾಣುತ್ತಿದ್ದ 'ಆತ್ಮ'ದಿಂದ ಆಗ ನಾನು ಬಹುದೂರದಲ್ಲಿದ್ದೆ. ನಾನು 'ಸಕಲರಿಗೂ ಸಂಬಂಧಿಸಿದ್ದೆ; ಯಾರಿಗೂ ಸಂಬಂಧಿಸಿದ್ದಿಲ್ಲ' ಹೀಗಿದ್ದೆ. ಅವರು ನನ್ನನ್ನು ವಾರಾಂಗನೆಯೆನ್ನುತ್ತಿದ್ದರು ಸಪ್ತ ಪಿಶಾಚಿಗಳಿಂದ ಕೂಡಿದವಳೆನ್ನುತ್ತಿದ್ದರು. ನಾನು ಶಪಿಸಲ್ಪಟ್ಟಿದ್ದೆ; ದ್ವೇಷಿಸಲ್ಪಟ್ಟಿದ್ದೆ.

ಆದರೆ, ಯಾವಾಗ ಅವನ ಮುಂಬೆಳಗಿನ ಕಂಗಳು ನನ್ನ ಕಂಗಳನ್ನು ಕಂಡವೋ ಆಗ ನನ್ನ ಇರುವಿನ ಚಿಹ್ನೆಗಳೆಲ್ಲ ಬಾಡಿಹೋದವು. ನಾನು ಮಿರಿಯಮ್ಮನಾದೆ, ಕೇವಲ ಮಿರಿಯಮ್ಮ ತನ್ನ ಪರಿಚಿತ ಪೃಥ್ವಿಯನ್ನು ಕಳೆದುಕೊಂಡು ಹೊಸ ತಾಣದಲ್ಲಿ ತನ್ನನ್ನು ತಾನರಿತ ಹೆಣ್ಣಾದೆ.

ಮತ್ತೊಮ್ಮೆ ನಾನು ಅವನಿಗೆ ಹೀಗೆಂದೆ: "ನನ್ನ ಮನೆಯೊಳಗೆ ಬಂದುಬಿಡು, ನನ್ನ ದ್ರಾಕ್ಷಾರಸ ರೊಟ್ಟಿಗಳ ಊಟದಲ್ಲಿ ನೀನೂ ಭಾಗಿಯಾಗು."

ಅವನೆಂದ:—"ನಾನು ನಿನ್ನ ಅತಿಥಿಯಾಗಬೇಕೆಂದೇಕೆ ನೀನು ಕೇಳುತ್ತೀ?"

ನಾನೆಂದೆ: "ನನ್ನ ಮನೆಯೊಳಕ್ಕೆ ನೀನು ಬರಬೇಕೆಂದು ನಾನು ಬೇಡುತ್ತೇನೆ." ಅವನನ್ನು ಕರೆಯುವ ನನ್ನೊಳಗಿನ ಎಲ್ಲ ಹಸಿರು ನೆಲ, ಎಲ್ಲ ನೀಲ ಗಗನ—ಇವಿಷ್ಟೇ ಮಾತ್ರವಾಗಿತ್ತು.

ಬಳಿಕ ಅವನು ನನ್ನೆಡೆಗೆ ನೋಡಿದ; ಅವನ ಮಧ್ಯಾಹ್ನ ಕಂಗಳು ನನ್ನನ್ನು ನಿಟ್ಟಿಸುತ್ತಿದ್ದವು. ಅವನೆಂದ: "ನಿನಗೆ ಅನೇಕ ಪ್ರೇಮಿಗಳಿದ್ದಾರೆ; ಆದರೂ ನಾನೊಬ್ಬ ಮಾತ್ರ ನಿನ್ನನ್ನು ಪ್ರೀತಿಸುತ್ತೇನೆ. ಉಳಿದವರು ನಿನ್ನ ಸಾನ್ನಿಧ್ಯದಲ್ಲಿ ತಮ್ಮನ್ನೇ ತಾವು ಪ್ರೀತಿಸುತ್ತಾರೆ. ನಾನು ಮಾತ್ರ ನಿನ್ನೊಳಗಿನ ನಿನ್ನನ್ನು ಪ್ರೀತಿಸುತ್ತೇನೆ ತಮ್ಮ ವಯಸ್ಸಿಗಿಂತಲೂ ಮೊದಲೇ ಬಾಡಿ-ಹೋಗುವ ನಿನ್ನಲ್ಲಿಯ ಚೆಲುವನ್ನು ಆ ಉಳಿದವರು ಕಾಣುತ್ತಾರೆ. ನಾನು ಮಾತ್ರ ನಿನ್ನಲ್ಲಿ ಬಾಡದ ಚೆಲುವನ್ನು ಕಾಣುತ್ತೇನೆ; ಆ ಚೆಲುವು, ನಿನ್ನ ಮುಪ್ಪಿನಲ್ಲಿಯೂ ಕನ್ನಡಿಯಲ್ಲಿ ತನ್ನನ್ನೇ ತಾನು ನೋಡಿಕೊಳ್ಳಲು ಭಯ ಪಡಲಾರದು; ವಿಕಲ್ಪಗೊಳ್ಳಲಾರದು.

ನಾನೊಬ್ಬನೆ ಮಾತ್ರ ನಿನ್ನಲ್ಲಿಯ ಆ ಅದೃಷ್ಟವನ್ನು ಪ್ರೀತಿಸುತ್ತೇನೆ."

ಬಳಿಕ ಅವನು ಪಿಸುದನಿಯಲ್ಲಿ ಹೀಗೆ ನುಡಿದ: "ಈಗ ಹೊರಟು ಬಿಡು; ಈ ಸೈಪ್ರಸ್ ಮರವು ನಿನ್ನದಾಗಿದ್ದರೆ, ಹಾಗೂ ನಾನಿಲ್ಲಿ ಕೂಡುವುದು ನಿನಗೆ ಬೇಕಾಗಿರದಿದ್ದರೆ, ನಾನು ನನ್ನ ಹಾದಿಹಿಡಿದು ಹೊರಟು ಹೋಗುವೆ.

ಕೂಡಲೆ ನಾನು ಚೀರಿಕೊಂಡಂತೆ ಅವನಿಗೆಂದೆ: "ಗುರುವೇ, ನನ್ನ ಮನೆಯೊಳಕ್ಕೆ ಬಾ; ನಿನಗಾಗಿ ಹಾಕಲೆಂದು ನನ್ನಲ್ಲಿ ಧೂಪವಿದೆ, ನಿನ್ನ ಕಾಲು ತೊಳೆಯಲು ಬೆಳ್ಳಿತಟ್ಟೆಯಿದೆ. ನೀನು ಗುರುತಿಲ್ಲದವನಾಗಿದ್ದರೂ ಗುರುತಿಲ್ಲದವನಾಗಿಲ್ಲ. ನಾನು ನಿನಗೆ ಬಿನ್ನವಿಸುವೆ, ನನ್ನ ಮನೆಗೆ ಬಾ."

ಬಳಿಕ ಅವನು ಎದ್ದುನಿಂತ; ಋತುಗಳು ಹೊಲಗಳನ್ನು ನೋಡುವಂತೆ ನನ್ನೆಡೆಗೆ ನೋಡುತ್ತ ನಕ್ಕ. ಬಳಿಕ ಹೀಗೆಂದ: "ಸಕಲ ಜನರೂ ತನಗಾಗಿ ನಿನ್ನನ್ನು ಪ್ರೀತಿಸಿದ್ದಾರೆ. ನಾನು ನಿನಗಾಗಿ ಮಾತ್ರ ನಿನ್ನನ್ನು ಪ್ರೀತಿಸುವೆ."

ಆ ಮೇಲೆ ಅವನು ಹೊರಟು ನಡೆದ.

ಆದರೆ ಅವನು ಹೊರಟು ನಡೆದಂತೆ ಇನ್ನಾವ ಮಾನವನೂ ಹೊರಟು

ನಡೆದಿರಲಾರ. ಅದು ನನ್ನ ತೋಟದಲ್ಲಿ ಹುಟ್ಟಿ, ಮೂಡಣದೆಡೆಗೆ ಸಾಗಿದ ಉಸಿರಾಗಿತ್ತೇ? ಅಥವಾ ಪ್ರತಿಯೊಂದರ ಅಡಿಗಲ್ಲನ್ನೇ ಅಲುಗಾಡಿಸಿ ಬಿಡುವ ಬಿರುಗಾಳಿಯಾಗಿತ್ತೇ?

ನನಗದು ತಿಳಿಯಲಿಲ್ಲ. ಆದರೆ ಆ ದಿನವೇ, ನನ್ನೊಳಗಡಗಿದ್ದ ನಖಪಕ್ಷಯುಕ್ತ ಘಟಸರ್ಪವನ್ನು ಅವನ ಕಂಗಳ ಸೂರ್ಯಾಸ್ತವು ಕೊಂದು ಬಿಟ್ಟಿತ್ತು; ಅಂದೇ ನಾನು ಸ್ತ್ರೀಯಾದೆ, ಮಿರಿಯಮ್‌ಳಾದೆ, ಮಿಜ್ಡೆಲ್‌ದ ಮಿರಿಯಮ್ಮನಾದೆ.

## ೫. ಗ್ರೀಕ ರಸತಂತ್ರಜ್ಞ ಫಿಲೇಮನ್

ಆ ನಾಝರೀನನು ತನ್ನ ಜನರ ವೈದ್ಯಗುರುವಾಗಿದ್ದ. ನಮ್ಮ ದೇಹದ, ಅದರ ಅವಯವಗಳ, ಹಾಗೂ ಅದರ ಲಕ್ಷಣಗಳ ಬಗ್ಗೆ ಅವನು ಅರಿತಿದ್ದಷ್ಟು ಇನ್ನಾವನೂ ಅರಿತಿದ್ದಿಲ್ಲ.

ಗ್ರೀಕರಿಗೂ ಇಜಿಪ್ಶಿಯನ್ನರಿಗೂ ತಿಳಿಯದ ಅನೇಕ ರೋಗಗಳು ಅಂಟಿದ್ದ ರೋಗಿಗಳನ್ನು ಅವನು ಗುಣಪಡಿಸಿದ. ಸತ್ತವರನ್ನೂ ಅವನು ಜೀವಂತಗೊಳಿಸಿದನೆಂದು ಹೇಳುತ್ತಾರೆ. ಇದು ನಿಜವಿರಲಿ, ಸುಳ್ಳಿರಲಿ, ಅದು ಅವನ ಸಾಮರ್ಥ್ಯವನ್ನು ಸಾರುತ್ತದೆ. ಏಕೆಂದರೆ ಮಹಾ ಕೃತಿಗಳನ್ನು ಗೈದವನಿಗೇ ಮಹತ್ತವು ಸಮರ್ಪಿಸಲ್ಪಡುತ್ತದೆ.

ಜೀಸಸ್‌ನು, ಭಾರತವನ್ನೂ ಮತ್ತು ನದಿದ್ವಯಗಳ ನಡುವಿನ ದೇಶವನ್ನೂ ಕಂಡು ಬಂದಿದ್ದನೆಂದೂ ಅಲ್ಲಿಯ ಆಚಾರ್ಯರು, ಈ ನಮ್ಮ ಮಾಂಸಮಯ ದೇಹದಲ್ಲಡಗಿದ ಗುಟ್ಟಿನ ತಿಳಿವನ್ನೆಲ್ಲ ಅವನಿಗೆ ತಿಳಿಸಿ ಹೇಳಿದ್ದರೆಂದೂ ಹೇಳುತ್ತಾರೆ.

ಆದರೂ ಅವನಿಗೆ ಆ ತಿಳಿವು ದೇವರಿಂದ ನೇರವಾಗಿ ಬಂದಿತ್ತಲ್ಲದೆ ಆಚಾರ್ಯರಿಂದಿರಲಾರದು. ಏಕೆಂದರೆ ಅನಾದಿಕಾಲದಿಂದಲೂ ಸಕಲ ಮಾನವರಿಗೆ ಅಗಮ್ಯವಾಗಿ ಉಳಿದಿದ್ದ ಅದು, ಒಬ್ಬನಿಗೆ ಕೇವಲ ಒಂದೇ ಕ್ಷಣದಲ್ಲಿ ತೆರೆದು ತಿಳಿದಿರಲಾರದು. ಮಹಾ ಶಕ್ತಿದೇವತೆ (ಅಪೋಲೋ)

ಮೂಢನ ಎದೆಯ ಮೇಲೆ ಹಸ್ತವಿರಿಸಿ ಅವನನ್ನು ಜ್ಞಾನಿಯನ್ನಾಗಿ ಮಾಡಬಲ್ಲದು.

ಜಿರಿಯನ್ನರಿಗೂ, ಥೀಬಾನರಿಗೂ ಅನೇಕ ದ್ವಾರಗಳು ತೆರೆದಿದ್ದವು, ಹಾಗೆಯೇ ಈ ಮನುಜನಿಗೂ ಹಲಕೆಲವು ಮುದ್ರಿತ ದ್ವಾರಗಳು ತೆರೆದಿದ್ದವು. ಆತ್ಮದ ದೇಗುಲವಾಗಿದ್ದ ಈ ದೇಹದಲ್ಲಿ ಅವನು ಪ್ರವೇಶಿಸಿದ್ದ. ನರಮಂಡಲದೊಡನೆ ಒಳಸಂಚು ನಡೆಸಿದ ಅಲ್ಲಿಯ ದುಷ್ಟಚೇತನಗಳನ್ನೂ, ಮತ್ತು ಅಲ್ಲಿಯ ನೂಲನೇಕಾರಿತಿಯಾಗಿದ್ದ ಸತ್ ಚೇತನಗಳನ್ನು ಅವನು ನಿಟ್ಟಿಸಿ ನೋಡಿದ್ದ.

ಅವನು, ವಿರೋಧ ಹಾಗೂ ನಿರೋಧ ಶಕ್ತಿಯಿಂದ ರೋಗಿಗಳನ್ನು ಗುಣಪಡಿಸುತ್ತಿದ್ದನೆಂದು ನಾನೆಣಿಸುತ್ತೇನೆ; ಆದರೆ ಆ ರೀತಿಮಾತ್ರ ನಮ್ಮ ತತ್ವಜ್ಞಾನಿಗಳಿಗೆ ಅಗಮ್ಯವಾಗಿತ್ತು. ಅವನು ತನ್ನ ಮಂಜಿನಂತಹ ಕರಗಳಿಂದ ಮುಟ್ಟಿ, ಜ್ವರವನ್ನಿಳಿಸಿ ಅಚ್ಚರಿಗೊಳಿಸುತ್ತಿದ್ದ. ತನ್ನ ಶಾಂತಿಯಿಂದ, ಬಿರುಸುಗೊಂಡ ಅವಯವಗಳನ್ನು ಸೋಂಕಿದಾಗ ಅವು ಇವನಿಗೆ ವಶವಾಗಿ ಮಿದುವಾಗುತ್ತಿದ್ದುದರಿಂದ ರೋಗಿಗೆ ಶಾಂತಿಲಭಿಸುತ್ತಿತ್ತು.

ನಿರಿಗೆಗಟ್ಟಿದ ಒಣತೊಗಟೆಯಲ್ಲಿಯೂ ಇಳಿಮುಖದ ರಸವಿದೆಯೆಂಬುದು ಅವನಿಗೆ ಗೊತ್ತಿತ್ತು! ಆದರೆ ಅವನು ತನ್ನ ಬೆರಳುಗಳಿಂದ ಆ ರಸವನ್ನು ಹೇಗೆ ಸೋಂಕುತ್ತಿದ್ದನೋ ನನಗೆ ತಿಳಿಯದು. ಮಣ್ಣಿನ ಆಳದಲ್ಲಿ ಶುದ್ಧ ಉಕ್ಕು ಅಡಗಿದೆಯೆಂಬುದು ಅವನಿಗೆ ಗೊತ್ತಿತ್ತು; ಆದರೆ ಅವನು ಆ ಆಯುಧವನ್ನು ಹೇಗೆ ಹೊರದೆಗೆದು ಹೊಳೆಯುವಂತೆ ಮಾಡಿದನೋ, ಯಾರಿಗೂ ತಿಳಿಯದು.

ಕೆಲಕೆಲವು ಸಲ ನನಗೆ ಹೀಗೆನಿಸುತ್ತದೆ: ದಿನಮಾನದಲ್ಲಿ ಬೆಳೆಯುತ್ತಲಿರುವ ಸಕಲವಸ್ತುಗಳ ನೋವಿನ ನರಳುವಿಕೆಯನ್ನು ಅವನು ಕೇಳಿದ್ದ; ಆಗ ಅವನು ಕೇವಲ ತನ್ನ ಜ್ಞಾನಬಲದಿಂದಷ್ಟೇ ಅಲ್ಲದೆ, ಆ ವಸ್ತುಗಳಲ್ಲಡಗಿದ ಅವುಗಳ ಶಕ್ತಿಯನ್ನು ಅವಕ್ಕೆ ತೋರಿಸಿ ಕೊಟ್ಟು, ಅವುಗಳನ್ನು ಎತ್ತಿ ಹಿಡಿದು ಅವುಗಳಿಗೆ ಬೆಂಬಲಕೊಟ್ಟು, ಅವು ಉತ್ಥಾನ ಹೊಂದಲಿಕ್ಕೂ ಸುಸಂಪೂರ್ಣವಾಗಲಿಕ್ಕೂ ನೆರವಾಗುತ್ತಿದ್ದ.

ಆದರೂ, ತಾನೊಬ್ಬ ವೈದ್ಯನೆಂಬ ಬಗ್ಗೆ ಅವನದು ಅವನಿಗೆ ಸಾಕಷ್ಟು

ಎನಿಸುತ್ತಿದ್ದಿಲ್ಲ. ಈ ನಾಡಿನ ರಾಜಕಾರಣ ಧರ್ಮಗಳು ಅವನನ್ನು ಮೊದಲೇ ಆಕ್ರಮಿಸಿ ಬಿಟ್ಟಿದ್ದವು. ಎಲ್ಲಕ್ಕೂ ಮೊದಲು ದೇಹದಿಂದ ಭದ್ರರಾಗಿರಬೇಕೆಂಬದು ನನ್ನ ತಿಳಿವಳಿಕೆಯಾದುದರಿಂದ ಅವನ ಈ ರೀತಿ ನನಗೆ ಹಿಡಿಸಲಿಲ್ಲ.

ಆದರೆ ಈ ಸಿರಿಯುನ್ನರು, ರೋಗಿಗಳು ಭೆಟ್ಟಿಯಾದಾಗ ಮದ್ದಿಗಿಂತಲೂ ಮಾತಿಗೇ ಮೊದಲುಮಾಡುತ್ತಾರೆ.

ಇವರಲ್ಲಿಯ ಎಲ್ಲಕ್ಕೂ ಮಹತ್ತ್ವವೆನಿಸಿದ ವೈದ್ಯನು, ಕೇವಲ ಮಾರು ಕಟ್ಟೆಯ ಮುಂದಿನ ಮಾತುಗಾರನೆಂಬುದಕ್ಕೇ ಜೋಲು ಬಿದ್ದುದು ನಿಜವಾಗಿಯೂ ಶೋಚನೀಯ.

## ೬. ಪೀಟರನೆಂದು ಕರೆಯಲ್ಪಟ್ಟ ಸ್ಯಾಮನ್

ಗ್ಯಾಲಿಲಿ ಸರೋವರದ ದಂಡೆಯ ಮೇಲೆ ನಾನು ಕುಳಿತ್ತಿದ್ದಾಗ, ನನ್ನ ಪ್ರಭುವೂ, ನನ್ನ ಗುರುವೂ ಆದ ಜೀಸಸ್‌ನನ್ನು ಮೊಟ್ಟಮೊದಲು ನಾನು ಕಂಡೆ. ನನ್ನ ಜತಗೆ ನನ್ನ ತಮ್ಮ ಆ್ಯಂಡ್ರ್ಯೂ ಇದ್ದ. ಸರೋವರಕ್ಕೆ ಮೀನು ಹಿಡಿಯಲೆಂದು ನಾವು ಬಂದಿದ್ದೆವು. ತೆರೆಗಳ ಏರಿಳಿತವು ಹೆಚ್ಚಾಗಿದ್ದುದರಿಂದ ನಮಗೆ ಸ್ವಲ್ಪೇ ಮೀನು ಸಿಕ್ಕಿದ್ದವು. ಹೀಗಾಗಿ ನಾವು ವಿವಂಚನೆಗೊಳಗಾಗಿದ್ದೆವು. ಒಮ್ಮಿಲೆ ಆಕಾರವೇ ವ್ಯವೆತ್ತಂತೆ ಜೀಸಸ್ ನಮ್ಮೆದುರಿಗೆ ಒಡಮೂಡಿದ; ಏಕೆಂದರೆ ಅವನು ಬರುವುದನ್ನು ನಾವು ನೋಡಿರಲಿಲ್ಲ. ಅವನು ನಮ್ಮನ್ನು ಹೆಸರುಗೊಂಡು ಕರೆದು ಹೀಗೆನುಡಿದ: "ನೀವು ನನ್ನೊಡನೆ ಬಂದರೆ, ಮೀನು ಹಿಂಡು ಹಿಂಡಾಗಿರುವ ಕೊಲ್ಲಿಯನ್ನು ನಿಮಗೆ ತೋರಿಸುವೆ."

ನಾನು ಅವನ ಮುಖದೆಡೆಗೆ ನೋಡಿದೊಡನೆ ನನ್ನ ಕೈಯಲ್ಲಿಯ ಜಾಳಿಗೆ ಕಳೆಚಿಬಿತ್ತು. ಏಕೆಂದರೆ ಆ ಕೂಡಲೆ ನನ್ನೊಳಗೊಂದು ಬೆಳಕು ಬೆಳಗಿತು; ನಾನು ಅವನನ್ನು ಗುರುತಿಸಿದೆ.

ನನ್ನ ತಮ್ಮ ಆ್ಯಂಡ್ರ್ಯೂ ಹೀಗೆ ನುಡಿದ: "ಈ ದಂಡೆಗುಂಟಿರುವ ಎಲ್ಲ ಕೊಲ್ಲಿಗಳೂ ನಮಗೆ ಗೊತ್ತಿವೆ. ಅಲ್ಲದೆ ಈ ಬಿರುಗಾಳಿ ಹೊತ್ತಿನಲ್ಲಿ ಮೀನು

ಗಳು ನಮ್ಮ ಜಾಳಿಗೆಗೆ ನಿಲುಕದೆ ಹೆಚ್ಚು ಆಳದ ನೀರಿನಲ್ಲಿ ಹೋಗಿರುತ್ತವೆ."

ಜೀಸಸ್ ಮಾರ್ನುಡಿದ: "ಮಹತ್ತರ ಸಾಗರದ ದಂಡೆಗೆ ನನ್ನೊಡನೆ ಬನ್ನಿ. ನಾನು ನಿಮ್ಮನ್ನು ಮನುಜರ ಮೀನುಗಾರರನ್ನಾಗಿ ಮಾಡುತ್ತೇನೆ. ಆಗ ನಿಮ್ಮ ಜಾಳಿಗೆ ಎಂದೂ ತೆರವಾಗಿರುವದಿಲ್ಲ."

ನಮ್ಮ ದೋಣಿ ಜಾಳಿಗೆಗಳನ್ನು ಳಿದು ನಾವೆಲ್ಲ ಅವನನ್ನು ಹಿಂಬಾಲಿಸಿದೆವು. ಅವನ ವ್ಯಕ್ತಿಮತ್ತೆಯ ಶಕ್ತಿಯಿಂದ ಎಳೆಯಲ್ಪಟ್ಟ ನಾನು ಹಿಂದು ಮುಂದರಿಯದೆ ಅವನನ್ನು ಹಿಂಬಾಲಿಸಿ ಹೊರಟೆ. ಆಶ್ಚರ್ಯ ಚಕಿತನೂ ಕೊರಳು ಬಿಗಿದವನೂ ಆಗಿ ಅವನ ಸಮೀಪದಲ್ಲಿ ನಾನು ನಡೆಯುತ್ತಿದ್ದೆ; ನನ್ನ ತಮ್ಮ ಆ್ಯಂಡ್ರ್ಯು ಚಕಿತನೂ ಕುಪಿತನೂ ಆಗಿ ಹಿಂದೆ ಹಿಂದೆಬರುತ್ತಿದ್ದ.

ನಾವು ಹಾಗೇ ಮಳಲಿನಲ್ಲಿ ನಡೆಯುತ್ತಿರುವಾಗ ಧೈರ್ಯತಂದುಕೊಂಡು ಜೀಸಸ್‌ನಿಗೆ ನುಡಿದೆ: "ಗುರುವೇ, ನಾನೂ ನನ್ನ ತಮ್ಮನೂ ನಿಮ್ಮ ಹೆಜ್ಜೆಯಲ್ಲಿ ಹೆಜ್ಜೆಯಿಟ್ಟು ನಡೆಯುವೆವು; ನೀನು ಹೋದಲ್ಲಿ ನಾವೂ ಬರುವೆವು. ನೀನು ದಯೆಯಿಟ್ಟು ಈರಾತ್ರಿ ನಮ್ಮ ಮನೆಗೆ ಬಂದು ನಿನ್ನ ಪಾದಧೂಳಿಯಿಂದ ನಮ್ಮನ್ನೆಲ್ಲ ಪುನೀತಗೊಳಿಸು. ನಮ್ಮ ಮನೆ ದೊಡ್ಡದಿಲ್ಲ, ಮಾಳಿಗೆ ಎತ್ತರವಿಲ್ಲ. ನೀನು ಕೇವಲ ತುಣುಕು ರೊಟ್ಟಿಯ ಊಟಕ್ಕೆ ಕೂಡಬೇಕಾಗುವದು. ಆದರೂ ನೀನು ನಮ್ಮ ಜತೆ ಊಟಕ್ಕೆ ಕುಳಿತು ತುತ್ತು ತೆಗೆದುಕೊಂಡೆಯಾದರೆ ನಿನ್ನ ಆ ಸಾನಿಧ್ಯವು, ನಮ್ಮನ್ನು ಕಂಡು ಈ ನಾಡಿನ ರಾಜಪುತ್ರರೂ ಹೇವಗೊಳ್ಳುವಂತಾಗುವದು"

ಅವನು ನುಡಿದ. "ಹೂಂ. ಈರಾತ್ರಿ ನಾನು ನಿಮ್ಮ ಅತಿಥಿಯಾಗುವೆ."

ನನ್ನ ಹೃದಯ ತುಂಬಿಬಂತು. ಮೌನವಾಗಿಯೇ ಮನೆಯತನಕ ನಾವವನನ್ನು ಹಿಂಬಾಲಿಸಿದೆವು.

ಮನೆಯೆದುರು ಬಂದಾಗ ಜೀಸಸ್ ನುಡಿದ: "ಈ ಮನೆಗೂ ಇದರಲ್ಲಿ ಇರುವವರಿಗೂ ಶಾಂತಿ ಲಭಿಸಲಿ."

ಬಳಿಕ ಅವನು ಮನೆಯೊಳಕ್ಕೆ ನಡೆದ. ನಾವವನನ್ನು ಹಿಂಬಾಲಿಸಿದೆವು. ನನ್ನ ಹೆಂಡತಿ, ಆಕೆಯ ತಾಯಿ, ಮತ್ತು ನನ್ನ ಮಗಳು ಅವನೆದುರು ಬಂದು ಅವನಿಗೆ ಪೂಜೆಗೈದರು. ಅವನೆದುರು ಮೊಳಕಾಲೂರಿ ಅವನ ತೋಳಂಚನ್ನು ಮುತ್ತಿಟ್ಟರು.

ಪಾವನನೂ, ಪ್ರಿಯತಮನೂ ಆದ ಅವನು ನಮ್ಮ ಅತಿಥಿಯಾಗಿ ಬಂದುದು ಅವರಿಗೆ ಅತ್ಯಾಶ್ಚರ್ಯವಾಗಿತ್ತು. ಏಕೆಂದರೆ, ಜೋರ್ಡಾನ ನದಿಯ ಬಳಿ ಸ್ನಾಪಕ ಜಾನನು ಜನರೆದುರು ಅವನನ್ನು ಘೋಷಿಸಿದಾಗ ಅವರು ಆಗಲೇ ಅವನನ್ನು ನೋಡಿದ್ದರು. ಕೂಡಲೆ ನನ್ನ ಹೆಂಡತಿಯೂ ಅತ್ತೆಯೂ ಅಡಿಗೆ ಸಿದ್ಧಮಾಡಲು ಪ್ರಾರಂಭಿಸಿದರು.

ನನ್ನ ತಮ್ಮ ಆ್ಯಂಡ್ರ್ಯೂ ಸ್ವಲ್ಪ ಸಂಕೋಚಸ್ವಭಾವದವನು; ಆದರೆ ಜೀಸಸ್ ನಲ್ಲಿಯ ಅವನ ಶ್ರದ್ಧೆ ನನ್ನ ಶ್ರದ್ಧೆಗಿಂತಲೂ ಆಳತರವಾಗಿದ್ದಿತು.

ಆಗ ಕೇವಲ ಹನ್ನೆರಡು ವರುಷದ ನನ್ನ ಮಗಳು ಅವನ ಬಳಿ ಬಂದು, ಅವನು ಮತ್ತೆ ರಾತ್ರಿ ನಮ್ಮನ್ನು ಬಿಟ್ಟು ಹೊರಟು ಹೋಗಬಹು ದೆಂಬ ಹೆದರಿಕೆಯಿಂದ ಅವನ ಅಂಗಿಯ ತೋಳನ್ನು ಹಿಡಿದುಕೊಂಡು ನಿಂತಳು. ಕಳಕೊಂಡ ಕುರಿಯು ತಿರುಗಿ ಕುರುಬನನ್ನು ಕಂಡಂತೆ ಆಕೆ ಅವನಿಗೆ ಅಂಟಿಕೊಂಡಿದ್ದಳು.

ಬಳಿಕ ನಾವು ಊಟಕ್ಕೆ ಕುಳಿತೆವು. ಅವನು ರೊಟ್ಟಿಮುರಿದ, ದ್ರಾಕ್ಷಾ ರಸ ಸುರಿದ; ನಮ್ಮೊಡನೆ ತಿರುಗಿ ಹೀಗೆ ನುಡಿದ: "ಗೆಳೆಯರೇ, ನನ್ನೊಡನೆ ಈ ಊಟದಲ್ಲಿ ಭಾಗಿಯಾಗಿ, ಆ ಮಹಾಪಿತನು ನಮ್ಮೆಲ್ಲರಿಗೂ ಅನ್ನ ಕೊಟ್ಟು ಉಪಕೃತರನ್ನಾಗಿ ಮಾಡಿದಂತೆ, ನನ್ನನ್ನೂ ಉಪಕೃತನನ್ನಾಗಿ ಮಾಡಿ."

ತುತ್ತಿಗೆ ಕೈ ಹಚ್ಚುವ ಮೊದಲೇ ಅವನು ಹೀಗೆ ನುಡಿದ; ಏಕೆಂದರೆ ಸನ್ಮಾನ್ಯ ಅತಿಥಿಯೇ ಯಜಮಾನನೆನ್ನುವ ಹಳೆ ಪದ್ಧತಿಯನ್ನು ಅನುಸರಿ ಸಲು ಅವನು ಬಯಸಿದ್ದನೆಂದು ತೋರುತ್ತದೆ. ಅವನ ಸುತ್ತುಮುತ್ತಲೂ ನಾವೆಲ್ಲ ಊಟಕ್ಕೆ ಕುಳಿತಾಗ, ಒಬ್ಬ ಮಹಾ ಸಮ್ರಾಟನ ಭೋಜನ ಸಮಾರಂಭದಲ್ಲಿದ್ದಂತೆ ನಮಗೆನಿಸಿತು.

ಚಿಕ್ಕವಳೂ, ಅಬೋಧಳೂ ಆದ ನನ್ನ ಮಗಳು ಪೆಟ್ರೋಲಿನಾ ಅವನ ಮೊಗದೆಡೆಗೇ ನೋಡುತ್ತ ಅವನ ಕೈಯ ಚಲನವಲನವನ್ನೇ ಅನುಸರಿಸು ತ್ತಿದ್ದಳು. ಆಗ ಆಕೆಯ ಕಂಗಳಲ್ಲಿ ಕಂಬನಿಯ ತಿಳಿಪೊರೆಯೊಂದು ಮೂಡಿ ನಿಂತುದನ್ನು ನಾನು ಕಂಡೆ.

ಊಟ ಮುಗಿದ ಬಳಿಕ ನಾವೆಲ್ಲ ಅವನನ್ನು ಹಿಂಬಾಲಿಸಿ ಮುಂದಿನ ದ್ರಾಕ್ಷಾ ತೋಟದಲ್ಲಿ ಹೋಗಿ ಅವನನ್ನು ಬಳಸಿ ಕುಳಿತೆವು. ಅವನು

ನನುಗಾಗಿ ನುಡಿದ; ನಾವು ಆಲಿಸಿದೆವು; ನಮ್ಮ ಹೃದಯಗಳು ಒಳಗೊಳಗೇ ಹಕ್ಕಿಯಂತೆ ಫಡಫಡಿಸಿದವು.

ಮಾನವನ ಮರುಜನ್ಮದ ಬಗ್ಗೆ, ಸ್ವರ್ಗದ ಬಾಗಿಲು ತೆರೆಯುವ ಬಗ್ಗೆ, ದೇವದೂತರ ಅವತಾರದ ಬಗ್ಗೆ, ಹಾಗೂ ಅವರು ಮಾನವರಿಗೆಲ್ಲ ಬೀರುತ್ತಿದ್ದ ಹರುಷ-ಶಾಂತಿಗಳ ಬಗ್ಗೆ, ಮತ್ತು ದೇವದೂತರು ಮಾನವರ ಆಶೆ ಆಕಾಂಕ್ಷೆಗಳೊಡನೆ ಮಹಾಪ್ರಭುವಿನ ಸಿಂಹಾಸನಪೆಡೆಗೆ ಏರುವ ಬಗ್ಗೆ ಅವನು ನಮಗೆಲ್ಲ ಹೇಳಿದ.

ಬಳಿಕ ಅವನು ನನ್ನ ಕಂಗಳನ್ನೇ ನಿಟ್ಟಿಸಿ ನನ್ನ ಹೃದಯಪಾಳದ ವರೆಗೂ ಇಳಿದು ನೋಡಿದ. ಆ ಮೇಲೆ ಹೀಗೆಂದ: "ನಾನು ನಿನ್ನನ್ನೂ ನಿನ, ತಮ್ಮನನ್ನೂ ಆರಿಸಿದ್ದೇನೆ. ನೀವಿಬ್ಬರೂ ನನ್ನನ್ನು ಹಿಂಬಾಲಿಸಿ ಬರಲಿಕ್ಕೇ ಬೇಕು. ನೀವು ಬಹಳಷ್ಟು ದುಡಿದ್ದೀರಿ, ಸಾಕಷ್ಟು ಭಾರದಿಂದ ದಣಿದಿದ್ದೀರಿ; ನಾನೀಗ ನಿಮಗೆ ವಿಶ್ರಾಂತಿಕೊಡುವೆ. ಈ ನನ್ನ ನೊಗವನ್ನು ಕೊಳ್ಳಿ. ಹಾಗೂ ನನ್ನನ್ನು ತಿಳಿದುಕೊಳ್ಳಿ; ಏಕೆಂದರೆ ನನ್ನ ಹೃದಯದಲ್ಲಿ ಶಾಂತಿಯಿದೆ; ಅಲ್ಲಿ ನಿಮ್ಮ ಆತ್ಮವು ಸಮೃದ್ಧಿಯನ್ನೂ ತವರುಮನೆಯನ್ನೂ ಪಡೆಯುವದು."

ಅವನು ಹೀಗೆಂದೊಡನೆ ನಾನೂ ನನ್ನ ತಮ್ಮನೂ ಅವನೆದುರಿಗೆ ಎದ್ದು ನಿಂತೆವು. ನಾನವನಿಗೆ ಹೀಗೆಂದೆ: "ಗುರುವೇ ನೆಲದಂಚಿನ ಕೊನೆಯ ವರೆಗೂ ನಾವು ನಿನ್ನನ್ನು ಹಿಂಬಾಲಿಸುವೆವು. ನಮ್ಮ ಹೊರೆಯು ಪರ್ವತ ಪ್ರಾಯಭಾರವಾಗಿದ್ದರೂ, ನಿನ್ನೊಡನೆ ನಾವದನ್ನು ಸಂತೋಷದಿಂದ ಧಾರಣ ಮಾಡುವೆವು. ಈ ಹಾದಿಯಲ್ಲಿ ನಾವು ಬೀಳಬೇಕಾಗಿ ಬಂದರೂ, ಅದು ಸ್ವರ್ಗದ ಹಾದಿಯಾಗಿದ್ದು ಅಲ್ಲಿ ನಾವು ಬಿದ್ದಿರುವೆವೆಂದರಿತು ತೃಪ್ತಿದಾಳುವೆವು"

ನನ್ನ ತಮ್ಮ ಆಂಡ್ರ್ಯೂ ಹೀಗೆಂದ: "ಗುರುವೇ, ನಾವು ನಿನ್ನ ಹಸ್ತ ಹಾಗೂ ಮಗ್ಗದ ನಡುವಿನ ನೂಲಾಗಿರುವೆವು. ನಿನ್ನ ಬಯಕೆಯಿದ್ದರೆ ನಮ್ಮನ್ನು ನೆಯ್ದು ವಸ್ತ್ರವಾಗಿಸು; ಏಕೆಂದರೆ ನಾವೂ ಆ ಮಹೋನ್ನತನ ವಸ್ತ್ರವಾಗಿ ಪರಿಣಮಿಸಬಹುದು."

ಬಳಿಕ ನನ್ನ ಹೆಂಡತಿ, ಗಲ್ಲದ ಮೇಲೆ ಕಂಬನಿ ಇಳಿಯುತ್ತಲಿದ್ದ ತನ್ನ

ಮೊಗವನ್ನೆತ್ತಿ ಸಂತಸದುಂಬಿ ಹೀಗೆ ನುಡಿದಳು: "ದೇವರ ಹೆಸರಿನಲ್ಲಿ ನಮ್ಮಲ್ಲಿ ಬಂದ ನೀನು ಧನ್ಯ; ನಿನ್ನನ್ನು ಧರಿಸಿದ ಬಸಿರೂ ಧನ್ಯ, ನಿನಗೆ ಮೊಲೆ ಹಾಲೂಡಿಡ ಹೃದಯವೂ ಧನ್ಯ!"

ಕೇವಲ ಹನ್ನೆರಡು ವರುಷದವಳಾದ ನನ್ನ ಮಗಳು ಅವನ ಕಾಲಬಳಿ ಕುಳಿತು ಅವುಗಳನ್ನು ಅಪ್ಪಿಕೊಂಡು ಒತ್ತಾಗಿ ಅಂಟಿಕೊಂಡಿದ್ದಳು.

ಅಲ್ಲಿಯೇ ಬಳಿಯಲ್ಲಿ ಕುಳಿತ ನನ್ನ ಹೆಂಡತಿಯ ತಾಯಿ, ಒಂದೂ ಮಾತನಾಡಲಿಲ್ಲ. ಅವಳು ಕೇವಲ ಮೂಕಳಂತೆ ಕಂಬನಿ ಸುರಿಸುತ್ತಿದ್ದಳು; ಕಂಬನಿಗಳಿಂದ ಅವಳು ಹೊತ್ತುಕೊಂಡ ಕಂಬಳಿ ತೊಯ್ದಿತ್ತು.

ಜೀಸಸ್‌ನು ಅವಳ ಬಳಿಬಂದು ತನ್ನ ಕೈಯಿಂದ ಅವಳ ಮುಖವನ್ನೆತ್ತಿ ತನ್ನ ಮುಖಕ್ಕೆದುರಾಗಿಸಿಕೊಂಡು ಹೀಗೆಂದ: "ನೀನು ಇವರೆಲ್ಲರಿಗೂ ತಾಯಿ, ಆನಂದಕ್ಕಾಗಿ ನೀನು ಅಳುತ್ತಿರುವಿ, ನಿನ್ನ ಈ ಕಂಬನಿಗಳನ್ನು ನಾನೆಂದೂ ಮರೆಯಲಾರೆ."

ಆಗಲೇ ಪುರಾತನ ಚಂದ್ರ, ಕ್ಷಿತಿಜದ ಮೇಲೇರಿ ಬಂದ. ಜೀಸಸ್‌ನು ಒಂದು ಕ್ಷಣ ಆ ಚಂದ್ರೋದಯವನ್ನು ನಿಟ್ಟಿಸಿ, ಬಳಿಕ ನಮ್ಮೆಡೆಗೆ ತಿರುಗಿ ಹೀಗೆ ನುಡಿದ: "ಬಹಳ ಹೊತ್ತಾಯಿತು. ಇನ್ನು ನೀವು ಮಲಗಿಕೊಳ್ಳಿ. ನಿಮ್ಮ ನಿದ್ದೆಯಲ್ಲಿ ದೇವರು ಕಂಡುಬರಲಿ. ಬೆಳಗಾಗುವವರೆಗೂ, ನಾನಿಲ್ಲಿಯೇ ಈ ಲತಾಕುಂಜದ ಬಳಿ ಇರುವೆ. ಈ ದಿನ ನಾನು ನನ್ನ ಬಲೆಬೀಸಿ ಈ ಇಬ್ಬರನ್ನೂ ಹಿಡಿದಿದ್ದೇನೆ. ನನಗೆ ತೃಪ್ತಿಯಾಯಿತು. ಇನ್ನು ಈ ರಾತ್ರಿ ನಾನು ನಿಮ್ಮ ನಿರೋಪ ತೆಗೆದುಕೊಳ್ಳುವೆ.

ಆಗ ನನ್ನ ಹೆಂಡತಿಯ ತಾಯಿ ನುಡಿದಳು: "ನಿಮಗಾಗಿ ಮನೆಯೊಳಗೆ ಹಾಸಿಗೆ ಸಿದ್ಧಪಡಿಸಿದೆ; ನೀವು ಒಳಕ್ಕೆ ಬಂದು ಮಲಗಿಕೊಳ್ಳಬೇಕೆಂದು ನಾನು ಬೇಡಿಕೊಳ್ಳುವೆ."

ಅವಳ ಮಾತಿಗೆ ಅವನು ಮಾರ್ನುಡಿದ: "ಅವಶ್ಯವಾಗಿ ನಾನು ಮಲಗಿಕೊಳ್ಳುವೆ; ಆದರೆ ಚಪ್ಪರ-ಮಾಳಿಗೆಗಳ ಬುಡದಲ್ಲಲ್ಲ; ಈ ರಾತ್ರಿ ನನ್ನನ್ನು ಈ ದ್ರಾಕ್ಷೆ, ಈ ನಕ್ಷತ್ರಗಳ ವಿತಾನದ ಕೆಳಗೆ ಮಲಗಗೊಡಿರಿ."

ಬಳಿಕ ಆಕೆ ಅವಸರವಸರವಾಗಿ ಜಮುಖಾನೆ, ತಲೆದಿಂಬು, ಮಗ್ಗುಲಾಸಿಗೆಗಳನ್ನು ಹೊರಗೆ ತಂದು ಹಾಸಿಕೊಟ್ಟಳು. ಅದನ್ನು ಕಂಡು ಅವನು ನಸು

ನಕ್ಕು ನುಡಿದ: “ ನೋಡಿ, ನಾನೀಗ ಎರಡು ಸಲ ಹಾಸಿದ ಹಾಸಿಗೆಯ ಮೇಲೆ ಮಲಗುವೆ. ”

ಆಮೇಲೆ ನಾವೆಲ್ಲ ಅವನನ್ನು ಅಲ್ಲಿಯೇ ಬಿಟ್ಟು ಮನೆಯೊಳಗೆ ಬಂದೆವು; ನಮ್ಮ ಹುಡುಗಿ ಮಾತ್ರ ಕಟ್ಟಕಡೆಗೆ ಒಳಗೆ ಬಂದಳು; ಹಾಗೂ ನಾನು ಬಾಗಿಲಿಕ್ಕುವವರೆಗೂ ಅವಳ ದೃಷ್ಟಿ ಅವನ ಮೇಲೇ ಇತ್ತು.

ನಾನು ನನ್ನ ಪ್ರಭು, ನನ್ನ ಗುರುವನ್ನು ಮೊಟ್ಟಮೊದಲು ಕಂಡುದು ಈ ರೀತಿಯಾಗಿತ್ತು. ಈ ಘಟನೆ ಸಂಭವಿಸಿ ಅನೇಕ ವರುಷಗಳಾಗಿ ಹೋಗಿದ್ದರೂ, ಅದಿನ್ನೂ ನಿನ್ನೆ ಮೊನ್ನೆಯಾದಂತಿದೆ.

## ೭. ಕೈಫಸ್—ಉನ್ನತ ಪುರೋಹಿತ

ಆ ಮನುಷ್ಯ ಜೀಸಸ್‌ನನ್ನು ಹಾಗೂ ಅವನ ಮರಣವನ್ನು ಕುರಿತು ಮಾತನಾಡುವಾಗ ನಾವು ಮುಖ್ಯವಾಗಿ ಎರಡು ಮಾತನ್ನು ಲಕ್ಷ್ಯದಲ್ಲಿರಿಸಬೇಕು. ಒಂದು, ನಾವು ತೋರಾನನ್ನು ಸುರಕ್ಷಿತವಾಗಿ ಉಳಿಸಿಕೊಳ್ಳುವ ಅವಶ್ಯಕತೆ; ಎರಡು, ಈ ರಾಜ್ಯಕ್ಕೆ ರೋಮಿನ ರಕ್ಷಣೆಯಿರುವ ಆವಶ್ಯಕತೆ.

ನಮ್ಮೆಲ್ಲರಿಗೂ, ರೋಮ ರಾಜ್ಯಕ್ಕೂ, ಆ ಮನುಷ್ಯ ತಿರಸ್ಕರಣೀಯನಾಗಿದ್ದ. ಅವನು ಸರಳ ಜನಜಂಗುಳಿಯ ಮನಸನ್ನು ವಿಷಪೂರಿತವನ್ನಾಗಿಸಿದ್ದ; ಅವರನ್ನು ನಮ್ಮ ವಿರುದ್ಧ, ಸೀಝರನ ವಿರುದ್ಧ ಮುನ್ನಡೆಸಿ ಕರೆದೊಯ್ಯುತ್ತಿದ್ದ.

ಮಾರುಕಟ್ಟೆಯ ಬಯಲಲ್ಲಿ ನಡೆದ ಅವನ ಭಾಷಣ ಕೇಳಿ ನನ್ನ ಸ್ವಂತದ ಸೇವಕ-ಸೇವಿಕೆಯರು ಕೂಡ ತಲೆತಿರುಗಿ ಬಂಡುಕೋರರಾದರು. ಕೆಲವರಂತೂ ನಮ್ಮ ಮನೆಯಿಂದ ತಪ್ಪಿಸಿಕೊಂಡು ಪಾರಾಗಿ, ತಾವು ಮೊದಲೆಲ್ಲಿಂದ ಬಂದಿದ್ದರೋ ಆ ಕಾಡಿಗೇ ಓಡಿಹೋದರು

ತೋರಾನೇ ನಮ್ಮ ತಳಹದಿ. ನಮ್ಮ ಶಕ್ತಿಯ ಶಿಖರವೆಂಬುದನ್ನು ಮರೆಯದಿರಿ. ಅವನ ಕೈವಾಡವನ್ನು ನಮ್ಮ ಹಿಡಿತದಲ್ಲಿಡುವ ಈ ಶಕ್ತಿ ನಮ್ಮಲ್ಲಿರುವವರೆಗೂ ಯಾರೂ ನಮ್ಮನ್ನು ಪತನಗೊಳಿಸಲಾರರು. ಹಾಗೂ ಡೇವಿಡ್ ಇಟ್ಟ ಪುರಾತನ ಅಡಿಗಲ್ಲಿನ ಗೋಡೆಗಳಿರುವವರೆಗೂ ಜೆರೂಸಲೇಮ್

ವನ್ನು ಪಾದಾಕ್ರಾಂತ ಮಾಡಲಾರರು. ಅಬ್ರಾಹಮನ ಬೀಜವು ಬಾಳಿ ಬೆಳೆಯಬೇಕಾದರೆ ಈ ನೆಲದ ಮಣ್ಣು ಹಸನಾಗಿ ಉಳಿಯಲೇಬೇಕು.

ಆ ಮನುಷ್ಯ ಜೀಸಸನು ಭ್ರಷ್ಟನೂ ಅಪಭ್ರಂಶನೂ ಆಗಿದ್ದಾನೆ. ನಾವು ಜೊತ್ಕಟ ಹಾಗೂ ವಿಚಾರಸ್ಥ ಅಂತಃಸಾಕ್ಷಿಯಿಂದ ಅವನನ್ನು ಮುಗಿಸಿದೆವು. ಅಲ್ಲದೆ ಯಾರು ಯಾರು ಮೋಸಿಸ್ ನೀತಿಯನ್ನು ತಳಭ್ರಷ್ಟ ಗೈಯಲೆತ್ನಿಸುವರೊ, ಹಾಗೂ ನಮ್ಮ ಪವಿತ್ರ ಪರಂಪರೆಯನ್ನು ಹೊಲಿಗಲಿ ಲೆತ್ನಿಸುವರೋ ಅವರನ್ನೆಲ್ಲ ಮುಗಿಸಿ ಬಿಡುವೆವು

ನಾವು, ಹಾಗೂ ಪಾಂಟಿಯಸ್ ಪಿಲಾಟಸ'ರು ಆ ಮನುಷ್ಯನಲ್ಲಿದ್ದ ಗಂಡಾಂತರವನ್ನು ಅರಿತಿದ್ದೆವು; ಅಂತೇ ಅವನನ್ನು ಮುಗಿಸಿ ಬಿಟ್ಟದು ಜಾಣತನದ ಕಾರ್ಯವಾಗಿತ್ತು.

ಅವನ ಅನುಯಾಯಿಗಳಿಗೂ ಅದೇ ತರಗತಿಯಾಗುವಂತೆ. ಹಾಗೂ ಅವನ ನುಡಿಗಳು ಸ್ತಬ್ಧವಾಗುವಂತೆ ನಾನು ನೋಡಿಯೇ ಬಿಡುವೆನು.

ಜುಡಿಯಾ ಬದುಕಬೇಕಾದರೆ, ಅವಳ ವಿರೋಧಿಗಳೆಲ್ಲ ಮಣ್ಣುಗೂಡಲೇ ಬೇಕು. ಜುಡಿಯಾಳ ಕೊನೆಯಾಗುವದೇ ಇದ್ದರೆ ಅದಕ್ಕೂ ಮೊದಲು ಪ್ರವಾದಿ ಸ್ಯಾಮುಅಲ್‌ನಂತೆ ನನ್ನ ನರೆತ ತಲೆಯೂ ಬೂದಿಯಿಂದ ಮುಚ್ಚಿ ಹೋಗಲಿ. ನನ್ನ ಈ ಆರನ್ ಉಡಿಗೆ–ತೊಡಿಗೆಗಳನ್ನು ಹರಿದುಹೋಗಿ, ಸಾಯುವವರೆಗೂ ಸೂತಕ ವಸ್ತ್ರಗಳು ನನ್ನ ಮೈ ಮುಚ್ಚಲಿ.

## ೮. ಹೆರಾಡ್ಸ ಸ್ಟಿವರ್ಡನ ಪತ್ನಿ ಜೋನ್ನಾ

ಜೀಸಸ್‌ನು, ಕೊನೆವರೆಗೂ ಮದುವೆ ಮಾಡಿಕೊಳ್ಳದಿದ್ದರೂ, ಹೆಣ್ಣಿನ ಗೆಳೆಯನಾಗಿದ್ದನು. ಹೆಣ್ಣನ್ನು ಮಧುರ ಬಾಂಧವ್ಯದಲ್ಲಿ ಹೇಗೆ ಕಾಣ ಬೇಕೆಂಬುದು ಅವನಿಗೆ ಗೊತ್ತಿತ್ತು.

ನಂಬಿಗೆ ಹಾಗೂ ತಿಳಿವಳಿಕೆಯಿಂದ ಮಕ್ಕಳನ್ನು ಅವನು ಪ್ರೀತಿ ಸುತ್ತಿದ್ದನು.

ಅವನ ಕಂಗಳ ಬೆಳಕಿನಲ್ಲಿ ತಂದೆಯಿದ್ದ, ಬಂಧುವಿದ್ದ, ಸಂತನಿದ್ದ.

ಅವನು ಕೂಸೊಂದನ್ನು ತನ್ನ ತೊಡೆಯ ಮೇಲೆ ಕೂಡಿಸಿಕೊಂಡು

" ನಿನ್ನ ಪ್ರಭಾವ ಹಾಗೂ ಸ್ವಾತಂತ್ರ್ಯಗಳೆಂತುಂಟೋ ಅಂತೆಯೇ ಆತ್ಮಿಕ ರಾಜ್ಯದ್ದೂ ಉಂಟು " ಎಂದೆನ್ನುತ್ತಿದ್ದ.

ಮ್ಯೂಸಿಸ್ ನೀತಿನಿಯಮಗಳಿಗೆ ಅವನು ಕಿವಿಗೊಡಲಿಲ್ಲವೆಂದೂ, ಜೆರೂಸಲೇಮದ ಹಾಗೂ ಹಳ್ಳಿಗಾಡಿನ ಜೋಡೆ ಸೂಳೆಯರನ್ನೆಲ್ಲ ಕ್ಷಮಿಸಿ ಬಿಡುವಷ್ಟು ಅವನು ಅತಿ ಕ್ಷಮಿಯಾಗಿದ್ದನೆಂದೂ ಅವರು ಅನ್ನುತ್ತಾರೆ.

ಆ ಕಾಲಕ್ಕೆ ನಾನೂ ಜೋಡೆಯೇ ಆಗಿದ್ದೇನೆನ್ನಬೇಕು; ಏಕೆಂದರೆ ಸ್ಯಾಡೂಸೀಯಾದ ಹಾಗೂ ನನ್ನ ಗಂಡನಲ್ಲದ ಒಬ್ಬ ಮನುಷ್ಯನನ್ನು ನಾನು ಪ್ರೀತಿಸಿದ್ದೆ.

ಆ ನನ್ನ ಪ್ರೇಮಿಯೊಡನೆ ನನ್ನ ಮನೆಯಲ್ಲಿ ನಾನಿದ್ದಾಗ ಸ್ಯಾಡೂಸೀ ಗಳೆಲ್ಲರೂ ನನ್ನ ಮನೆಯೊಳಕ್ಕೆ ನುಗ್ಗಿ, ನನ್ನನ್ನು ಆಕ್ರಮಿಸಿ ಹಿಡಿದುಬಿಟ್ಟರು; ನನ್ನ ಪ್ರೇಮಿ ನನ್ನನ್ನು ಬಿಟ್ಟು ಹೊರಟುಬಿಟ್ಟ.

ಬಳಿಕ ಅವರು ಜೀಸಸ್‌ನು ಬೋಧಿಸುತ್ತಿದ್ದ ಮಾರುಕಟ್ಟೆಯ ಬಳಿಗೆ ನನ್ನನ್ನೊಯ್ದರು.

ಆದರೆ ಜೀಸಸ್‌ನು ನನ್ನನ್ನು ನ್ಯಾಯನಿರ್ಣಯಕ್ಕೊಳಪಡಿಸಲಿಲ್ಲ. ಯಾರು ನನ್ನನ್ನು ಮಾನಗೇಡುಮಾಡಬೇಕೆಂದಿದ್ದರೋ ಅವರನ್ನೇ ಮಾನಗೇಡು ಮಾಡಿದ, ಅವರನ್ನೇ ಕಳಂಕಿಗಳನ್ನಾಗಿ ಮಾಡಿದ. ಹಾಗೂ ನನ್ನ ದಾರಿ ಹಿಡಿದು ಹೋಗುವಂತೆ ನನಗೆ ಅವನು ಹೇಳಿದ.

ಈ ಘಟನೆ ಘಟಿಸಿದನಂತರ, ಇದುವರೆಗೂ ಅರುಚಿಕರವಾಗಿದ್ದ ಬಾಳಿನ ಫಲವು ಈಗ ನನಗೆ ಮಧುರತಮವಾಗಿ ಪರಿಣಮಿಸಿತು; ಹಾಗೂ ಇದುವರೆಗೂ ನಿರ್ಗಂಧವೆನಿಸಿದ್ದ ಕುಸುಮಗಳು ಈಗ ಗಮಗಮಿಸುವ ಸುಮನ ಳಾಗಿ ಪರಿಣಮಿಸಿದವು. ಯಾವದೊಂದೂ ಕಲಂಕಿತ ಸ್ಮೃತಿಯಿರದ ಸ್ತ್ರೀಯಾಗಿ ಪರಿಣಮಿಸಿದೆ ನಾನು. ನಾನು ಸ್ವತಂತ್ರಳಾದೆ; ಮುಂದೆಂದೂ ತಲೆಬಾಗಿಸಬೇಕಾದ ಪ್ರಸಂಗವೇ ಬರಲಿಲ್ಲ.

## ೯. 'ಕಾನಾ'ದ ವಧು ರಫ್ಕಾ

ಇದು, ಅವನು ಜನಪ್ರಸಿದ್ಧನಾಗದ ಮೊದಲೇ ಸಂಭವಿಸಿದುದು.

ಆಗ ನಾನು ನನ್ನ ತಾಯಿಯ ತೋಟದಲ್ಲಿ ಗುಲಾಬಿ ಗಿಡಗಳ ಆರೈಕೆ ಮಾಡುತ್ತಲಿದ್ದೆ; ಅವನು ಬಾಗಿಲ ಬಳಿ ಬಂದು ನಿಂದ. ಅವನು ಕೇಳಿದ: "ನನಗೆ ನೀರಡಿಕೆಯಾಗಿದೆ; ನಿಮ್ಮ ಬಾವಿಯಿಂದ ಸ್ವಲ್ಪ ನೀರು ಹನಿಸುವಿರಾ?"

ಓಡಿಹೋಗಿ, ನಾನು ಬೆಳ್ಳಿಬಟ್ಟಲು ತಂದು ನೀರು ತುಂಬಿ ಅದರಲ್ಲಿ ಸ್ವಲ್ಪ ಮಲ್ಲಿಗೆ ಪನ್ನೀರು ಕೂಡಿಸಿಕೊಟ್ಟೆ. ಅವನು ಯಥೇಚ್ಛ ನೀರು ಕುಡಿದು ಆನಂದಿತನಾದ.

ಬಳಿಕ ಅವನು ನನ್ನನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿ ನುಡಿದ: "ನಿನಗೆ ನನ್ನ ಆಶೀರ್ವಾದವಿರಲಿ."

ಅವನು ಹೀಗೆಂದಾಗ, ನನ್ನ ಮೈಯೊಳಗೆಲ್ಲ ಒಂದು ಗಾಳಿಯ ಹೊನಲೇ ಹರಿದಾಡಿದಂತಾಯಿತು. ನಾನು ಮಖೀನೆಯಾಗಿ ಉಳಿಯಲಿಲ್ಲ; ನಾನೆಂದೆ: "ರೀ, ನಾನು 'ಗ್ಯಾಲಿಲೀ' ಯೊಳಗಿನ 'ಕಾನಾ'ದ ವರನೊಬ್ಬನಿಗೆ ವಾಗ್ದತ್ತಳಾಗಿದ್ದೇನೆ. ಬರುವ ವಾರದ ನಾಲ್ಕನೇ ದಿನ ನಮ್ಮ ಮದುವೆ. ಆಗ ನೀವು ನಮ್ಮ ಮದುವೆಗೆ ಬಂದು ಅದನ್ನು ನಿಮ್ಮ ಸಾನ್ನಿಧ್ಯದಿಂದ ಧನ್ಯಗೊಳಿಸುವಿರಾ?"

ಅವನು ಉತ್ತರಿಸಿದ: "ಮಗೂ, ನಾನು ನಿನ್ನ ಮದುವೆಗೆ ಬರುವೆ."

ನೋಡಿ! ಅವನು "ಮಗೂ" ಎಂದ. ಆಗ ನನಗೆ ಇಪ್ಪತ್ತು ವಯಸ್ಸು; ಅವನೂ ಯುವಕನಾಗಿದ್ದ.

ಬಳಿಕ ಅವನು ತನ್ನ ಹಾದಿ ಹಿಡಿದು ಹೊರಟು ಹೋದ.

ಮನೆಯೊಳಗಿನಿಂದ ನನ್ನ ತಾಯಿ ನನ್ನನ್ನು ಕೂಗುವವರೆಗೂ, ನಾನು ತೋಟದ ಬಾಗಿಲಬಳಿ ನಿಂತು ಅವನು ಹೋಗುತ್ತಿರುವುದನ್ನೇ ನೋಡುತ್ತಲಿದ್ದೆ.

ಮರುವಾರದ ನಾಲ್ಕನೇ ದಿನ ನಾನು ವರನ ಮನೆಗೆ ಕರೆದೊಯ್ಯಲ್ಪಟ್ಟೆ. ನಮ್ಮ ಮದುವೆಯಾಯಿತು.

ಮದುವೆಗೆ ಜೀಸಸ್ ತನ್ನ ತಾಯಿ, ತಮ್ಮ, ಜೇಮ್ಸರೊಡನೆ ಬಂದಿದ್ದ.

ಲಗ್ನವೇದಿಕೆಯ ಸುತ್ತ, ಉಳಿದ ಅತಿಥಿಗಳೊಡನೆ ಅವರೂ ಕುಳಿತಿದ್ದರು. ನನ್ನ ಕನ್ನೆಗೆಳತಿಯರೆಲ್ಲ ಆಗ ಸಾಲೋಮನ್ ಅರಸನ ಲಗ್ನಗೀತಗಳನ್ನು ಹಾಡುತ್ತಿದ್ದರು. ಜೀಸಸ್‌ನೂ ನಮ್ಮೊಡನೆ ಅನ್ನ ಮಧುಗಳನ್ನು ಸೇವಿಸಿದ; ನಗೆಮೊಗದಿಂದ ನನ್ನನ್ನೂ ಉಳಿದವರನ್ನೂ ನೋಡಿದ.

ಪ್ರೇಮಿಯು ತನ್ನ ಪ್ರೀತ್ಯಾಸ್ಪದಳನ್ನು ತನ್ನ ಗುಡಿಸಲಿಗೆ ಕರೆತರುವ ಹಾಡುಗಳನ್ನೆಲ್ಲ ಅವನು ಲಕ್ಷ್ಯಗೊಟ್ಟು ಆಲಿಸಿದ. ದ್ರಾಕ್ಷಾತೋಟದ ಯುವಕ ತೋಟಗಾರ, ತನ್ನ ತೋಟದ ಒಡೆಯನ ಮಗಳನ್ನು ಪ್ರೇಮಿಸಿ ಅವಳನ್ನು ತನ್ನ ತಾಯಿಯ ಮನೆಗೆ ಕರೆದೊಯ್ದ ಹಾಡು; ರಾಜಪುತ್ರನೊಬ್ಬ, ಒಬ್ಬ ಭಿಕ್ಷುಕಿಯನ್ನು ಮೆಚ್ಚಿ ಅವಳನ್ನು ತನ್ನ ಅರಮನೆಗೆ ಕರೆದೊಯ್ದು ತನ್ನ ಪೂರ್ವಜರಿಂದ ಬಂದ ಕಿರೀಟವನ್ನು ಆಕೆಯ ತಲೆಗೆ ಕಟ್ಟಿದ ಹಾಡು. ಇವನ್ನೆಲ್ಲ ಆಲಿಸಿದ. ಇನ್ನೂ ಅನೇಕ ಹಾಡುಗಳನ್ನೂ,– ಅವೆಲ್ಲ ನನಗೆ ಕೇಳಿಸುತ್ತಿರಲಿಲ್ಲ– ಅವನು ಆಲಿಸುತ್ತಿದ್ದಂತೆ ಕಂಡುಬಂತು.

ಸಂಜೆಯ ಹೊತ್ತಿಗೆ ವರನ ತಂದೆ ಬಂದು ಜೀಸಸ್‌ನ ತಾಯಿಯ ಕಿವಿಯಲ್ಲಿ ಹೀಗುಸುರಿದ: “ ಅತಿಥಿಗಳಿಗಾಗಿ ನಮ್ಮಲ್ಲಿ ಮಧುವೇ ಉಳಿಯಲಿಲ್ಲ ಸಮಾರಂಭವಿನ್ನೂ ಮುಗಿದಿಲ್ಲ; ಏನು ಮಾಡಬೇಕು? ”

ಜೀಸಸ್‌ನಿಗೆ ಈ ಪಿಸುಮಾತು ಕೇಳಿಸಿತು. ಅವನು ಹೀಗೆಂದ: “ಇಲ್ಲಿ ಇನ್ನೂ ಬೇಕಾದಷ್ಟು ಮಧುವಿದೆಯೆಂಬುದು ‘ಪಾತ್ರಧಾರಿ’ಗೆ ಗೊತ್ತಿದೆ.”

ಅವನು ಅಂದಂತೆಯೇ ಆಯಿತು–ಅತಿಥಿಗಳಿರುವವರೆಗೂ ಅವರೆಲ್ಲರಿಗೂ ಕುಡಿಯಲು ಯಥೇಚ್ಛ ಮಧು ತುಂಬಿತ್ತು.

ಜೀಸಸ್‌ನು ಪ್ರಸನ್ನತೆಯಿಂದ ನಮ್ಮೊಡನೆ ಮಾತನಾಡತೊಡಗಿದ, ಭೂ–ವ್ಯೋಮಗಳಲ್ಲಿಯ ಆಶ್ಚರ್ಯಕರ ಸಂಗತಿಗಳ ಬಗ್ಗೆ ಅವನು ಮಾತನಾಡಿದ; ಬುವಿಯ ಮೇಲೆ ಇರುಳಾದಾಗ ಅರಳುವ ಆಕಾಶ-ಕುಸುಮಗಳ ಬಗ್ಗೆ ಹಾಗೂ, ಹಗಲು, ಚುಕ್ಕೆಗಳನ್ನು ಮರೆಮಾಡಿದಾಗ ಅರಳುವ ಭೂ–ಕುಸುಮಗಳ ಬಗ್ಗೆ ಅವನು ಮಾತನಾಡಿದ.

ಅವನು ಅನೇಕ ಕಥೆ–ಉಪಕಥೆಗಳನ್ನು ಹೇಳಿದ. ಅವನ ದನಿ ನಮ್ಮನ್ನೆಲ್ಲ ಮೋಹಗೊಳಿಸಿ ಬಿಟ್ಟಿತ್ತು. ನಾವು, ಕನಸು ಕಾಣುವವರಂತೆ ಅವನ

ಮೋರೆಯನ್ನೇ ನಿಟ್ಟಿಸುತ್ತಿದ್ದೆವು; ಅಲ್ಲದೆ ನಮ್ಮೆದುರಿಗಿದ್ದ ತಾಟು-ಬಟ್ಟಲು ಗಳನ್ನೇ ನಾವು ಮರೆತುಬಿಟ್ಟಿದ್ದೆವು. ಅವನ ಮಾತು ಕೇಳುತ್ತಿದ್ದಂತೆ ನನಗಂತೂ, ನಾನು ಯಾವದೋ ಒಂದು ದೂರದ ಅಜ್ಞಾತ ನಾಡಿನಲ್ಲಿದ್ದಂತೆ ಎನಿಸುತ್ತಿತ್ತು.

ಕೆಲಹೊತ್ತು ಕಳೆದ ಬಳಿಕ ಓರ್ವ ಅತಿಥಿ ವರನ ಪಿತನಿಗೆ ನುಡಿದ: "ಔತಣದೂಟದ ಕೊನೆವರೆಗೂ ನೀವು ಅತ್ಯುತ್ತಮ ಮಧುವನ್ನು ಸಾಕಷ್ಟಾಗುವಂತೆ ಇರಿಸಿದ್ದಿರಿ. ಉಳಿದ ಕಡೆಯೆಲ್ಲ ಹೀಗೆ ಮಾಡುವದಿಲ್ಲ."

ಮುಂದುವೆ ಔತಣದ ಪ್ರಾರಂಭಕ್ಕಿಂತಲೂ, ಕೊನೆಕೊನೆಗೆ ಅತ್ಯುತ್ತಮವಾದ ಮಧುವು ಸಾಕಷ್ಟು ದೊರೆಯುವಂತೆ ಮಾಡಿದುದು ಜೀಸಸ್‌ನ ಪವಾಡವೆಂದೇ ಎಲ್ಲರೂ ನಂಬಿದರು.

ನನಗೆ ಕೂಡ ಜೀಸಸ್‌ನೇ ಮಧುವನ್ನು ತುಂಬಿಸಿದ್ದನೆಂದು ಎನಿಸಿತು. ಆದರೆ ನನಗದರಿಂದ ಅಚ್ಚರಿಯೆನಿಸಲಿಲ್ಲ; ಏಕೆಂದರೆ ಅವನ ದನಿಯಲ್ಲಿ ನಾನಾಗಲೇ ಪವಾಡಗಳನ್ನು ಕಂಡುಕೊಂಡಿದ್ದೆ.

ಆಮೇಲೆ ಕೂಡ ಅವನ ದನಿಯು ನನ್ನ ಹೃದಯಸಂಪುಟದಲ್ಲಿ ನಿನದಿಸುತ್ತಲೇ ಇರುತ್ತಿತ್ತು; ನಾನು ಚೊಚ್ಚಲು ಮಗುವನ್ನು ಹಡೆಯುವವರೆಗೂ ಆ ದನಿಯ ನಿನಾದ ಇದ್ದೇ ಇತ್ತು.

ಇಂದಿಗೂ ಕೂಡ ನಮ್ಮ ಹಳ್ಳಿಯಲ್ಲಿ ಹಾಗೂ ಅದರ ಸುತ್ತುಮುತ್ತಲಿನ ಹಳ್ಳಿಗಳಲ್ಲಿ ನಮ್ಮ ಈ ಅತಿಥಿಯ ನುಡಿಗಳನ್ನು ನೆನೆಸುತ್ತಲೇ ಇರುತ್ತಾರೆ. "ನಾಝರೆಥ್‌ದ ಜೀಸಸ್‌ನ ಆತ್ಮವೇ ಒಂದು ಅತ್ಯುತ್ತಮ ಹಾಗೂ ಪುರಾತನ ಮಧುವಾಗಿದೆ" ಎಂದು ಅವರು ಅನ್ನುತ್ತಿರುತ್ತಾರೆ.

## ೧೦. ದಮಸ್ಕಸ್‌ದಲ್ಲಿಯ ಇರಾಣೀ ವೇದಾಂತಿ

ಈ ಮನುಷ್ಯನ ಹಣೆಬರೆಹದ ಬಗ್ಗೆ, ಹಾಗೂ ಇವನ ಅನುಯಾಯಿಗಳ ಭವಿತವ್ಯದ ಬಗ್ಗೆ ನಾನೇನೂ ನುಡಿಯಲಾರವಾಗಿದ್ದೇನೆ.

ಹಣ್ಣಿನಲ್ಲಡಗಿದ ಒಂದು ಬೀಜವೇ ಅದೃಷ್ಟ ತೋಟವಾಗಿದೆ. ಆದರೆ ಆ ಬೀಜ ಬಂಡೆಗಲ್ಲಿನ ಮೇಲೆ ಬಿದ್ದರೆ ಅದೊಂದು ಶೂನ್ಯವಾಗಿ ಪರಿಣಮಿಸುವುದು.

ಇಷ್ಟು ಮಾತ್ರ ನಾ ಹೇಳಬಲ್ಲೆ : ಈ ಇಸ್ರಾಯೀಲದ ಪುರಾತನ ದೇವರು ಒರಟನೂ ನಿರ್ದಯಿಯೂ ಆಗಿದ್ದಾನೆ. ಇಸ್ರಾಯಿಲಕ್ಕೆ ಇನ್ನೊಬ್ಬ ದೇವರು ಬರಬೇಕು; ಅವನು ಕ್ಷಮಿಯೂ ನಯವಿದನೂ ಆಗಿರಬೇಕು, ಜನರನ್ನು ಕನಿಕರದಿಂದ ಕಾಣುವವನಾಗಿರಬೇಕು. ಜನರ ತಪ್ಪು–ಅಪರಾಧಗಳ ಬಗ್ಗೆ ನ್ಯಾಯನಿರ್ಣಯ ಮಾಡುವವನಂತೆ ನ್ಯಾಯವೇದಿಕೆಯಲ್ಲಿ ಅವನು ಆಸೀನನಾಗದೆ, ಸೂರ್ಯಕಿರಣಗಳೊಡನೆ ಇಳಿದು ಬಂದು ಅವರ ಪರಿಮಿತ ಪಥದಲ್ಲಿ ಪಾದಕ್ರಮಣ ಮಾಡುವವನಾಗಿರಬೇಕು.

ಇಸ್ರಾಯಿಲವು, ತನ್ನ ಕುಂದು ಕೊರತೆಗಳನ್ನು ಅಣುವಾಗಿಸಬಲ್ಲ ಹಾಗೂ ಅಸೂಯಾರಹಿತ ಹೃದಯವುಳ್ಳ ದೇವನೊಬ್ಬನನ್ನು ಕರೆತರಬೇಕು. ಮೂರು ನಾಲ್ಕು ತಲೆಮಾರಿನವರೆಗೂ ಅವರ ಮೇಲೆಂದೂ ಪ್ರತಿಹಿಂಸೆಗೊಳಿಸದಂತೆ ಅವನು ಇರಬೇಕು.

ಎಲ್ಲ ದೇಶಗಳಂತೆ ಈ ಸಿರಿಯಾದಲ್ಲಿಯೂ ಮಾನವನೇ ಇದ್ದಾನೆ. ಅವನು ತನ್ನ ತಿಳಿವಳಿಕೆಯ ಕನ್ನಡಿಯಲ್ಲಿ ತನ್ನನ್ನು ತಾನೇ ನೋಡಿಕೊಳ್ಳುತ್ತ ಅಲ್ಲಿ, ತನ್ನ ಅಧಿದೈವತವನ್ನು ಕಾಣುತ್ತಾನೆ. ಅವನು ತನಗೆ ಸೇರಿದಂತೆ ದೇವನನ್ನು ರೂಪಿಸಿಕೊಂಡು, ತನ್ನ ನೆರಳಿನಲ್ಲಿ ಪ್ರತಿಬಿಂಬಿಸುವ ಆವನನ್ನೇ ಪೂಜಿಸುತ್ತಾನೆ.

ಮಾನವನು ತನ್ನ ಆಳವಾದ ಆಕಾಂಕ್ಷೆಗಳನ್ನೇ ಧ್ಯಾನಿಸುತ್ತ, ಅದು ಉತ್ಕ್ರಮಿಸಿ ತನ್ನ ಬಯಕೆಗಳನ್ನೆಲ್ಲ ಪರಿಪೂರ್ಣಗೊಳಿಸಲೆಂದೇ ಆತನು ಪ್ರಾರ್ಥಿಸುತ್ತಿರುತ್ತಾನೆ.

ಮಾನವನನಲ್ಲಿಯ ಆತ್ಮಕ್ಕಿಂತ ಆಳವಾದುದಿನ್ನೊಂದಿಲ್ಲ; ಆತ್ಮವು

ತನ್ನನ್ನೇ ತಾನು ಕೂಗುವ ಆಳವಾಗಿದೆ. ಏಕೆಂದರೆ ಅದನ್ನುಳಿದು ನುಡಿಯುವ ಇನ್ನೊಂದು ದನಿಯಿಲ್ಲ, ಕೇಳುವ ಇನ್ನೊಂದು ಕಿವಿಯಿಲ್ಲ.

ಇರಾಣದಲ್ಲಿಯು ನಾವು ಕೂಡ ಸೂರ್ಯಬಿಂಬದಲ್ಲಿಯೇ ನಮ್ಮ ಮುಖವನ್ನು ಕಾಣುತ್ತೇವೆ. ಹಾಗೂ, ಬಲಿಪೀಠದ ಮೇಲೆ ಬೆಳಗಲೆಂದೇ ನಮ್ಮ ದೇಹಗಳನ್ನೂ ಅಗ್ನಿಯಲ್ಲಿ ಕುಣಿಸುತ್ತಿರುತ್ತೇವೆ.

ಜೀಸಸ್‌ನ ದೇವರು—ಅವನು ಅವನನ್ನು ತಂದೆಯೆನ್ನುತ್ತಾನೆ—ಜೀಸಸ್‌ನ ಜನರಿಗೆ ಅವನು ಅರಿಯದವನೇನಲ್ಲ. ಹಾಗೂ ಅವನು ಅವರ ಬಯಕೆಗಳನ್ನು ಪೂರ್ಣ ಮಾಡುತ್ತಾನೆ.

ಇಜಿಪ್ತದ ದೇವರುಗಳು ತಮ್ಮ ಕಲ್ಲುಹೊರೆಗಳನ್ನೆಲ್ಲ ಕಟ್ಟಿಕೊಂಡು ತಿಳಿವಳಿಕೆಯಿಂದ ಮುಕ್ತರಾಗಿದ್ದವರ ಮಧ್ಯದಲ್ಲಿ ತಾವೂ ಕೂಡ ಮುಕ್ತರಾಗಿರಬೇಕೆಂದು, ನ್ಯೂಬಿಯಾನದ ಮರಳುಗಾಡಿಗೆ ಹರಿಬಿದ್ದು ಹೋಗಿದ್ದಾರೆ.

ಗ್ರೀಸ ಮತ್ತು ರೋಮುಗಳ ದೇವರುಗಳೂ ತಮ್ಮ ಸೂರ್ಯಾಸ್ತದಲ್ಲಿಯೇ ತಾವು ಅದೃಶ್ಯರಾಗಿದ್ದಾರೆ ಮಾನವೀಯ ಆನಂದಲಹರಿಯಲ್ಲಿಯೇ ಬಾಳಿ ಬದುಕಿರಲು, ಮಾನವಾತೀತರಾದ ಅವರಿಗೆ, ಆಗದಾಗಿತ್ತು. ಅವರ ಮಾಯೆಗೆ ಜನ್ಮವಿತ್ತ ಆ ಉಪವನಗಳೇ, ಅಥೇನಿಯನ್ನರ ಅಲೆಕ್ಝಾಂಡ್ರಿಯನ್ನರ ಕೊಡಲಿಯೇಟಿಗೆ ಬಲಿಯಾಗಿ ಹೋಗಿದ್ದವು.

ಈ ನಾಡಿನಲ್ಲಿ ಕೂಡ ಉನ್ನತ ಠಾಣಗಳು, ಬಿರೂಟದ ವಕೀಲರಿಂದಲೂ, ಆ್ಯಂಟಿಯೊಚದ ತರುಣ ತಪಸ್ವಿಗಳಿಂದಲೂ ನಿಮ್ನಗೊಳಿಸಲ್ಪಟ್ಟಿವೆ.

ಕೇವಲ ಮುದುಕಿಯರೂ, ವಣಿದ ಜನರೂ ತಮ್ಮ ಪೂರ್ವಜರ ಗುಡಿಗಳನ್ನು ಶೋಧಿಸುತ್ತಾರೆ; ಬದುಕಿನ ಕೊನೆಯ ತುದಿಗೆ ಬಂದು ಹೈರಾಣಾದವರೇ ಅದರ ಆದಿಯನ್ನು ಶೋಧಿಸುತ್ತಿದ್ದಾರೆ.

ಆದರೆ ಈ ಮನುಷ್ಯ ಜೀಸಸ್‌ನು, ಈ ನಾಝರೀನನು, ಮಾನವೀಯ ಆತ್ಮಕ್ಕಿಂತಲೂ ಬೇರೆಯಾಗಲಾರದ ವಿಸ್ತಾರವಾದ, ಶಿಕ್ಷಿಸುವದಕ್ಕಿಂತಲೂ ಹೆಚ್ಚಿನದನ್ನು ತಿಳಿದ, ತನ್ನ ಪ್ರಾಣಿಗಳ ಪಾಪಗಳನ್ನು ನೆನಪಿಡುವುದಕ್ಕಿಂತಲೂ ಹೆಚ್ಚಿನ ಪ್ರೇಮಮಯಿಯಾದ, ದೇವರನ್ನು ಕುರಿತು ಹೇಳಿದ್ದಾನೆ. ನಾಝರೀನನ ಈ ದೇವರು, ಭೂಮಾತೆಯ ಮಕ್ಕಳ ಮನೆಯ ಮುಂದೇ

ಹಾದು ಹೋಗುವನು, ಅವನು ಅವರ ಅಡಿಗೆಒಲೆಯ ಬಳಿ ಕೂಡುವನು, ಅಲ್ಲದೆ ಅವನು ಅವರ ಮನೆಯೊಳಗೆ ಹರಕೆಯಾಗಿಯೂ, ಪಥದೊಳಗೆ ಬೆಳಕಾಗಿಯೂ ಇರುವನು.

ಆದರೆ ನನ್ನ ದೇವರು ಮಾತ್ರ—ಝೊರೊಸ್ತರನ ದೇವರು,—ಅವನು ಆಕಾಶದಲ್ಲಿ ಸೂರ್ಯನಾಗಿದ್ದಾನೆ. ಭೂಮಿಯ ಮೇಲೆ ಅಗ್ನಿಯಾಗಿದ್ದಾನೆ ಹಾಗೂ ಮಾನವ ಹೃದಯದಲ್ಲಿ ಬೆಳಕಾಗಿದ್ದಾನೆ. ಇದರಲ್ಲಿಯೇ ನಾನು ತೃಪ್ತನಾಗಿದ್ದೇನೆ ನನಗೆ ಬೇರೆ ದೇವರ ಅವಶ್ಯಕತೆಯಿಲ್ಲ.

## ೧೧. ಅವನ ಅನುಯಾಯಿಗಳಲ್ಲೊಬ್ಬನಾದ ಡೇವಿಡ್

ಅವನು ನಮ್ಮೊಳಗಿಂದ ಇಲ್ಲದಾಗುವ ಮೊದಲು ಅವನ ಗೋಷ್ಠಿಗಳ, ದೃಷ್ಟಾಂತ ಕಥನಗಳ, ಅರ್ಥವೇ ನನಗಾಗಲಿಲ್ಲ. ಇಲ್ಲ, ಅವನ ನುಡಿಗಳು ರೂಪುಗೊಂಡು ಕಂಗೊಳಿಸುವನಕ, ಮತ್ತು ನನ್ನ ದಿನಮಾನದಲ್ಲಿ, ಅವು ಮೈವೆತ್ತು ಮೆರವಣಿಗೆಯಲ್ಲಿ ನಡೆಯುವ ತನಕ, ನನಗವು ತಿಳಿಯಲೇ ಇಲ್ಲ.

ಇದರ ಬಗ್ಗೆ ನಾನು ನಿಮಗೆ ನನ್ನ ಒಂದು ದೃಷ್ಟಾಂತ ಹೇಳುವೆ: ಒಂದು ದಿನ ನನ್ನ ಮನೆಯಲ್ಲಿ ನಾನು ಅವನ ನುಡಿ–ನಡೆಗಳನ್ನು ನೆನೆಯುತ್ತ ನಿಧಾನಿಸುತ್ತ, ಅವುಗಳನ್ನು ಪುಸ್ತಕ ರೂಪದಲ್ಲಿ ಬರೆಯುವ ಬಗ್ಗೆ ಯೋಚಿಸುತ್ತ ಕುಳಿತಿರುವಾಗ, ಮೂವರು ಕಳ್ಳರು ನನ್ನ ಮನೆಯೊಳಗೆ ಪ್ರವೇಶಿಸಿದರು. ಅವರು ನನ್ನನ್ನೂ ನನ್ನ ವಸ್ತುಗಳನ್ನೂ ದೋಚಿಕೊಂಡು ಹೋಗಲು ಒಂದಿರುವರೆಂದು ನನಗೆ ಗೊತ್ತಾದರೂ, ನನ್ನ ಖಡ್ಗವನ್ನು ತೆಗೆದುಕೊಂಡು ಅವರನ್ನು ಎದುರಿಸಲಿಕ್ಕಾಗಲಿ, "ನೀವೇಕಿಲ್ಲಿ" ಎಂದವರನ್ನು ಕೇಳಲಿಕ್ಕಾಗಲಿ ಲಕ್ಷ್ಯಗೊಡದಷ್ಟು ನಾನು ಆ ನೆನಿಕೆ ನಿಧಾನಗಳಲ್ಲಿಯೇ ಮುನಗೂಡಿ ಹೋಗಿದ್ದೆ.

ಆ ಗುರುವಿನ ಕೃತಿ ಮಾತುಗಳ ಸವಿನೆನಪುಗಳನ್ನೆಲ್ಲ ಬರೆಯುವುದನ್ನೇ ನಾನು ಮುಂದರಿಸಿದೆ.

ಆ ಕಳ್ಳರೆಲ್ಲ ಹೊರಟು ಹೋದ ಬಳಿಕ, "ನಿನ್ನ ಒಂದು ಕಂಬಳಿ

ಯನ್ನು ತೆಗೆದುಕೊಂಬವವನು ನಿನ್ನ ಮತ್ತೊಂದು ಕಂಬಳಿಯನ್ನೂ ತೆಗೆದು ಕೊಳ್ಳಲಿ ” ಎಂಬ ಅವನ ನುಡಿ ನನಗೆ ನೆನಪಾಯಿತು. ಆಗ ನನಗೆ ಜ್ಞಾನೋದಯವಾಯಿತು

ಅವನ ನುಡಿಗಳನ್ನು ನಾನು ಬರೆಯುತ್ತ ಕುಳಿತಿರುವಾಗ ಯಾವನೂ, ನನ್ನ ಸಕಲ ಸಂಪತ್ತನ್ನೂ ದೋಚಿಕೊಂಡು ಹೋಗಲೆಂದು ಬಂದವನು ಕೂಡ, ಆ ಬರೆವಣಿಗೆಯ ಕಾರ್ಯವನ್ನು ತಡೆಯಲಾರನು. ಏಕೆಂದರೆ ನನ್ನ ಸೊತ್ತು ಸಂಪತ್ತುಗಳನ್ನೂ ನನ್ನ ಆತ್ಮಪುರುಷನನ್ನೂ ನಾನು ರಕ್ಷಿಸಿಕೊಳ್ಳು ತ್ತಿದ್ದಾಗ್ಯೂ ಆವೆರಡರಲ್ಲಿ ಯಾವದರಲ್ಲಿ ಹೆಚ್ಚಿನ ನಿಧಿಭಾಂಡಾರವಿದೆ ಯೆಂಬದು ನನಗೆ ಗೊತ್ತು!

## ೧೨. ಲ್ಯೂಕ್

ಜೀಸಸ್‌ನು ಡಾಂಭಿಕರನ್ನು ಹೀಗಳೆಯುತ್ತಿದ್ದನು. ಅವನ ಕೋಪವು ಬಿರುಗಾಳಿಯಂತೆ ಅವರನ್ನು ಬಾಧಿಸುತ್ತಿತ್ತು. ಅವನ ದನಿ ಅವರ ಕಿವಿಗಳಿಗೆ ಗುಡುಗಾಗಿತ್ತು, ಅವನು ಅವರನ್ನು ಬೆದರಿಸಿ ಬಿಟ್ಟಿದ್ದನು.

ಅವನಿಗೆ ಹೆದರಿಯೇ ಅವರು ಅವನನ್ನು ಕೊಲ್ಲಲೆಳಸುತ್ತಿದ್ದರು; ಹೋರಿನಲ್ಲಿಯ ಹೆಗ್ಗಣಗಳಂತೆ ಅವನ ಪಾದದಡಿಯ ನೆಲವನ್ನು ಪೊಳ್ಳು ಗೈಯಲೆತ್ನಿಸುತ್ತಿದ್ದರು. ಆದರೆ ಅವರ ಕಳ್ಳಗುಂಡಿಯಲ್ಲಿ ಅವನೆಂದೂ ಸಿಕ್ಕಿಬೀಳಲೇ ಇಲ್ಲ.

ಅವನು ಅಂಥವರನ್ನು ನೋಡಿ ನಕ್ಕುಬಿಡುತ್ತಿದ್ದ; ಏಕೆಂದರೆ ಆತ್ಮವು ಅಣಗಿಸಲ್ಪಡಲಾರದು, ಗುದ್ದಿನಲ್ಲಿ ಕುಸಿ ಬೀಳಿಸಲ್ಪಡಲಾರದು ಎಂಬದನ್ನು ಅವನು ಚೆನ್ನಾಗಿ ಅರಿತಿದ್ದ.

ಅವನು ತನ್ನ ಕೈಯಲ್ಲೊಂದು ಕನ್ನಡಿಯನ್ನು ಹಿಡಿದುಕೊಂಡು ಅದರಲ್ಲಿ, ಉನ್ನತಗುರಿಯ ಬೀದಿಯೊಳಗೆ ಈ ವ್ಯಂಗಳ್ಳರೂ, ಕುಂಟರೂ ಜೋಲಿ ಹೊಡೆಯುತ್ತ ಬೀಳುತ್ತಿರುವುದನ್ನು, ನೋಡುತ್ತಲೇ ಇದ್ದ.

ಇಂಥವರೆಲ್ಲರಿಗಾಗಿ ಅವನು ಕನಿಕರ ಪಡುತ್ತಿದ್ದ. ಅವರನ್ನು ಅವನು ತನ್ನೆತ್ತರಕ್ಕೆ ಏರಿಸಬಹುದಾಗಿತ್ತು, ಅವರ ಹೊರೆಗಳನ್ನೆಲ್ಲ ತಾನೇ ಹೊರ

ಬಹುದಾಗಿತ್ತು; ಇಷ್ಟೇ ಅಲ್ಲ, ಅವರ ನಿರ್ವಿಣ್ಣತೆಯನ್ನು ತನ್ನ ಮಹಾಶಕ್ತಿಯ ಮೇಲೆ ಒರಗಿಸಿಕೊಂಡೂ ಬಿಡಬಹುದಾಗಿತ್ತು.

ಸುಳ್ಳುಗಾರನನ್ನಾಗಲಿ, ಕಳ್ಳನನ್ನಾಗಲಿ, ಕೊಲೆಗಾರನನ್ನಾಗಲಿ, ಅವನು ತೀರ ಹೀಗಳೆಯುತ್ತಿದ್ದಿಲ್ಲ; ಆದರೆ, ಮುಖವಾಡಹೊತ್ತ, ಕೈಚೀಲಗಳಿಂದ ಹಸ್ತಗಳನ್ನು ಮುಚ್ಚಿಕೊಂಡ ಡಾಂಭಿಕರನ್ನು ಮಾತ್ರ ಅವನು ಪುಟ್ಟ ಪೂರಾ ಹೀಯಾಳಿಸುತ್ತಿದ್ದನು.

ಬಂಜೆ ನೆಲದಿಂದ ಪುಣ್ಯಭೂಮಿಗೆಂದು ಹೊರಟವರಿಗೆಲ್ಲ ಆಶ್ರಯ ನೀಡುತ್ತಿದ್ದ, ಆದರೂ ಡಾಂಭಿಕರಿಗಾಗಿ ಮಾತ್ರ ಭದ್ರಮುದ್ರೆಮಾಡಿ ಮುಚ್ಚಲ್ಪಟ್ಟಿದ್ದ ಅವನ ದಿವ್ಯ ಹೃದಯವನ್ನು ಕುರಿತು ನಾನು ಆಗಾಗ ವಿಚಾರ ಮಗ್ನನಾಗಿ ಬಿಡುತ್ತಿದ್ದೆ.

ಒಂದು ದಿನ ದಾಳಿಂಬದ ತೋಟದಲ್ಲಿ ಅವನೊಡನೆ ನಾವೆಲ್ಲ ವಿಶ್ರಾಂತಿಗೊಳ್ಳುತ್ತಿದ್ದಾಗ ಅವನಿಗೆ ನಾನೆಂದೆ: "ಗುರುವೇ, ಪಾಪಿಗಳನ್ನೂ ಅಶಕ್ತರನ್ನೂ, ಚಂಚಲರನ್ನೂ ನೀನು ಕ್ಷಮಿಸುತ್ತೀ, ಸಾಂತ್ವನಗೊಳಿಸುತ್ತೀ. ಆದರೆ ಡಾಂಭಿಕರನ್ನು ಮಾತ್ರ ಸನಿಹಕ್ಕೆ ಬರಗೊಡುವದಿಲ್ಲವಲ್ಲ?"

ಅವನು ಮಾರ್ನುಡಿದ: "ನೀನು ಒಳ್ಳೇ ಆರಿಸಿದ ಮಾತುಗಳಿಂದ ಪಾಪಿ, ಅಶಕ್ತ, ಚಂಚಲ ಎಂದು ನುಡಿದಿರುತ್ತೀ. ಅವರಲ್ಲಿಯ ದೈಹಿಕ ಅಶಕ್ತತೆಗಾಗಿ, ಆತ್ಮಿಕ ಚಂಚಲತೆಗಾಗಿ, ನಾನವರನ್ನು ಕ್ಷಮಿಸುತ್ತೇನೆ. ಏಕೆಂದರೆ ಅವರ ಆ ಅಪಯಶಗಳು ಅವರ ಪೂರ್ವಜರಿಂದಲೋ ಅಥವಾ ಅವರ ನೆರೆಹೊರೆಯವರ ಜಿಪುಣತೆಯಿಂದಲೋ ಅವರ ಮೇಲೆ ಹೇರಲ್ಪಟ್ಟಿರುತ್ತವೆ.

"ಆದರೆ ಡಾಂಭಿಕರನ್ನು ಮಾತ್ರ ನಾನು ಎಂದೂ ಸಹಿಸಲಾರೆ, ಏಕೆಂದರೆ ಅವರೇ ಸ್ವತಃ ನಿಷ್ಕಪಟಿಗಳ ಮೇಲೂ, ಅನತರ ಮೇಲೂ ನೊಗವನ್ನು ಹೇರುತ್ತಾರೆ.

"ನೀವು ಪಾಪಿಗಳೆಂದು ಕರೆಯುವ ಆ ದುರ್ಬಲಾತ್ಮರು, ಗೂಡಿನಿಂದ ಕೆಳಗೆ ಬಿದ್ದ ಗರಿಯೊಡೆಯದ ಮರಿಹಕ್ಕಿಯಂತಿರುವರು. ಆದರೆ ಈ ಡಾಂಭಿಕರು, ಬಲಿಬಿದ್ದವರ ಮರಣಕ್ಕಾಗಿ ಬಂಡೆಗಲ್ಲಮೇಲೆ ಕಾಯ್ದುಕೊಂಡು ಕೂತಿರುವ ರಣಹದ್ದಿನಂತಿರುವರು.

"ಈ ದುರ್ಬಲಾತ್ಮರು ಮರುಳುಗಾಡಿನಲ್ಲಿ ಸಿಕ್ಕು ಶೂನ್ಯರಾದವರು.

ಆದರೆ ಈ ಡಾಂಭಿಕನು ಮಾತ್ರ ಹಾಗಲ್ಲ. ಅವನಿಗೆ ಹಾದಿ ಗೊತ್ತಿದ್ದರೂ, ಈ ತರುಗೆಲೆ–ಬಿರುಗಾಳಿಗಳ ಮಧ್ಯೆ ನಿಂತು ನಗುತ್ತಿರುತ್ತಾನೆ. "ಈ ಕಾರಣ ಕ್ಕಾಗಿ ಅವನಿಗೆ ನನ್ನಲ್ಲಿ ಸ್ವಾಗತವಿಲ್ಲ."

ನನ್ನ ಗುರು ಹೀಗೆ ಹೇಳಿದನು: ಆಗ ಅದು ನನಗೆ ತಿಳಿಯಲಿಲ್ಲ ಈಗ ನನಗದು ತಿಳಿದಿದೆ.

ಆ ಮೇಲೆ ಈ ನಾಡಿನ ಡಾಂಭಿಕರು ಅವನ ಮೇಲೆ ಕೈಮಾಡಿದರು, ಅವನನ್ನು ನ್ಯಾಯ ನಿರ್ಣಯಕ್ಕೆಳೆದರು. ಹೀಗೆ ಮಾಡಿದುದೇ ಯೋಗ್ಯವೆಂದು ಅವರು ತಮ್ಮನ್ನೇ ತಾವು ಸಮರ್ಥಿಸಿಕೊಂಡರು. ಏಕೆಂದರೆ ಅವರು ಸನ್ ಹ್ಯಾಡ್ರಿನದೊಳಗೆ ಸಾಕ್ಷಿಯೆಂದು ಪುರಾವೆಯೆಂದು ಅವನ ವಿರುದ್ಧ ಮ್ಯೂಸಿಸ್ ಕಾಯಿದೆಯನ್ನು ಉದಾಹರಿಸಿದ್ದರು.

ಪ್ರತಿ ಅರುಣೋದಯದಲ್ಲಿಯೂ ಕಾಯಿದೆಯನ್ನು ಭಂಗಿಸುತ್ತಿದ್ದ ಅವರೇ ಮತ್ತೆ ಸೂರ್ಯಾಸ್ತದ ಸಮಯದಲ್ಲೂ ಅದನ್ನು ಮುರಿದು ಅವನ ಮರಣಕ್ಕೆ ಕಾರಣರಾದರು.

## ೧೩. ಮ್ಯಾಥ್ಯೂ : ಗುಡ್ಡದ ಮೇಲಿನ ಬುದ್ಧಿವಾದ

ಸುಗ್ಗಿಯಕಾಲದ ಒಂದುದಿನ ಜೀಸಸನು ನಮ್ಮನ್ನೂ ತನ್ನ ಉಳಿದ ಗೆಳೆಯರನ್ನೂ ಗುಡ್ಡಕ್ಕೆ ಬರಲು ಆಮಂತ್ರಿಸಿದ. ಭೂಮಿತಾಯಿ ಸುಗಂಧ ಬೀರುತ್ತಿದ್ದಳು, ಹಾಗೂ ತನ್ನ ಮದುವೆ ಸಮಾರಂಭದಲ್ಲಿ ಒಡವೆ ವಸ್ತ್ರ ವಜ್ರವೈಡೂರ್ಯಗಳನ್ನು ಧರಿಸಿದ ವಧು ರಾಜಪುತ್ರಿಯಂತಿದ್ದಳು ಆಕಾಶವೇ ಅವಳ ವರನಾಗಿದ್ದ.

ನಾವು ಗುಡ್ಡದ ತುದಿಯನ್ನು ತಲುಪಿದಾಗ ಜೀಸಸ ಅಲ್ಲಿಯ ಲಾರೆಲ್ ವೃಕ್ಷವಾಟಿಕೆಯಲ್ಲಿ ಸ್ತಬ್ಧನಾಗಿ ನಿಂತಿದ್ದು ಹೀಗೆ ನುಡಿದ: "ಇಲ್ಲಿಯೇ ತಡೆಯಿರಿ; ನಿಮ್ಮ ಮನವನ್ನು ಶಾಂತಗೊಳಿಸಿರಿ, ಹೃದಯ ವೀಣೆಯ ತಂತಿ ಗಳನ್ನು ಶ್ರುತಿಗೊಳಿಸಿರಿ; ಏಕೆಂದರೆ ನಾನು ನಿಮಗೆ ಬಹಳ ಬಹಳ ಹೇಳುವದಿದೆ."

ಬಳಿಕ ನಾವು ಅಲ್ಲಿಯೇ ಹುಲ್ಲಮೇಲೆ ಒರಗಿ ಕುಳಿತೆವು ನಮ್ಮ ಸುತ್ತೆಲ್ಲ ವಸಂತ ಸುಮನಗಳು ಗಮಗಮಿಸುತ್ತಿದ್ದವು. ನಮ್ಮ ಮಧ್ಯೆ ಜೀಸಸ ಕುಳಿತನು.

ಜೀಸಸ ನುಡಿದ: ''ಆತ್ಮ ಪ್ರಸನ್ನರು ಧನ್ಯರು.

''ಆಸ್ತಿ ಸ್ವತ್ತುಗಳಿಗೆ ಅಂಟಿಕೊಳ್ಳದವರೂ ಧನ್ಯರು. ಏಕೆಂದರೆ ಅಂಥವರೇ ಮುಕ್ತರಾಗುವರು

''ತಮ್ಮ ನೋವನ್ನು ನೆನೆಸಿಕೊಂಬವರೂ ಧನ್ಯರು, ಹಾಗೂ ತಮ್ಮ ನೋವಿನಲ್ಲಿಯೇ ಸುಖವನ್ನು ಎದುರು ನೋಡುತ್ತಿರುವರೂ ಧನ್ಯರೇ

'' ಸತ್ಯ-ಸೌಂದರ್ಯಗಳ ಹಸಿವೆಯುಳ್ಳವರೂ ಧನ್ಯರೇ; ಏಕೆಂದರೆ ಇಂಥವರ ಹಸಿವೆ, ರೊಟ್ಟಿಯನ್ನು ತರಿಸುವದು. ಇವರ ನೀರಡಿಕೆ, ನೀರನ್ನು ತಂಪುಗೊಳಿಸುವುದು.

'' ದಯಾವಂತರೂ ಧನ್ಯರು ಏಕೆಂದರೆ ತಮ್ಮ ದಯೆಯಿಂದಲೇ ಅವರು ಸಾಂತ್ವನಗೊಳಿಸಲ್ಪಡುವರು.

'' ನಿರ್ಮಲ ಹೃದಯದವರೂ ಧನ್ಯರು, ಏಕೆಂದರೆ ಅವರೇ ದೇವ ನೊಡನೆ ಒಂದುಗೂಡುವರು.

'' ಕರುಣಾಮಯರೂ ಧನ್ಯರು, ಏಕೆಂದರೆ ಕರುಣೆಯೇ ಅವರ ಸಂಚಿತದಲ್ಲಿರುವುದು.

''ಶಾಂತಿ ನಿರ್ಮಾಪಕರೂ ಧನ್ಯರು, ಏಕೆಂದರೆ ಅವರ ಆತ್ಮವು ಸಮರಾ ತೀತತೆಯಲ್ಲಿ ವಾಸಿಸುವುದು; ಹಾಗೂ ಅವರು ಕುಂಬಾರ ಭೂಮಿಯನ್ನು ನಂದನವನವನ್ನಾಗಿ ಮಾರ್ಪಡಿಸುವರು.

'' ಬೇಟೆಗೊಳ್ಳಲ್ಪಟ್ಟವರೂ ಧನ್ಯರೇ,' ಏಕೆಂದರೆ ಅಂಥವರೇ ತ್ವರಿತ ಗತಿಯವರೂ, ಪಕ್ಕ ಪಡೆದವರೂ ಆಗುವರು.

'' ಉತ್ಸಾಹಪೂರಿತರಾಗಿರಿ, ಆನಂದತುಂದಿಲರಾಗಿರಿ, ಏಕೆಂದರೆ ನಿಮ್ಮೊಳಗೇ ನೀವು ಸ್ವರ್ಗರಾಜ್ಯವನ್ನು ಕಂಡಿದ್ದೀರಿ. ಆ ರಾಜ್ಯದ ಗೀತವನ್ನು ಹಾಡಿದ ಹಿಂದಿನ ಸಂಗೀತಗಾರರು ಹಿಂಸಿಸಲ್ಪಟ್ಟಿದ್ದಾರೆ. ನೀವೂ ಹಿಂಸಿಸಲ್ಪಡಬಹುದು. ಅದರಲ್ಲಿಯೇ ನಿಮ್ಮ ಮಾನವಡಗಿದೆ. ನಿಮ್ಮ ಪ್ರತಿ ಫಲವಡಗಿದೆ.

'' ನೀವು ಈ ನೆಲದ ಉಪ್ಪಾಗಿದ್ದೀರಿ. ಎಂದಾದರೂ ತನ್ನ ಉಪ್ಪು

ತನವನ್ನು ಉಪ್ಪೇ ಕಳೆದುಕೊಂಡರೆ ಮಾನವೀ ಹೃದಯ ಭೋಜ್ಯವು ಎಲ್ಲಿಂದ ರುಚಿಗೊಳಿಸಲ್ಪಡುವುದು ?

"ನೀವು ಈ ಲೋಕದ ಬೆಳಕಾಗಿದ್ದೀರಿ. ಆ ಬೆಳಕನ್ನು ಒಂದು ಕಂಟಿಯ ಕೆಳಗೆ ಮುಚ್ಚಿಡಬೇಡಿ. ಅದು ದೇವಪುರವನ್ನು ಹುಡುಕುತ್ತಿರುವವರಿಗಾಗಿ ಶಿಖರದ ಮೇಲಿಂದ ಪ್ರಕಾಶಿಸಲ್ಪಡಲಿ.

"ಈ ಅಕ್ಷರಸ್ಥರ ಹಾಗೂ ಫಾರಿಸೀಗಳ ನಿಯಮಗಳನ್ನು ನಾನು ಹಾಳುಗೆಡವಲು ಬಂದವನೆಂದು ತಿಳಿಯಬೇಡಿ. ಏಕೆಂದರೆ ನಿಮ್ಮೊಡನೆ ನಾನಿರುವ ದಿನಗಳು ಸಂಖ್ಯಾಪರಿಮಿತವಾಗಿವೆ. ನನ್ನ ಶಬ್ದಗಳೂ ಪರಿಮಿತವಾಗಿವೆ, ಹಾಗೂ ಮತ್ತೊಂದು ನಿಯಮವನ್ನು ಪರಿಪೂರ್ತಿಗೊಳಿಸಲು, ಮತ್ತೆ ಒಂದು ಹೊಸ ಒಡಂಬಡಿಕೆಯನ್ನು ತೆರೆದು ತೋರಿಸಲು ನನಗಾಗಿ ಕೆಲವೇ ಗಳಿಗೆಗಳುಳಿದಿವೆ.

"ನೀವು ಹತ್ಯೆ ಮಾಡಕೂಡದೆಂದು ನಿಮಗೆ ಹೇಳಲ್ಪಟ್ಟಿದೆ; ಆದರೆ ಕಾರಣವಿರದೆ ನೀವು ಸಿಟ್ಟಾಗಲೂ ಬಾರದೆಂದು ನಾನು ನಿಮಗೆ ಹೇಳುವೆ.

"ನೀವು ಒಂದು ಆಕಳು ಕರುವನ್ನೋ, ಒಂದು ಕುರಿಯನ್ನೋ, ಒಂದು ಪಾರಿವಾಳವನ್ನೋ ಗುಡಿಗೆ ತಂದು, ಅಲ್ಲಿಯ ವೇದಿಕೆಯ ಮೇಲೆ ಅವನ್ನು ಬಲಿಕೊಟ್ಟು, ಅವುಗಳ ಕೊಬ್ಬಿನ ನಾತದಿಂದ ದೇವರ ಮೂಗಿನ ಹೊರಳೆಗಳನ್ನು ತೃಪ್ತಿಗೊಳಿಸಿ, ನಿಮ್ಮ ಪಾಪಗಳಿಂದ ನೀವು ಕ್ಷಮಿಸಲ್ಪಡುವಂತಾಗಬೇಕೆಂಬ ಪುರಾತನರಿಂದ ನಿಮಗೆ ವಿಧಿಸಲ್ಪಟ್ಟಿರುತ್ತದೆ.

"ಆದರೆ ನಾನು ನಿಮಗೆ ಹೇಳುವೆ, ಮೊದಲಿನಿಂದಲೂ ದೇವರದೇ ಆಗಿದ್ದುದನ್ನು ದೇವರಿಗೇ ನೀವು ಕೊಡುತ್ತೀರಾ ? ಹಾಗೆ ಕೊಟ್ಟು, ಮೌನ ಪಾಳದಾಚೆಗೆ ಯಾವನ ಸಿಂಹಾಸನವಿರುವವೋ ಹಾಗೂ ಯಾವನ ತೋಳುಗಳು ಈ ಬ್ರಹ್ಮಾಂಡವನ್ನೇ ಅಪ್ಪಬಲ್ಲವೋ ಅಂಥವನನ್ನು ಸಂತವಿಸಬಲ್ಲಿರಾ?

"ಹೀಗೆ ಮಾಡದೆ, ನೀವು, ಗುಡಿಗೆ ಹೋಗುವ ಮೊದಲು, ಒಬ್ಬ ಬಂಧುವನ್ನು ಕಂಡು ಅವನೊಡನೆ ಸಮರಸರಾಗಿರಿ; ನಿಮ್ಮ ನೆರೆಹೊರೆಯವರಿಗೆ ಪ್ರೇಮಪಾತ್ರಗಳಾಗಿರಿ. ಏಕೆಂದರೆ ದೇವರ ಈ ಆತ್ಮಗಳಲ್ಲಿಯೇ ಅವಿನಾಶವಾದ ದೇಗುಲವಡಗಿದೆ. ಹಾಗು ಇವರ ಹೃದಯಗಳಲ್ಲಿಯೇ ಅವನು ತನ್ನ ಅಮರ ವೇದಿಕೆಯನ್ನು ನೆಲೆಗೊಳಿಸಿದ್ದಾನೆ.

"ಕಣ್ಣಿಗೆ-ಕಣ್ಣು, ಹಲ್ಲಿಗೆ-ಹಲ್ಲು ಎಂಬು ನಿಮಗೆ ಹೇಳಲ್ಪಟ್ಟಿದೆ. ಆದರೆ ನಾನು ನಿಮಗೆ ಹೇಳುವೆ: ಪಾಪವನ್ನು ಪ್ರತಿರೋಧಿಸಬೇಡಿ; ಏಕೆಂದರೆ ಪ್ರತಿರೋಧವೇ ಅದಕ್ಕೆ ಆಹಾರವಾಗಿ ಅದು ಬಲಗೊಳ್ಳುತ್ತದೆ. ಕೇವಲ ಅಲ್ಪರು ಮಾತ್ರ ಸೇಡಿನ ಭಾವ ತಳೆಯುವರು. ಆತ್ಮಶಕ್ತರು ಕ್ಷಮಾ ಭಾವಿಗಳು. ನೊಂದವರನ್ನು ಕ್ಷಮಿಸುವುದೇ ಮಾನವಂತಿಕೆ.

"ಆಹಾರಕ್ಕಾಗಿ, ಕೇವಲ ಫಲಭರಿತ ವೃಕ್ಷವನ್ನು ಅಲುಗಾಡಿಸು ವರು. ಹಾಗೂ ಕಲ್ಲುಗಳಿಂದ ಹೊಡೆಯುವರು.

"ನಾಳೆಗೇನೆಂದು ಯೋಚನಾಪರರಾಗದೆ ಇಂದಿನದನ್ನು ಮಾತ್ರ ನೋಡಿಕೊಳ್ಳಿ. ಇಂದಿನ ತೃಪ್ತಿಯಲ್ಲಿಯೇ ಅದರ ಸವಾಲವಡಗಿದೆ.

"ನೀವು ದಾನ ಮಾಡುತ್ತಿರುವಾಗ ನಿಮ್ಮ ಬಗ್ಗೆ ಅತಿ ಯೋಚಿಸ ಬೇಡಿ. ಆದರೆ ಅವಶ್ಯಕತೆಯ ಬಗ್ಗೆ ಯೋಚಿಸಿ. ಏಕೆಂದರೆ ಪ್ರತಿ ದಾನಿಯೂ ಆ ಮಹಾದಾತೃವಿನಿಂದಲೇ ಬಹಳಷ್ಟು ಬೇಕಾದಷ್ಟು ಸಮೃದ್ಧಿಯಾಗಿ ಪಡೆದಿರುತ್ತಾನೆ.

"ಅವರವರ ಅವಶ್ಯಕತೆಗಳಿಗನುಸಾರವಾಗಿ ಅವರಿಗೆ ಕೊಡಿರಿ. ಏಕೆಂದರೆ ದೇವರೂ ಕೂಡ, ನೀರಡಿಸಿದವರಿಗೆ ಉಪ್ಪನ್ನು, ಹಸಿದವರಿಗೆ ಕಲ್ಲನ್ನು, ಹಲ್ಲು ಬಂದವರಿಗೆ ಹಾಲನ್ನು ಕೊಡುವದಿಲ್ಲ.

"ಅಲ್ಲದೆ ಪವಿತ್ರವಾದುದನ್ನು ನಾಯಿಗಳಿಗೆ ಕೊಡಬೇಡಿ; ಮುತ್ತು ಗಳನ್ನು ಹಂದಿಗಳಿಗೆ ಹಾಕಬೇಡಿ; ಏಕೆಂದರೆ ಇಂಥ ಕೊಡುಗೆಗಳಿಂದ ನೀವು ಅವುಗಳನ್ನು ಅಣಕಿಸಿದಂತಾಗುತ್ತದೆ; ಅವೂ ಕೂಡ ನಿಮ್ಮ ಕೊಡುಗೆಗಳನ್ನು ಅಣಿಕಿಸುವವಲ್ಲದೆ ಅವು ದ್ವೇಷಪೂರಿತವಾಗಿ ನಿಮ್ಮನ್ನು ನಾಶಗೊಳಿಸುವವು.

"ಭ್ರಷ್ಟರೂ, ಕಳ್ಳರೂ ಕದ್ದೊಯ್ಯುವಂಥ ಸಂಪತ್ತನ್ನು ನೀವು ಇಟ್ಟುಕೊಳ್ಳಬೇಡಿ. ಆದಕ್ಕಿಂತ, ಕೊಳೆಯಾಗದ, ಕಳವಾಗದ ಹಾಗೂ ಬಹಳಜನ ದಿಟ್ಟಿಸಿದಂತೆ ಬಹಳಷ್ಟು ಕಳೆಯೇರುವ ಸಂಪತ್ತನ್ನು ಗಳಿಸಿ ಕೊಳ್ಳಿ. ಏಕೆಂದರೆ ನಿಮ್ಮ ಸಂಪತ್ತಿರುವಲ್ಲಿಯೇ ನಿಮ್ಮ ಹೃದಯವಿದೆ.

"ಕೊಲೆಗಾರನು ಖಡ್ಗಕ್ಕೆ, ಕಳ್ಳನು ಶೂಲಕ್ಕೆ, ಸೂಳೆಯು ಕಲ್ಲ ಹೊಡೆತಕ್ಕೆ ಆಹುತಿಯಾಗಬೇಕೆಂದು ನಿಮಗೆ ಹೇಳಲ್ಪಟ್ಟಿದೆ. ಆದರೆ ನಾನು ನಿಮಗೆ ಹೇಳುವೆ; ನೀವೂ ಕೂಡ ಆ ಕೊಲೆಗಾರನ, ಆ ಕಳ್ಳನ, ಆ

ಸೂಳೆಯ ತಪ್ಪು ಕೃತಿಗಳಿಂದ ಮುಕ್ತರೆಂದೇನೂ ಅಲ್ಲ. ಅವರ ಶರೀರವನ್ನು ನೀವು ಶಿಕ್ಷೆಗೊಳಪಡಿಸಿದಾಗ ನಿಮ್ಮ ಸ್ವತಃದ ಆತ್ಮವನ್ನು ನೀವು ಕತ್ತಲೆಗೊಳಿಸಿಕೊಳ್ಳುತ್ತೀರಿ.

"ಸಾಮಾನ್ಯವಾಗಿ ಯಾವ ಅಪರಾಧವೂ ಕೇವಲ ಒಬ್ಬ ನರನಿಂದ ಅಥವಾ ಒಬ್ಬ ನಾರಿಯಿಂದ ಘಟಿಸುವದಿಲ್ಲ. ಸಕಲ ಅಪರಾಧಗಳು ಸಕಲ್ಪರಿಂದಲೂ ಘಟಿಸಲ್ಪಡುತ್ತವೆ. ತಪ್ಪುದಂಡವನ್ನು ಕೊಡುವಂಥವನು ನಿಮ ಕಾಲೊಳಗಿನ ಸರಪಳಿಯ ಒಂದು ಗೊಣಸನ್ನು ಮುರಿಯುವಂತೆ ಮಾಡಬಹುದು. ಬಹುಶಃ ಗುಗಿದು ಹೋಗಲಿರುವ ನಿಮ್ಮ ಆನಂದದ ಬೆಲೆಯನ್ನೇ ಅವನು ದುಃಖದಿಂದೊಡಗೂಡಿ, ಕೊಡುತ್ತಿರಬಹುದು."

ಜೀಸಸನು ಹೀಗೆ ಮಾತನಾಡಿದ. ಅವನ ಮುಂದೆ ಮೊಳಕಾಲೂರಿ ಅವನನ್ನು ಪೂಜಿಸಬೇಕೆಂದು ನನಗೆ ತೀವ್ರ ಬಯಕೆಯಾಯಿತು. ಆದರೂ ನನ್ನ ಮುಖೀನತೆಯಿಂದ ನನಗೆ ಅಲುಗಾಡಲು, ಒಂದು ಮಾತು ಕೂಡ ಆಡಲು ಆಗಲಿಲ್ಲ

ಆದರೆ ಕೊನೆಗೊಮ್ಮೆ ನನಗೆ ಮಾತು ಬಂತು; ನಾನು ನುಡಿದೆ: "ನನ್ನ ನಾಲಿಗೆ ಜಡವಾಗಿದ್ದರೂ ಈ ಕ್ಷಣದಲ್ಲಿ ನಾನು ಪ್ರಾರ್ಥನೆಗೈಯಬೇಕಾಗಿದೆ. ನನಗೆ ಪ್ರಾರ್ಥನೆಗೈಯಲು ಕಲಿಸು."

ಜೀಸಸ್ ನುಡಿದ: "ಪ್ರಾರ್ಥಿಸಬೇಕೆಂದು ನಿನಗೆ ಎನಿಸಿದಾಗ ನಿನ್ನ ಆಕಾಂಕ್ಷೆಯೇ ಶಬ್ದಗಳನ್ನುಚ್ಚರಿಸಲಿ. ನನ್ನ ಆಕಾಂಕ್ಷೆಯು ಈಗ ಹೀಗೆ ಪ್ರಾರ್ಥನೆಗೈಯಬೇಕೆನ್ನುತ್ತದೆ:

"ಬುವಿಯಲ್ಲೂ, ಬಾನಿನಲ್ಲೂ ತುಂಬಿರುವ ತಂದೆಯೇ,
ನಿನ್ನ ನಾಮ ಪವಿತ್ರವಾದುದು.
ವಿಶ್ವದಲ್ಲಿಯಂತೆ ನಮ್ಮಲ್ಲಿಯೂ ನಿನ್ನ ಸಂಕಲ್ಪವೇ ಸಿದ್ಧಿಸಲಿ.
ಈ ದಿನ ಸಾಲುವಷ್ಟು ಮಾತ್ರ ನಿನ್ನ ಪ್ರಸಾದವನ್ನು
ನಮಗೆ ನೀಡು.
ನಿನ್ನ ಕರುಣೆ ನಮ್ಮನ್ನು ಕ್ಷಮಿಸಲಿ. ಹಾಗೂ
ನಾವು ನಮ್ಮೊಳಗೆ ಒಬ್ಬರನ್ನೊಬ್ಬರು ಕ್ಷಮಿಸುವಂತೆ
ನಮ್ಮನ್ನು ವಿಶಾಲಗೊಳಿಸಲಿ.

ನಿನ್ನ ಎಡೆಗೆ ನಡೆಯುವಂತೆ ನಮಗೆ ದಾರಿದೋರು.
ಕಗ್ಗತ್ತಲಲ್ಲಿ, ನಿನ್ನ ಕರುಣೆಯ ಹಸ್ತವನ್ನು
ಚಾಚಿ ನಮ್ಮ ಕೈವಿಡಿ.
ಏಕೆಂದರೆ, ನಿನ್ನದೇ ಈ ರಾಜ್ಯ. ಅಲ್ಲದೆ ನಮ್ಮ ಶಕ್ತಿಯೂ,
ಸಿದ್ಧಿಯೂ ನೀನೇ !''

ಆಗ ಸಂಜೆಯಾಯಿತು. ಜೀಸಸ್‌ನು ಗುಡ್ಡವಿಳಿದು ಹೊರಟುನಡೆದ. ನಾವೆಲ್ಲರೂ ಅವನನ್ನು ಹಿಂಬಾಲಿಸಿದೆವು. ಅವನ ಬೆಂಬತ್ತಿ ಬರುತ್ತಿರುವಾಗ ನಾನು ನನ್ನೊಳಗೇ ಅವನ ಪ್ರಾರ್ಥನೆಯನ್ನು ಗುಣುಗುಣಿಸುತ್ತಿದ್ದೆ; ಅವನು ನುಡಿದ ಎಲ್ಲ ಮಾತುಗಳನ್ನು ನೆನೆಸಿಕೊಳ್ಳುತ್ತಿದ್ದೆ. ಏಕೆಂದರೆ, ಅಂದು ಗುಂಜುಗುಂಜಾಗಿ ಉದುರಿದಂತಿದ್ದ ಅವನ ನುಡಿಗಳು, ಮುಂದೆ ಸ್ಫಟಿಕ ಮಣಿಯಂತೆ ಅಮಲ ರೂಪು ತಾಳಿ ಬೆಳೆಯುವವೆಂದೂ, ಹಾಗೂ ಅಂದು ನಮ್ಮೆಲ್ಲರ ಮೇಲೆ ಫಡಫಡಿಸಿದ ಪಕ್ಕಗಳು ಮುಂದೆ ಕಬ್ಬಿಣ ಸಳಿಗಳಾಗಿ ಇಳೆಯನ್ನು ಬಡಿದುಬಿಡಲಿವೆಯೆಂಬುದೂ ನನಗೆ ತಿಳಿದಿತ್ತು.

## ೧೪. ಝಬೇದೀ ಪುತ್ರ ಜಾನ್

ಜೀಸಸ್‌ನನ್ನು, ನಮ್ಮಲ್ಲಿ ಕೆಲವರು, 'ಕ್ರೈಸ್ತ'ನೆಂದೂ, ಇನ್ನು ಕೆಲವರು 'ಶಬ್ದ'ವೆಂದೂ, ಬೇರೆ ಹಲವರು 'ನಾಝರೀನ'ನೆಂದೂ ಉಳಿದವರು 'ಮಾನವ ಪುತ್ರ'ನೆಂದೂ ಕರೆಯುತ್ತಿರುವುದನ್ನು ನೀವು ಗಮನಿಸಿರಬಹುದು. ನನಗೀಯಲ್ಪಟ್ಟ ತಿಳಿವೆಳಕಿನಲ್ಲಿ ಈ ಹೆಸರುಗಳ ಸಂಕೇತವನ್ನು ಬಿಡಿಸಿ ಹೇಳಲು ಪ್ರಯತ್ನಿಸುವೆ.

'ಕ್ರೈಸ್ತ' ಎಂದರೆ ಪುರಾತನ ಕಾಲದಿಂದ ಮಾನವನ ಆತ್ಮದಲ್ಲಿ ಬೆಳಗುತ್ತ ಬಂದಿರುವ ದೇವಜ್ಯೋತಿ. ನಮ್ಮನ್ನು ಕಾಣಬರುವ ಹಾಗೂ ನಮ್ಮಂತೆಯೇ ಮಾನವೀದೇಹ ಧರಿಸುವ, ಜೀವನದುಸಿರೇ ಅದು. ಅವನೇ ದೇವರ ಸಂಕಲ್ಪ. ನಮ್ಮ ದನಿಯಿಂದಲೇ ನುಡಿಯುವ, ನಮ್ಮ ಕಿವಿಯಲ್ಲಿಯೇ ಇರುವ, ಹಾಗೂ ನಾವು ಕೇಳಬಯಸುವ ತಿಳಿಯಬಯಸುವ

ಮೊದಲ 'ಶಬ್ದ'ವೇ ಅವನಾಗಿದ್ದಾನೆ. ನಮ-ನಿಮಗೆ ಮಾನವನಂತೆ ಕಾಣ ಬರುವ ಅಸ್ಥಿ-ಮಾಂಸಮಯ ದೇಹಗೃಹದ ದೇವನ ಶಬ್ದವೇ ಅವನು.

ಏಕೆಂದರೆ ನಾವು ಆ ಆಕಾರರಹಿತ ಮಾರುತನ ಹಾಡನ್ನು ಕೇಳ ಲಾರೆವು. ಅಥವಾ ಮಂಜಿನಲ್ಲಿ ಅಡಿಯಾಡುವ ನಮ್ಮ ಬೃಹದಾತ್ಮವನ್ನು ನಾವು ನೋಡಲಾರೆವು.

ಅನೇಕ ಸಲ ಕ್ರೈಸ್ತನು ಈ ಲೋಕದಲ್ಲಿ ಬಂದಿದ್ದಾನೆ. ಹಾಗೂ ಅನೇಕ ದೇಶಗಳಲ್ಲಿ ಅಡಿಯಾಡಿದ್ದಾನೆ. ಆದರೆ ಯಾವಾಗಲೂ ಅವನು ಅಪರಿಚಿತನೆಂದೂ ಮೂಢನೆಂದೂ ಬಗೆಯಲ್ಪಟ್ಟಿದ್ದಾನೆ.

ಆದರೂ ಅವನ ದನಿ ಮಾತ್ರ ಎಂದೂ ಪೊಳ್ಳಿನಲ್ಲಿ ಇಳಿದು ಹೋಗಲಿಲ್ಲ ಏಕೆಂದರೆ ಮಾನವೀ ಮನಸು ಅದನ್ನು ಕಾದಿಟ್ಟುಕೊಳ್ಳಲು ಮನಸು ಮಾಡದಿದ್ದರೂ, ಮಾನವೀ ಸ್ಮೃತಿಯು ಆದನ್ನು ಕಾದಿಟ್ಟು ಕೊಂಡಿರುವದು.

ಅನಂತದೆಡೆಗೆ ಮಾನವರೊಡನೆ ಮುನ್ನಡೆಯುತ್ತಿರುವ ಒಳಗಿನೊಳಗಿನ ಹಾಗೂ ಉನ್ನತೋನ್ನತ ಕ್ರೈಸ್ತನೇ ಇವನು.

ಭಾರತದ ಕೂಡುದಾರಿಗಳಲ್ಲಿ ನೀವವನ ದನಿಯನ್ನು ಕೇಳಿಲ್ಲವೇ? 'ಮಾಗಿ'ಯ ಭೂಮಿಯಲ್ಲಿ, ಈಜಿಪ್ತದ ಉಸುಕಿನಲ್ಲಿ ನೀವವನನ್ನು ಕೇಳಿಲ್ಲವೇ?

ಬಂಧಿತ ಆಕಾಂಕ್ಷೆಯನ್ನು ಮುಕ್ತಗೈದ ಮಾನವನ ಬಯಕೆಗಳನ್ನು ಪರಿಪೂರ್ಣಗೈದ, ಅಗ್ನಿಯ ಆವಾಹಕನಾದ ಪ್ರಾಮಿಥಿಯಸ್‌ನ ಹಾಗೂ ಜನ-ದನಗಳಲ್ಲಿಯ ಆತ್ಮನನ್ನು ಚೇತನಗೊಳಿಸಲು, ದನಿ, ವೀಣೆಗಳೊಡನೆ ಅವತರಿಸಿದ ಆರ್ಫಿಯಸ್‌ನ ಹಾಡುಗಳನ್ನು ಈ ನಿಮ್ಮ 'ಉತ್ತರ ದೇಶ'ದಲ್ಲಿ ಭಟ್ಟಂಗಿಗಳು ಹಾಡಿರುವರು.

ಮೈಥ್ರಾ ಅರಸು ನಿಮಗೆ ಗೊತ್ತಿಲ್ಲವೆ? ಮತ್ತು ಮಾನವನ ಪುರಾತನ ಸಿದ್ಧಿಯಿಂದೆದ್ದು, ನಮ್ಮ ಸ್ವಪ್ನಸುಪ್ತಿಗೆಯ ಬಳಿ ನಿಂತ ಪರ್ಶಿಯನ್ ಪ್ರವಾದಿ ಝೊರಾಸ್ತ್ರನು ನಿಮಗೆ ಗೊತ್ತಿಲ್ಲವೆ?

ಸಾವಿರ ವರುಷಕ್ಕೊಮ್ಮೆ ಆ ಅದೃಶ್ಯದೇಗುಲದಲ್ಲ ಕೂಡಿದಾಗ ನಾವು ಅಭಿಷಿಕ್ತ ಮಾನವರಾಗಿ ಪರಿಣಮಿಸುತ್ತೇವೆ. ಆ ಬಳಿಕ ಒಬ್ಬ ದೇಹಧಾರಿ

ಬರುತ್ತಾನೆ; ಅವನ ಬರುವಿಕೆಯಿಂದ ನಮ್ಮ ಮೌನವೇ ಗೀತವಾಗಿ ಪರಿಣಮಿಸುತ್ತದೆ.

ಆದರೂ, ಯಾವಾಗಲೂ ನಮ್ಮ ಕಿವಿಗಳು ಕೇಳಲು, ನಮ್ಮ ಕಂಗಳು ಕಾಣಲು ತೆರೆದಿರುವದಿಲ್ಲ.

ಈ ನಾಝರಿನ್ ಜೀಸಸ್‌ನೂ, ನಮ್ಮ ನಿಮ್ಮಂತೆಯೇ ಜನಿಸಿ ಬೆಳೆದು ಬಂದನು. ಅವನ ತಾಯಿ-ತಂದೆಗಳೂ ನಮ್ಮ ನಿಮ್ಮ ತಾಯಿತಂದೆಗಳಂತೆಯೇ ಇದ್ದರು. ಹಾಗೂ ಅವನೂ ಮಾನವನೇ ಆಗಿದ್ದ. ಆದರೆ ಅನಾದಿಕಾಲದಿಂದಲೂ ಇದ್ದ ಆ 'ಶಬ್ದ' ಆ ಕ್ರೈಸ್ತ, ಹಾಗೂ ನಮ್ಮ ಸಂಪೂರ್ಣ ಬದುಕನ್ನ ಬದುಕಗೊಡುವ ಆ ಆತ್ಮ ಮಾತ್ರ ಜೀಸಸ್‌ನೆಡೆಗೆ ಬಂದು ಅವನೊಡನೆ ಇತ್ತು.

ಆತ್ಮವು ದೇವದೇವನ ನಿಷ್ಣಾತ ಹಸ್ತವಾಗಿದ್ದು, ಜೀಸಸ್‌ನು ವೀಣೆಯಾಗಿದ್ದ.

ಆತ್ಮವು ಒಂದು ಸ್ತೋತ್ರವಾಗಿದ್ದು, ಜೀಸಸ್‌ನು ಆದರ ಧಾಟಿಯಾಗಿದ್ದ.

ನಮ್ಮೊಡನೆ ಹಗಲಿರುಳು ನಡೆದಾಡುತ್ತಿದ್ದ ಹಾಗೂ ನಮ್ಮನ್ನು ತನ್ನ ಮಿತ್ರರೆಂದು ಕರೆಯುತ್ತಿದ್ದ ಈ ನಾಝರೆಥದ ಮಾನವ ಜೀಸಸ್‌ನು ಯುಜಮಾನನಾಗಿದ್ದ; ಕ್ರೈಸ್ತನ ಮುಖವಾಗಿದ್ದ.

ಆ ದಿನಗಳಲ್ಲಿ ಗ್ಯಾಲಿಲಿಯ ಗುಡ್ಡಗಳು, ಕೊಳ್ಳಗಳು ಅವನ ದನಿಯು ಹೊರತು ಇನ್ನೊಂದು ನಿನಾದವನ್ನು ಕೇಳಿದ್ದಿಲ್ಲ. ಆಗ ನಾನು ಯುವಕನಾಗಿದ್ದೆ, ಅವನ ದಾರಿಯನ್ನೇ ತುಳಿದೆ, ಅವನ ಹೆಜ್ಜೆ ಜಾಡನ್ನೇ ಹಿಡಿದು ನಡೆದೆ.

ಈ ಗ್ಯಾಲಿಲಿಯ ಜೀಸಸ್‌ನ ಮುಖದಿಂದ ಚಿಮ್ಮಿಬರುವ 'ಕ್ರೈಸ್ತ ನುಡಿ'ಗಳನ್ನು ಕೇಳಲೆಂದೇ ನಾನು ಅವನ ದಾರಿಯನ್ನೇ ತುಳಿದೆ, ಅವನ ಹೆಜ್ಜೆ ಜಾಡನ್ನೇ ಹಿಡಿದುನಡೆದೆ.

† † † †

ನಮ್ಮಲ್ಲಿ ಹಲವರು ಅವನನ್ನು 'ಮಾನವ ಪುತ್ರ'ನೆಂದು ಏಕೆ ಕರೆಯುತ್ತಿದ್ದರೆಂಬುದು ನಿಮಗೀಗ ಅರ್ಥವಾಗಬಹುದು.

ಅವನೇ ಸ್ವತಃ ಆ ಹೆಸರಿನಿಂದ ಕರೆಸಿಕೊಳ್ಳಲು ಬಯಸುತ್ತಿದ್ದ. ಏಕೆಂದರೆ ಮಾನವನ ಹಸಿವೆ–ನೀರಡಿಕೆಗಳನ್ನು ಅವನು ಅರಿತಿದ್ದ. ತಮ್ಮ ಮಹಾ ಆತ್ಮದ ಶೋಧನಡೆಸಿದ ಮಾನವರನ್ನು ಅವನು ನಿರೀಕ್ಷಿಸಿದ್ದ.

ಈ ಮಾನವಪುತ್ರನೇ ಕಾರಣಿಕ ಕ್ರೈಸ್ತ. ನಮ್ಮೆಲ್ಲರೊಡನಿದ್ದ ಕ್ರೈಸ್ತ.

ತನ್ನ ಎಲ್ಲ ಬಂಧುಗಳನ್ನು ಅಭಿಷಿಕ್ತತೆಯೆಡೆಗೆ ಅಷ್ಟೇ ಏಕೆ, ಮಹಾ ಆದಿಯಲ್ಲಿ ದೇವನೊಡನಿದ್ದ 'ಶಬ್ದ'ದೆಡೆಗೆ ಕೂಡ ಕೈವಿಡಿದು ಕರೆಯೊಯ್ಯ ಬಲ್ಲವನಾಗಿದ್ದ, ಈ ನಾಝರೀನದ ಜೀಸಸ್.

ನಾವು ಎಚ್ಚರಾಗಿ, ಎದ್ದು, ಹೊರಬಂದು, ಅನಿರ್ಬಂಧಿತವೂ ಅಚ್ಚ ವಳವೂ ಆದ ಸತ್ಯವನ್ನು ದರ್ಶಿಸಬೇಕೆಂದು ನಮ್ಮ ಬಾಗಿಲನ್ನು ಬಡೆಯು ತ್ತಿರುವ **ಆತ್ಮನಾದ,** ನಮ್ಮೆಲ್ಲರನ್ನು ಕವಿಗಳನ್ನಾಗಿಸಿದ **ಕವಿಯೊದ,** ಮಾನವಾತೀತ **ಮಾನವನಾದ** ಗ್ಯಾಲಿಲಿಯ ಈ ಜೀಸಸ್‌ನು ನನ್ನ ಹೃದಯ ಸಿಂಹಾಸನದಲ್ಲಿಯೇ ಮಂಡಿಸಿದ್ದಾನೆ.

## ೧೫. ಕ್ಯಾಪರನಮ್‌ದ ತರುಣ ಪೂಜಾರಿ

ಅವನು ನಖಶಿಖಾಂತ ಒಬ್ಬ ಮಾಯಾವಿ, ಮಂತ್ರವಾದಿಯಾಗಿದ್ದ; ತನ್ನ ಮಾಟ–ಮಂತ್ರಗಳಿಂದ ಸರಳ ಜನರನ್ನು ದಾರಿಗೆಡಿಸುವ ಮನುಷ್ಯ ನಾಗಿದ್ದ. ನಮ್ಮ ಪ್ರವಾದಿಗಳ ನುಡಿಗಳ ಮೇಲೆ, ಹಾಗೂ ನಮ್ಮ ಪೂರ್ವಜರ ಪಾವಿತ್ರ್ಯದ ಮೇಲೆ ಅವನು ತನ್ನ ನಾಗಮೋಡಿಯಾಟವನ್ನು ಆಡುತ್ತಿದ್ದ.

ಸರ್ವದಾ ಅವನು ಸತ್ತವರನ್ನು ತನ್ನ ಸಾಕ್ಷ್ಯಗಳೆಂದೂ, ನಿಶ್ಶಬ್ದ ಗೋರಿಗಳನ್ನು ತನ್ನ ಅಗ್ರಗಾಮಿಗಳೆಂದೂ ಪ್ರಾಮಾಣ್ಯವೆಂದೂ ಹೇಳಿ ಬಿಡುತ್ತಿದ್ದ.

ಜೇಡಹುಳು ನೊಣ ಹಿಡಿಯಲು ತನ್ನ ಜಾಲವನ್ನು ಹೆಣೆಯುವಂತೆ ಅವನು ಜೆರೂಸಲೇಮದ ಹಾಗೂ ಸುತ್ತು–ಮುತ್ತಿನ ಹಳ್ಳಿಯ ಸ್ತ್ರೀಯರನ್ನು ಬಲೆಬೀಳಿಸಲೆತ್ನಿಸುತ್ತಿದ್ದ; ಅವನ ಬಲೆಯಲ್ಲಿ ಅವರು ಸಿಕ್ಕುಬೀಳುತ್ತಿದ್ದರು.

ಸ್ತ್ರೀಯರು ಮೊದಲೇ ಅಬಲೆಯರು, ಬುದ್ಧಿಶೂನ್ಯರು, ಹಾಗೂ ತಮ್ಮಲ್ಲಿ ಅಡಗಿ ಇಡಗಿದ್ದ ವಾಸನೆಯನ್ನು ತಮ್ಮ ಮೃದುಮಧುರ ಮಾತು ಗಳಿಂದ ಸಂತವಿಸುವವರನ್ನು ಅನುಸರಿಸಿ ಹೋಗತಕ್ಕವರು. ಹೀಗೆ ಈ ಸ್ತ್ರೀಯರು ಚಂಚಲರೂ, ಅವನ ಪಾಪಾತ್ಮಕ್ಕೆ ಓತವರೂ ಆಗಿರದಿದ್ದಲ್ಲಿ, ಮಾನವನ ಸ್ಮೃತಿಪಟಲದಿಂದ ಅವನ ಹೆಸರೇ ಅಳಿಸಿಹೋಗುತ್ತಿತ್ತು.

ಮತ್ತೆ ಅವನನ್ನು ಹಿಂಬಾಲಿಸಿದ ಜನರಾದರೂ ಎಂಥವರು? ಪದಾಘಾತ ದಲಿತರೂ, ಭಾರಜಡಿತರೂ ಆದ ಜನಜಂಗುಳಿಯೇ ಅವರಾಗಿದ್ದರು. ತಮ್ಮ ಅಜ್ಞಾನ ಭಯಗಳಿಂದ ಅವರು ತಮ್ಮ ಹಕ್ಕುದಾರ ಯಜಮಾನನನ್ನು ಎಂದೂ ಪ್ರತಿಭಟಿಸುತ್ತಿದ್ದಿಲ್ಲ. ಆದರೆ ಅವನು ತನ್ನ ಮರೀಚಿಕಾ ರಾಜ್ಯದಲ್ಲಿಯ ಉನ್ನತ ಸ್ಥಾನಗಳನ್ನು ಅವರಿಗೆ ನೀಡುವುದಾಗಿ ವಚನ ವಿತ್ತೊಡನೆ, ಅವರು, ಹಸಿಮಣ್ಣು ಕುಂಬಾರನ ಕೈಯಲ್ಲಿ ಒಗ್ಗಿಬರುವಂತೆ, ಅವನಿಗೆ ಶರಣಾಗತರಾದರು.

ದಾಸನು ಯಾವಾಗಲೂ ಯಜಮಾನನಾಗುವ, ಹಾಗೂ, ಹೇಡಿಯು ಯಾವಾಗಲೂ ನರಸಿಂಹನಾಗುವ ಕನಸನ್ನೇ ಕಾಣುತ್ತಿರುವುದು ನಿಮಗೆ ತಿಳಿದಿಲ್ಲವೇ?

ಈ ಗ್ಯಾಲಿಲಿಯನ್‌ನು ಒಬ್ಬ ಮಾಟಗಾರನೂ ಮೋಸಗಾರನೂ ಆಗಿದ್ದ. ಪಾಪಿಗಳ ಪಾಪಗಳನ್ನೆಲ್ಲ ಕ್ಷಮಿಸಿಬಿಟ್ಟು ಅವರ ಪಾಪೀ ಮುಖಗಳಿಂದ ತನ್ನ ಜಯಜಯಕಾರವನ್ನೂ, ಶಹಭಾಸಗಿರಿಯನ್ನೂ ಪಡೆಯುವ ಮನುಷ್ಯನಾಗಿದ್ದ. ದುಷ್ಟರ ಹಾಗೂ ನಿರಾಶರ ಸ್ತಬ್ಧ ಹೃದಯಗಳನ್ನೂಡಿ, ತನ್ನ ಮಾತು ಕೇಳುವ ಶ್ರೋತೃಗಳನ್ನೂ, ತನ್ನ ಅಪ್ಪಣೆ ಪಾಲಿಸುವ ಪರಿವಾರ ವನ್ನೂ ಕೂಡಿಸಿಕೊಂಡ ಮನುಷ್ಯನಾಗಿದ್ದ.

ಪುಣ್ಯದಿನಗಳನ್ನು ಭಂಗಿಸುವವರೊಡನೆ, ಇಂಥ ನಿಯಮಭಂಗಿಗಳ ನೆರವು ತನಗೆ ದೊರೆಯುವದೆಂದು, ಅವನೂ ಭಂಗಿಸುತ್ತಿದ್ದ. ಪ್ರತಿಭಟನೆ ಯಿಂದ ತನ್ನ ಕೀರ್ತಿಯನ್ನು ವರ್ಧಿಸಿಕೊಳ್ಳಲೆಂದೂ, ಸ್ಯಾನ್ ಹ್ಯಾಡ್ರಿನ್ ದಲ್ಲಿ ಸಕಲರ ಲಕ್ಷ್ಯವನ್ನು ತನ್ನೆಡೆಗೆ ವೇಧಿಸಿಕೊಳ್ಳಲೆಂದೂ ಅವನು ನಮ್ಮ ಆಚಾರ್ಯರನ್ನು ವಿರೋಧಿಸಿ ಮಾತನಾಡುತ್ತಿದ್ದ.

ನನಗೆ ಅವನನ್ನು ಕಂಡರಾಗುವದಿಲ್ಲವೆಂದು ನಾನು ಅನೇಕ ಸಲ

ಹೇಳಿದ್ದೇನೆ. ನಮ್ಮ ದೇಶವನ್ನು ಪದಾಕ್ರಾಂತಮಾಡಿ ಆಳುತ್ತಿರುವ ರೋಮನ್ನರಿಗಿಂತಲೂ ಹೆಚ್ಚು ನಾನವನನ್ನು ಸದಾ ದ್ವೇಷಿಸುತ್ತೇನೆ. ನಮ್ಮ ಪ್ರವಾದಿಗಳಿಂದ ಶಪಿಸಲ್ಪಟ್ಟ ಹಾಗೂ ಸಜ್ಜನರಿಗೆ ಶೂಲದಂತಿರುವ ಮತ್ತು ಎಂದೆಂದೂ ಒಳ್ಳೆಯದೆಂಬುದು ಬರದಿರುವ ನಾಝರೆಥದಿಂದಲೇ ಅವನು ಬಂದುದು!

## ೧೬. ನಾಝರೆಥದ ನೆರೆಯ ಒಬ್ಬ ಶ್ರೀಮಂತ ಅರ್ಚಕ

ಅವನು ಒಳ್ಳೇ ಬಡಿಗನಾಗಿದ್ದ. ಅವನು ಮಾಡಿದ ಬಾಗಿಲುಗಳು ಕಳ್ಳರಿಗೆ ಅಭೇದ್ಯವಾಗಿದ್ದವು. ಅವನು ಗೈದ ಕಿಡಕಿಗಳು, ಮೂಡಣ ಪಡುವಣ ಎರಡೂ ಕಡೆಯ ಗಾಳಿಗೂ ತೆರೆದಿಡಲು ಸದಾ ಸಿದ್ಧವಿರುತ್ತಿದ್ದವು.

ಅವನು ಸೆಡಾರ ಕಟ್ಟಿಗೆಯಿಂದ ನಯವಾದ ಹಾಗೂ ಬಾಳಿಕೆ ಬರುವ ಪೆಟ್ಟಿಗೆಗಳನ್ನು ಮಾಡುತ್ತಿದ್ದ; ಗಟ್ಟಿಮುಟ್ಟಾದ ಹಾಗೂ ಕೈಗೆ ಹಾಳತಾದ ರೆಂಟೆ-ಕುಂಟೆಗಳನ್ನೂ ಮಾಡುತ್ತಿದ್ದ.

ನಮ್ಮ ಉಪಾಸನಾ ಮಂದಿರಕ್ಕಾಗಿ ಅವನು ವ್ಯಾಸಪೀಠಗಳನ್ನು ನಿರ್ಮಿಸಿದ್ದ; ಅವುಗಳನ್ನವನು ಹೊಂಬಣ್ಣದ ಹಿಪ್ಪಲಿ ಮರಗಳಿಂದ ನಕ್ಷೆಗೊಳಿಸಿದ್ದ; ಪವಿತ್ರ ಪುಸ್ತಕವಿಡುವ ತಾಣದ ಕೆಳಭಾಗದ ಇಬ್ಬದಿಯಲ್ಲಿಯೂ ಹಾರಹರಡಿರುವ ರೆಕ್ಕೆಗಳನ್ನು ಕೆತ್ತಿದ್ದ; ತಳದಲ್ಲಿ ವಿಶಾಲಗಂಗಳ ಚಿಗರೆಯ, ಪಾರಿವಾಳದ ಹಾಗೂ ಹೋರಿಗಳ ತಲೆಗಳನ್ನು ಬಿಡಿಸಿದ್ದ.

ಇದೆಲ್ಲವನ್ನೂ ಅವನು ಗ್ರೀಕ ಹಾಗೂ ಚೆಲ್ಡೀನ್ಸ್ ಪದ್ಧತಿಗನುಸಾರವಾಗಿ ನಿರ್ಮಿಸಿದ್ದ. ಆದರೂ ಅದರಲ್ಲಿ ಗ್ರೀಕ ಅಥವಾ ಚೆಲ್ಡೀನ ಎರಡರದೂ ಅಲ್ಲದ ಒಂದು ವಿಶಿಷ್ಟ ಕಲಾಚಾತುರ್ಯವಿತ್ತು.

ಈ ನನ್ನ ಮನೆ, ಈಗ ಮೂವತ್ತು ವರ್ಷಗಳ ಹಿಂದೆ ಅನೇಕ ಕಲಾವಿದರಿಂದ ಕಟ್ಟಲ್ಪಟ್ಟಿತ್ತು. ಗ್ಯಾಲಿಲಿಯೊಳಗಿನ ಎಲ್ಲ ಊರುಗಳಿಂದಲೂ ನಾನು ಹುಡುಕಿ ಹುಡುಕಿ ಉಪ್ಪಾರರನ್ನೂ ಬಡಿಗರನ್ನೂ ಕರೆತಂದಿದ್ದೆ. ಅವರಲ್ಲಿ ಕಟ್ಟಡ ಕಟ್ಟುವ ಸಕಲ ಚಾತುರ್ಯವೂ ಕಲೆಯೂ ಇದ್ದವು. ಅವರು ನಿರ್ಮಿಸಿದ ಪ್ರತಿಯೊಂದು ಕೃತಿಯನ್ನೂ ನಾನು ಸಂತಸದಿಂದಲೂ, ತೃಪ್ತಿಯಿಂದಲೂ ಒಪ್ಪಿ ಮೆಚ್ಚಿಕೊಂಡಿದ್ದೆ.

ಆದರೆ ಈಗ, ಇಲ್ಲಿ ಬಂದು, ನಾಝರೇಥದ ಜೀಸಸ್‌ನು ನಿರ್ಮಿಸಿದ ಈ ಎರಡು ಬಾಗಿಲುಗಳನ್ನೂ ಈ ಒಂದು ಕಿಡಕಿಯನ್ನೂ ನೋಡಿರಿ. ತಪ್ಪು ಭದ್ರತೆಯಿಂದ ಅವು ಈ ಮನೆಯೊಳಗಿನ ಉಳಿದೆಲ್ಲವನ್ನೂ ಅಣಕಿಸುವಂತಿವೆ.

ಈ ಎರಡು ಬಾಗಿಲುಗಳು ಉಳಿದೆಲ್ಲ ಬಾಗಿಲುಗಳಿಗಿಂತ ಬೇರೆಯೇ ಆಗಿ ತೋರುವದಿಲ್ಲವೆ ನಿಮಗೆ? ಮೂಡಣಕ್ಕಿರುವ ಈ ಕಿಡಕಿಯೂ ಉಳಿದೆಲ್ಲ ಕಿಡಕಿಗಳಿಗಿಂತ ಬೇರೆಯೇ ಆಗಿಲ್ಲವೆ?

ಅವನು ಗೈದ ಈ ಎರಡು ಬಾಗಿಲ,ಒಂದು ಕಿಡಕಿಗಳನ್ನುಳಿದು ಎಲ್ಲವೂ ಕಾಲಪ್ರವಾಹಕ್ಕೆ ತಲೆವಾಗಿ ಹಳತಾಗುತ್ತಲಿವೆ. ಇವು ಮಾತ್ರ ಪಂಚಭೂತಗಳಿಗೂ ಮೀರಿದವುಗಳಾಗಿವೆ.

ಈ ಕತ್ತರಿದೊಲೆಗಳನ್ನೇ ನೋಡಿ, ಅವನು ಹೇಗೆ ಕೂಡಿಸಿದ್ದಾನೆ? ಈ ಮೊಳೆಗಳೋ, ಒಂದು ಪೈಯಿಂದ ಒಳಸೇರಿಸಲ್ಪಟ್ಟು ಇನ್ನೊಂದು ಪೈಯಲ್ಲಿ ಹೇಗೆ ಬಿಗಿಯಾಗಿ ಕೂಡಿಸಲ್ಪಟ್ಟಿವೆ?

ಆದರೆ ಅತ್ಯಂತ ಅಚ್ಚರಿಯ ಮಾತೆಂದರೆ, ಎರಡಾಳಿನ ಕೂಲಿಗೆ ಯೋಗ್ಯನಾದಂಥ ಈ ಮನುಷ್ಯ ಕೇವಲ ಒಂದಾಳಿನ ಕೂಲಿಯನ್ನೇ ಸ್ವೀಕರಿಸಿದುದು. ಈ ಕೂಲಿಯಾಳೇ ಇಂದು ಇಸ್ರಾಯಿಲದೊಳಗಿನ ಪ್ರವಾದಿಯಾಗಿ ಪರಿಣಮಿಸಿದುದು.

ಕರಗಸ–ಉಳಿಗಳನ್ನು ಹಿಡಿದಿದ್ದ ಈ ಹುಡುಗನೇ ಪ್ರವಾದಿಯೆಂದು ನನಗಾಗ ತಿಳಿದಿದ್ದರೆ ಅವನಿಂದ ಕೆಲಸ ತೆಗೆದುಕೊಳ್ಳುವದಕ್ಕಿಂತ ಉಪದೇಶವನ್ನು ತೆಗೆದು ಕೊಳ್ಳುತ್ತಿದ್ದೆ. ಅವನ ಉಪದೇಶಕ್ಕಾಗಿ ತೀರ ಹೆಚ್ಚಿನ ಬೆಲೆಯನ್ನು ಕೊಡುತ್ತಿದ್ದೆ.

ಈಗ ಕೂಡ, ನನ್ನ ಮನೆಯಲ್ಲಿಯೂ ನನ್ನ ಹೊಲದಲ್ಲಿಯೂ ಅನೇಕ ಜನ ದುಡಿಯುತ್ತಿದ್ದಾರೆ. ಕೈಯಲ್ಲಿ ಸಲಕರಣೆ ಹಿಡಿದ ಈ ಜನರಲ್ಲಿ ಯಾರ ಮೇಲೆ ದೇವರ ವರದ ಹಸ್ತವಿದೆಯೆಂಬದನ್ನು ನಾನೇನು ತಿಳಿಯಬಲ್ಲೆ? ಹೇಗೆ ತಿಳಿಯಬಲ್ಲೆ ?

ಹೌದು ದೈವೀಹಸ್ತವನ್ನು ನಾನೆಂತು ತಿಳಿಯಬಲ್ಲೆ?

# ೧೭. ದಕ್ಷಿಣ ಲೆಬನಾನದ ಕುರುಬ

ವಸಂತ ಋತುವಿನ ಉತ್ತರಾರ್ಧದಲ್ಲಿ ಅವನೂ ಮತ್ತೆ ಮೂವರೂ ಆ ಬೀದಿಯ ಆಚೆಯಿಂದ ನಡೆದು ಹೋಗುತ್ತಿದ್ದರು. ಆಗ ಸಂಜೆಯಾಗಿತ್ತು. ಆ ಹುಲ್ಲುಗಾವಲದಂಚಿಗೆ ಬಂದು ಅವನು ತಡೆದು ನಿಂತನು.

ನಾನು ಕೊಳಲನೂದುತ್ತಿದ್ದೆ. ನನ್ನ ಕುರಿಹಿಂಡು ಸುತ್ತುಮುತ್ತೆಲ್ಲ ಹರಿಬಿದ್ದು ಮೇಯುತ್ತಿತ್ತು. ಅವನು ನಿಂತೊಡನೆ ನಾನೆದ್ದು ಅವನೆಡೆಗೆ ಹೋಗಿ ಅವನೆದುರು ನಿಂತೆ.

ಅವನು ಕೇಳಿದ: "ಎಲಿಜಾಳ ಗೋರಿ ಎಲ್ಲಿದೆ? ಇಲ್ಲೇ ಎಲ್ಲಿಯೋ ಇರಬೇಕಲ್ಲವೆ? "

ನಾನು ಮಾರ್ನುಡಿದೆ: "ಅದು ಅಲ್ಲಿ ಇದೆರೀ; ಆ ಕಲ್ಲುಗುಂಪಿಯ ಕೆಳಗೆ. ಪ್ರತಿದಿನವೂ ಇಲ್ಲಿಂದ ಹಾಯ್ದು ಹೋಗುವವರು ಒಂದೊಂದು ಕಲ್ಲು ತಂದು ಆ ಗುಂಪಿಯ ಮೇಲೆ ಎಸೆದು ಹೋಗುತ್ತಾರೆ. "

ಅವನು ಉಪಕಾರವಾಯಿತೆಂದು ನುಡಿದು ಮುನ್ನಡೆದ. ಆ ಉಳಿದವರೂ ಅವನನ್ನು ಹಿಂಬಾಲಿಸಿದರು.

ಮೂರು ದಿನಗಳಾದ ಬಳಿಕ ನನ್ನ ಒಬ್ಬ ಕುರುಬ ಗೆಳೆಯ ಗ್ಯಾಮಾಲೀಲನು, "ಆ ದಿನ ಇಲ್ಲಿಂದ ಹಾಯ್ದು ಹೋದವನು ಜ್ಯುಡಿಯಾದ ಪ್ರವಾದಿ" ಎಂದು ಹೇಳಿದ. ನಾನು ಆ ಮಾತನ್ನು ನಂಬಲಿಲ್ಲ. ಆದರೂ ಅನೇಕ ತಿಂಗಳವರೆಗೆ ನಾನು ಅವನ ಬಗ್ಗೆ ವಿಚಾರ ಮಾಡುತ್ತಲೇ ಇದ್ದೆ.

ಮಳೆಗಾಲದಾರಂಭದಲ್ಲಿ ಜೀಸಸನು ಮತ್ತೊಮ್ಮೆ ಈ ಹುಲ್ಲುಗಾವಲದಂಚಿನಿಂದ ನಡೆದು ಬರುತ್ತಿದ್ದ. ಈ ಸಲ ಅವನು ಏಕಾಕಿಯಾಗಿದ್ದ.

ಆ ದಿನ ನಾನು ಕೊಳಲನೂದುತ್ತಿದ್ದಿಲ್ಲ. ಏಕೆಂದರೆ ನನ್ನದೊಂದು ಕುರಿ ಕಳೆದುಹೋಗಿ ನಾನು ಚಿಂತೆಗೊಳಗಾಗಿದ್ದೆ; ಎದೆಯೊಡೆದುಕೊಂಡಿದ್ದೆ.

ಅವನು ನನ್ನನ್ನೇ ನೋಡುತ್ತ ನುಡಿದ: ಈ ದಿನ ನೀನೇಕೆ ಕೊಳಲು ನುಡಿಸುತ್ತಿಲ್ಲ? ನಿನ್ನ ಕಂಗಳಲ್ಲಿ ಈ ಅಳಲು ಎಲ್ಲಿಯದು?

ನಾನು ಮಾರ್ನುಡಿದೆ: "ನನ್ನ ಹಿಂಡಿನೊಳಗಿಂದ ಒಂದು ಕುರಿ ಕಳೆದ

ಹೋಗಿದೆ. ಎಲ್ಲೆಲ್ಲಿಯೂ ನಾನದನ್ನು ಹುಡುಕಿದೆ; ಇನ್ನೂ ಸಿಕ್ಕಿಲ್ಲ. ಏನು ಮಾಡಬೇಕೆಂಬದೇ ತಿಳಿಯದಾಗಿದೆ."

ಒಂದು ಕ್ಷಣಕಾಲ ಅವನು ಮೌನವಾಗಿದ್ದು ಬಳಿಕ ನನ್ನೆಡೆಗೆ ತಿರುಗಿ ನಗುತ್ತ ನುಡಿದ: "ಇಲ್ಲಿಯೇ ಸ್ವಲ್ಪ ಹೊತ್ತು ಇರು. ನಾನು ನಿನ್ನ ಕುರಿಯನ್ನು ಹುಡುಕಿ ತರುವೆ." ಹೀಗೆಂದವನೇ ಅವನು ಮುನ್ನಡೆದು ಆ ಗುಡ್ಡದಿನ್ನೆಗಳ ಮಧ್ಯೆ ಕಾಣದಂತಾದ.

ಒಂದು ತಾಸು ಕಳೆದ ಬಳಿಕ ಅವನು ತಿರುಗಿ ಬಂದ. ಅವನ ಬಳಿಯಲ್ಲಿಯೇ ಕುರಿಯೂ ನಡೆದುಬರುತ್ತಿತ್ತು. ಅವನು ನನ್ನ ಬಳಿ ಬಂದು ನಿಂತುಕೊಂಡ. ನಾನವನ ಮುಖವನ್ನು ನೋಡುತ್ತಿರುವಂತೆ ಕುರಿಯೂ ಅವನ ಮುಖವನ್ನು ನಿಟ್ಟಿಸಿ ನೋಡುತ್ತಿತ್ತು. ಬಳಿಕ ನಾನಾ ಕುರಿಯನ್ನು ಬಾಚಿ ತಬ್ಬಿಕೊಂಡೆ.

ಅವನು ನನ್ನ ಹೆಗಲಮೇಲೆ ಕೈಹಾಕುತ್ತ ನುಡಿದ: "ಇಂದಿನಿಂದ ನೀನೀ ಕುರಿಯನ್ನು ನಿನ್ನ ಹಿಂಡಿನೊಳಗಿನ ಉಳಿದೆಲ್ಲವುಗಳಿಗಿಂತಲೂ, ಹೆಚ್ಚಾಗಿ ಪ್ರೀತಿಸು. ಏಕೆಂದರೆ ಇದು ಕಳಕೊಂಡು ಸಿಕ್ಕ ಕುರಿ."

ನಾನು ಮತ್ತೊಮ್ಮೆ ಆ ಕುರಿಯನ್ನು ಬಾಚಿ ತಬ್ಬಿಕೊಂಡೆ. ಅದೂ ನನಗೆ ಹತ್ತಿಕೊಂಡು ನಿಂತಿತು. ನಾನು ಮೌನವಾಗಿದ್ದೆ.

ಉಪಕಾರವಾಯಿತೆಂದು ಜೀಸಸ್‌ನಿಗೆ ಹೇಳಬೇಕೆಂದು ನಾನು ಮೋರೆ ಮೇಲೆತ್ತಿದಾಗ ಅವನು ಅಲ್ಲಿಂದ ಹೊರಟುಬಿಟ್ಟಿದ್ದ. ದೂರ ಹೋಗಿದ್ದ. ಅವನನ್ನು ಬೆಂಬತ್ತಿ ಹೋಗಲು ನನಗೆ ಧೈರ್ಯವಾಗಲಿಲ್ಲ.

## ೧೮. ಸ್ನಾಪಕ ಜಾನ: ತನ್ನೋರ್ವ ಶಿಷ್ಯನಿಗೆ

ಜೀಸಸ್‌ನ ದನಿಯು ರಣರಂಗದಲ್ಲಿ ಕೇಳುತ್ತಿರುವಾಗ ನಾನಿಲ್ಲಿ ಈ ಕೊಳೆಗುದ್ದಿನಲ್ಲಿ ಸುಮ್ಮನಿರಲಾರೆ. ಅವನು ಸ್ವತಂತ್ರನಾದಾಗ ನಾನಿಲ್ಲಿ ತಡೆಹಿಡಿಯಲ್ಪಟ್ಟು ಬಂಧನದಲ್ಲಿರುವನಿಲ್ಲ.

ವಿಷಸರ್ಪಗಳು ಅಲ್ಲಿ ಅವನ ಟೊಂಕಕ್ಕೆ ಸುತ್ತುತ್ತಿರುವವೆಂದು ಅವರು ಹೇಳುತ್ತಾರೆ. ನಾನವರಿಗೆ ಮಾರ್ನುಡಿದೆ: "ವಿಷ ಸರ್ಪಗಳು ಅವನ ಮುಖಾ

ಶಕ್ತಿಯನ್ನು ಜಾಗ್ರತಗೊಳಿಸುವವು; ಅವನು ತನ್ನ ಹಿಂಬಡಗಳಿಂದ ಅವನ್ನು ಜಜ್ಜಿಬಿಡುವನು."

ನಾನು ಕೇವಲ ಅವನ ಮಿಂಚಿನ ಗುಡುಗಾಗಿದ್ದೇನೆ. ನಾನು ಮೊದಲು ಮಾತನಾಡಿದರೂ ಅವನವೇ ನುಡಿಗಳು; ಅವನದೇ ಉದ್ದಿಶ್ಯ.

ಅವರು ನನ್ನನ್ನು ಮುನ್ನೆಚ್ಚರಿಕೆ ಕೊಡದೆ ಹಿಡಿದರು. ಒಂದುವೇಳೆ ಅವರು ಅವನ ಮೇಲೂ ಕೈಮಾಡಬಹುದು. ಆದರೂ, ಅವನು ತನ್ನ ಮಾತುಗಳನ್ನು ಮುಗಿಸುವ ಮುನ್ನ ಅವರು ಹಿಡಿಯಲಾರರು. ಅವನು ಅವರಿಂದ ಪಾರಾಗಲೂ ಬಹುದು.

ಅವನ ರಥವು ಅವರ ಮೇಲೆ ಹಾದುಹೋದೀತು. ಅವನ ಕುದುರೆಗಳ ನಾಲುಗಳು ಅವರನ್ನು ಜಜ್ಜಿಬಿಡಬಹುದು. ಅವನೇ ವಿಜಯಶಾಲಿಯಾಗುವನು.

ಬರ್ಚಿ, ಖಡ್ಗಗಳೊಡನೆ ಅವರು ಅವನಮೇಲೆ ಸಾಗಿಹೋಗಬಹುದು. ಆದರೆ ಅವನು ಅವರನ್ನು ತನ್ನ ಆತ್ಮಶಕ್ತಿಯಿಂದ ಎದುರಿಸುವನು.

ಅವನ ರಕ್ತವು ಭೂಮಿಯ ಮೇಲೆಲ್ಲಾ ಹರಿದಾಡೀತು. ಆದರೆ ಅದರ ಗಾಯ-ನೋವುಗಳನ್ನು ಅವರೇ ಮಾತ್ರ ಅನುಭವಿಸುವರು; ತಮ್ಮ ಪಾಪಲೇಪವೆಲ್ಲ ತೊಳೆಯುವತನಕ ತಮ್ಮ ಕಂಬನಿಯಲ್ಲಿ ತಾವೇ ಮುಳುಮುಳುಗಿ ಏಳುವರು.

ಅವರ ದಂಡುಗಳು ಕಬ್ಬಿಣ ಹಾರೆಗಳೊಡನೆ ಅವನ ಪಟ್ಟಣಗಳ ಮೇಲೆ ಸಾಗಿಹೋಗಬಹುದು. ಆದರೆ ದಾರಿಯಲ್ಲೇ ಅವರು ಜೋರ್ಡಾನ ನದಿಯಲ್ಲಿ ಮುಳುಗಿ ಹೋಗುವರು.

ಅವನ ಕೋಟೆ-ಕೊತ್ತಳಗಳು ಇನ್ನೂ ಹೆಚ್ಚು ಮೇಲಕ್ಕೇರಿ ವಿರಾಜಿಸುವವು. ಅವನ ಯೋಧರ ಢಾಲುಗಳು ರವಿರಶ್ಮಿಯಲ್ಲಿ ಇನ್ನೂ ಹೆಚ್ಚು ಲಕಲಕವಾಗಿ ಹೊಳೆಯುವವು.

ನಾನು ಅವನ ಗುಂಪಿನಲ್ಲಿದ್ದೇನೆಂದು ಅವರೆನ್ನುತ್ತಾರೆ; ಅಲ್ಲದೆ ಜನರ ಮನ ಒಲಿಸಿ ಅವರನ್ನು ಜ್ಯುಡಿಯಾದ ರಾಜ್ಯದ ವಿರುದ್ಧ ಬಂಡೆಬ್ಬಿಸುವುದೇ ನಮ್ಮ ಹವಣಿಕೆಯೆಂದು ಅವರು ಹೇಳುತ್ತಾರೆ.

ನಾನು ಹಾರ್ನ್ನುಡಿದೆ,— ನನ್ನ ಶಬ್ದಗಳ ಬದಲು ಜ್ವಾಲೆಯೇ ಮುಖದಿಂದ

ಹೊರಬಿದ್ದಿದ್ದರೆ ಒಳಿತಾಗುತ್ತಿತ್ತು,— ಈ ವಿಷಮತೆಯ ಕೂಪಕ್ಕೆ ಅವರು ರಾಜ್ಯವೆಂದು ಬಗೆದಿದ್ದರೆ, ಅದು ಏನೂ ಉಳಿಯದಂತೆ ಹಾಳಾಗಿ ಹೋಗಲಿ. ಸೋಡಂ ಮತ್ತು ಗೋಮೋದಾರ ಹಾದಿಯನ್ನೇ ಹಿಡಿಯಲಿ. ಈ ಜನಾಂಗವೇ ದೇವರ ವಿಸ್ಮೃತಿಗೊಳಗಾಗಲಿ. ಈ ಭೂಮಿಯೇ ಬೂದಿಯಾಗಿ ಹೋಗಲಿ.

ಹೌದು, ಈ ಸೆರೆಮನೆಯ ಗೋಡೆಗಳ ನಡುವೆ ಕೂಡ ನಾನು ನಾಝರೆಥದ ಜೀಸೆಸ್‌ನ ಮಿತ್ರನಾಗಿದ್ದೇನೆ. ನನ್ನ ಕಾಲ್ದಳ-ಕುದುರೆ ಸವಾರರ ದಂಡನ್ನು ಅವನು ಮುನ್ನಡೆಸಲಿ. ಕ್ಯಾಪ್ಟನ್ನನಾಗಿದ್ದರೂ ಕೂಡ ನಾನು ಅವನ ಪಾದತ್ರಾಣಗಳ ದಾರವನ್ನು .ಕೂಡ ಸಡಲಿಸುವ ಯೋಗ್ಯತೆಯವನಲ್ಲ.

ಅವನೆಡೆಗೆ ಹೋಗಿರಿ. ನನ್ನ ಈ ಮಾತುಗಳನ್ನೆಲ್ಲ ಅವನ ಮುಂದೆ ಉಸುರಿರಿ. ಆ ಬಳಿಕ ನನ್ನ ಹೆಸರಿನಲ್ಲಿ ಸಾಂತ್ವನವನ್ನೂ ಆಶೀರ್ವಾದವನ್ನೂ ಪ್ರಾರ್ಥಿಸಿರುವೆನೆಂದು ಅವನಿಗೆ ಹೇಳಿರಿ.

ನಾನಿಲ್ಲಿ ಬಹಳ ದಿನ ಇರುವದಿಲ್ಲ. ರಾತ್ರಿಯಲ್ಲಿ ಜಾಗರಣ-ಜಾಗರಣಗಳ ಮಧ್ಯೆ ಈ ಮೈಮೇಲೆ ಆಳತೆಯಿಂದ ನಡೆಯುವ ಮೃದುಪದಹತಿ ನನ್ನ ಅನುಭವಕ್ಕೆ ಬರತೊಡಗಿದೆ. ಹೌಹಾರಿ ನಾನೆದ್ದಾಗ ನನ್ನ ಗೋರಿಯ ಮೇಲೆ ಮಳೆ ಸುರಿಯುತ್ತಿರುವುದು ನನಗೆ ಕೇಳಬರುತ್ತದೆ

ಜೀಸಸ್‌ನೆಡೆ ಹೋಗಿರಿ. ಯಾವನ ಆತ್ಮವು ನೆರಳುಗಳಿಂದ ತುಂಬುತ್ತ ಮತ್ತೆ ಬರಿದಾಗುತ್ತ ನಡೆದಿದೆಯೋ ಅಂಥ ಕೆಡ್ರಾನದ ಜಾನನು ತನಗಾಗಿ ಪ್ರಾರ್ಥಿಸಿದನೆಂದು ಅವನಿಗೆ ಹೇಳಿರಿ: ಗೋರಿ ಅಗೆವವನು ಬಳಿ ಬಂದು ನಿಲ್ಲುವ ಮೊದಲೇ ಹಾಗೂ ಖಡ್ಗಧಾರಿಗಳು, ತಮ್ಮ ಕೂಲಿಗಾಗಿ, ಕೈಯೆತ್ತುವ ಮೊದಲೇ ನೀವು ಅವನೆಡೆಗೆ ಹೋಗಿ ಇದನ್ನೆಲ್ಲ ಹೇಳಿರಿ.

# ೧೯. ಅರಿಮಾಥೀಯ ಜೋಸೆಫನು

ಜೀಸಸ್‌ನ ಪ್ರಥಮೋದ್ದೇಶವೇನೆಂಬುದು ನಿಮಗೆಲ್ಲ ಗೊತ್ತೇ ಇರಬೇಕು; ನಾನು ಅದನ್ನು ಹೇಳುವ ಅಗತ್ಯವಿಲ್ಲ. ಕೃತಾರ್ಥ ದ್ರಾಕ್ಷಿ ಬಳ್ಳಿಯ ಬದುಕನ್ನು ಯಾರೂ ಬೆರಳುಗಳಿಂದ ಮುಟ್ಟಲಾರರು ಅಥವಾ ಅದರ ಟೊಂಗೆಗಳನ್ನು ಪೋಷಿಸುವ ರಸಸಾರವನ್ನು ಕಾಣಲಾರರು.

ದ್ರಾಕ್ಷೆ ಹಣ್ಣುಗಳನ್ನು ನಾನು ತಿಂದಿದ್ದರೂ, ದ್ರಾಕ್ಷಾಚಕ್ರದಲ್ಲಿ ಅದರ ಹೊಸ ಸುಗ್ಗಿಯ ಸವಿಯನ್ನು ಸವಿದಿದ್ದರೂ ಅದೆಲ್ಲವೆಲ್ಲವನ್ನೂ ಹೇಳಲು ನನಗಾಗಲಾರದು.

ಅವನ ಬಗ್ಗೆ ನನಗೆ ಗೊತ್ತಿದ್ದುದನ್ನು ಮಾತ್ರ ನಾನು ಹೇಳಬಲ್ಲೆ.

ನಮ್ಮ ಪ್ರಭು, ನಮ್ಮ ಪ್ರಿಯತಮನು, ಕೇವಲ ಮೂರು ಪ್ರವಾದಿಗಳ ಕಾಲದಷ್ಟು ಮಾತ್ರ ಬದುಕಿದ. ಅವೆಂದರೆ—ಒಂದು ಅವನ ಗೀತಗಳ ವಸಂತ, ಎರಡು, ಅವನ ಆನಂದದ ಬೇಸಿಗೆ, ಮೂರು, ಅವನ ಯಾತನೆ, (ಆಕಾಂಕ್ಷೆ) ಯ ಚಳಿಗಾಲ, ಈ ಪ್ರತಿಯೊಂದು ಋತುವೂ ಒಂದೊಂದು ಸಾವಿರದ ವರ್ಷಗಳದು.

ಅವನ ಗೀತಗಳ ವಸಂತಕಾಲ ಗ್ಯಾಲಿಲಿಯಲ್ಲಿ ಕಳೆಯಿತು. ಅಲ್ಲಿಯೇ ಅವನು, ತನ್ನ ಸುತ್ತುಮುತ್ತು ತನ್ನ ಪ್ರೇಮಿಗಳನ್ನು ಕೂಡಿಸಿದ; ಆ ನೀಲ ಸರೋವರದಂಚಿನಲ್ಲಿಯೇ ಮೊಟ್ಟಮೊದಲು ಅವನು ಮಹಾಪಿತನ ಬಗ್ಗೆ, ನಮ್ಮ ಮುಕ್ತಿಯ ಬಗ್ಗೆ, ಹಾಗೂ ನಮ್ಮ ಸ್ವಾತಂತ್ರ್ಯದ ಬಗ್ಗೆ ಮಾತನಾಡಿದ.

ಆ ಮಹಾಪಿತನೆಡೆಗೆ ಸಾಗುವ ದಾರಿಯನ್ನು ಕಾಣುವುದರಲ್ಲಿ ಆ ಗ್ಯಾಲಿಲಿಯ ಸರೋವರದ ಬಳಿಯಲ್ಲಿ, ನಮ್ಮನ್ನು ನಾವು ಕಳೆದುಕೊಂಡೆವು. ಓ! ಕೇವಲ ಈ ಅಲ್ಪ ಹಾನಿಯೇ ಎಂತಹ ಲಾಭವಾಗಿ ಪರಿಣಮಿಸಿತು.

ಅಲ್ಲಿಯೇ ದೇವದೂತರು ಬಂದು ನಮ್ಮ ಕಿವಿಯಲ್ಲಿ ಹಾಡಿದರು; ಹಾಗೂ ಈ ಋಕ್ಷ ಭೂಮಿಯನ್ನುಳಿದು ಹೃದಯಾಕಾಂಕ್ಷೆಯ ನಂದನವನವನ್ನು ಪ್ರವೇಶಿಸಲು ದಾರಿತೋರಿದರು.

ಅವನು ಹೊಲಗಳ ಬಗ್ಗೆ, ಹಸಿರು ಮುರಿಯುವ ಹುಲ್ಲುಗಾವಲುಗಳ

ಬಗ್ಗೆ, ಮಾತನಾಡಿದ, ಕೊಳ್ಳದೊಳಗಿಂದ ಧೂಳಿನಲ್ಲಿ ಸಾಗುತ್ತಿದ್ದ ಒಂಟಿ ಸವಾರ ಕಡೆಗೆ ಲಕ್ಷ್ಯಗೊಡದೆ ಅರಳುತ್ತಿರುವ ಶ್ವೇತ ಕಮಲಗಳುಳ್ಳ ಲೆಬನಾನದ ಆ ಇಳುಕಲುಗಳ ಬಗ್ಗೆ ಮಾತನಾಡಿದ

ಅಲ್ಲಿ, ಬಿಸಿಲಿನಲ್ಲಿ ನಗುತ್ತಿದ್ದ, ಹಾಗೂ ಬಳಿಸುಳಿಯುವ ಗಾಳಿಗೆ ಧೂಪ ಕಂಪನ್ನು ನೀಡುತ್ತಿದ್ದ ಕಾಡು ಮುಳ್ಳುಗಂಟಿಗಳ ಬಗ್ಗೆ ಮಾತನಾಡಿದ.

ಅವನು ಹೇಳುತ್ತಿದ್ದ:''ಈ ಶ್ವೇತಕಮಲಗಳೂ, ಈ ಮುಳ್ಳುಗಂಟಿಗಳೂ ಕೇವಲ ಒಂದೇ ಒಂದು ದಿನದ ಬಾಳನ್ನು ಬಾಳುತ್ತಿದ್ದರೂ ಆ ಒಂದು ದಿನವೇ ಸ್ವಾತಂತ್ರ್ಯದಲ್ಲಿ ಕಳೆದ ನಿತ್ಯತೆಯಾಗಿದೆ."

ಒಂದು ದಿನ ಸಂಜೆ, ನಾವೆಲ್ಲ ಹಳ್ಳದ ದಂಡೆಯಲ್ಲಿ ಕುಳಿತಾಗ ಅವನು ನುಡಿದ : " ಈ ಹಳ್ಳವನ್ನು ನೋಡಿ, ಅದರ ಸಂಗೀತವನ್ನು ಕಿವಿಗೊಟ್ಟು ಕೇಳಿ. ಎಂದೆಂದೂ ಅದು ಸಾಗರವನ್ನೇ ಹುಡುಕುತ್ತಿರುವುದು. ಕೊನೆವರೆಗೂ ಹೀಗೆ ಅದು ಹವಣಿಸುತ್ತಿದ್ದರೂ, ಅದು ತನ್ನೀ ಗುಪಿತವನ್ನು ದಿನದಿನವೂ ಹಾಡುತ್ತಲೇ ಇರುವುದು.

"ಸರಿತೆಯು ಸಾಗರವನ್ನು ಶೋಧಿಸುತ್ತಿದ್ದಂತೆ ನೀವೂ ಆ ಮಹಾ ಪಿತನಿನಾಗಿ ಶೋಧಿಸಬೇಕು."

ಆ ಬಳಿಕ ಬಂತು ಅವನ ಆನಂದದ ಬೇಸಿಗೆ. ಅದರೊಡನೆ ನಮ್ಮ ಮೇಲಿರುವ ಅವನ ಪ್ರೇಮದ ಜ್ಯೇಷ್ಠವೂ ಬಂತು. ಆಗ ಅವನು ಎರಡನೆಯ ದವರನ್ನು— ನೆರೆಹೊರೆಯವರು, ದಾರಿಕಾರರು, ಪರಕೀಯರು ಹಾಗೂ ನಮ್ಮ ಎಳೆತನದಲ್ಲಿಯ ಗೆಳೆಯರು—ಕುರಿತಲ್ಲದೆ ಇನ್ನೇನನ್ನೂ ನುಡಿಯು ತ್ತಿದ್ದೇ ಇಲ್ಲ

ಮೂಡಣದಿಂದ ಇಜಿಪ್ತದೆಡೆಗೆ ಸಾಗಿದ ದಾರಿಕಾರರನ್ನು ಕುರಿತು, ಸಂಜೆಗೆ ತನ್ನ ಎತ್ತುಗಳೊಡನೆ ಮನೆಗೆ ಮರಳುವ ರಂಟೆ ಹೊಡೆಯುವವ ನನ್ನು ಕುರಿತು, ಮಬ್ಬಾದೊಡನೆ ಅಕಸ್ಮಾತ್ತಾಗಿ ನಮ್ಮ ಮನೆಗೆ ಆಗಮಿಸುವ ಅತಿಥಿಗಳ ಕುರಿತು ಅವನು ಮಾತನಾಡುತ್ತಿದ್ದ.

ಅವನು ಹೇಳುತ್ತಿದ್ದ, "ನಿಮ್ಮ ನೆರೆಯವನೇ ನಿಮ್ಮ ಅಜ್ಞಾತ ಆತ್ಮದ ವ್ಯಕ್ತರೂಪ. ನಿಮ್ಮ ಶಾಂತಕೊಳದಲ್ಲಿ ಅವನ ಮುಖವು ಪ್ರತಿಬಿಂಬಿಸಲ್ಪಟ್ಟ

ರುತ್ತದೆ. ಆದನ್ನು ನೀವು ಲಕ್ಷ್ಯಗೊಟ್ಟು ನೋಡಿದರೆ ನಿಮ್ಮ ಮುಖಭಾವವೇ ಅದೆಂದು ನೀವು ಕಾಣಬಲ್ಲಿರಿ.

"ಇರುಳಿನಲ್ಲಿ ನೀವು ಲಕ್ಷ್ಯಗೊಟ್ಟುಕೇಳಿದರೆ, ಅವನ ಮಾತು ನಿಮಗೆ ಕೇಳಿಸುವುದು. ಅವನ ನುಡಿಗಳೇ ನಿಮ್ಮ ಹೃದಯದಲ್ಲಿ ಸ್ಪಂದಿಸುವವು. ನಿಮಗಾಗಿ ಅವನು ಹೇಗಿರಬೇಕೆಂದು ನೀವು ಬಯಸುತ್ತೀರೋ ಹಾಗೆಯೇ ನೀವೂ ಅವನಿಗಾಗಿ ಇರಬೇಕು.

''ಇದೇ ನನ್ನ ನಿಯಮ; ಇದನ್ನೇ ನಾನು ನಿಮಗೆ ಹೇಳುವೆ, ನಿಮ್ಮ ಮಕ್ಕಳಿಗೆ ಹೇಳುವೆ. ಅವರು ಅವರ ಮಕ್ಕಳಿಗೆ ಹೇಳುವರು. ಹೀಗೆಯೇ ಇದು ಅನಂತ ಕಾಲದವರೆಗೂ, ತಲೆಮಾರು ಮುಗಿಯುವ ತನಕ ನಡೆಯುವದು." ಮತ್ತೊಂದು ದಿನ ಅವನು ಹೀಗೆ ನುಡಿದ: "ನೀವು ನಿಮ್ಮಷ್ಟಕ್ಕೇ ಮಾತ್ರವೆಂದು ಇರಬೇಡಿರಿ. ಇತರರ ಕೃತಿಗಳಲ್ಲಿ ನೀನಿದ್ದೀರಿ. ಇತರರು, ಅವರಿಗೆ ಗೊತ್ತಿಲ್ಲದಂತೆ, ಸದಾಕಾಲ ನಿಮ್ಮೊಡನಿದ್ದಾರೆ. ನಿಮ್ಮ ಹಸ್ತ ಅವರ ಹಸ್ತದೊಡನಿರದೆ ಅವರು ಯಾವದೊಂದು ಅಪರಾಧ ಮಾಡುವದಿಲ್ಲ. ನೀವು ಪತಿತರಾಗದೆ ಅಪರೆಂದೂ ಪತಿತರಾಗುವದಿಲ್ಲ. ನೀವು ಅವರೊಡನೆ ಪಾವನತೆಗೇರದಿದ್ದಲ್ಲಿ ಅವರೂ ಪಾವನತೆಗೇರುವದಿಲ್ಲ. ಪಾವಿತ್ರ್ಯದೆಡೆಗೆಂದು ಅವರು ಸಾಗಿದ ದಾರಿಯೆ ನಿಮ್ಮದೂ ದಾರಿ; ಅವರಿಗೆ ಹಾಳುನೆಲ ಕಂಡು ಬಂದಾಗ ನಿಮಗೂ ಅದೇ ಕಾಣಬರುವದು.

"ನೀವೂ ನಿಮ್ಮ ನೆರೆಯವನೂ, ಹೊಲದಲ್ಲಿ ಬಿತ್ತಿದ ಎರಡು ಬೀಜಗಳಾಗಿದ್ದೀರಿ. ನೀವಿಬ್ಬರೂ ಕೂಡಿಯೇ ಬೆಳೆಯುವಿರಿ, ಗಾಳಿ ಬರಲು ಕೂಡಿಯೇ ಕೊರಳಬಾಗುವಿರಿ. ನಿಮ್ಮಿಬ್ಬರಲ್ಲಿ ಯಾರಿಗೂ ಆ ಹೊಲದ ಅಧಿಕಾರವಿಲ್ಲ. ಏಕೆಂದರೆ ಬೆಳೆಯುತ್ತಿರುವ ಬೀಜವು ತನ್ನ ಆನಂದಲಹರಿಯನ್ನು ಕೂಡ ತನ್ನದೆಂದು ತಿಳಿಯುವದಿಲ್ಲ.

"ಇಂದು ನಾನು ನಿಮ್ಮೊಡನಿದ್ದೇನೆ. ನಾಳೆ ನಾನು ಪಡುವಣದೆಡೆ ಹೋಗಬಹುದು. ಆದರೆ ನಾನು ಹೋಗುವಮುನ್ನ ನಾನು ನಿಮಗೆ ಹೇಳುವೆ: ನಿಮ್ಮ ನೆರೆಯವನೇ ನಿಮ್ಮ ಅಜ್ಞಾತ ಆತ್ಮದ ವ್ಯಕ್ತರೂಪ. ಅವನನ್ನುಪ್ರೇಮದಿಂದ ನೋಡಿರಿ. ಅಂದರೇನೇ ನೀವು ನಿಮ್ಮನ್ನು ತಿಳಿಯಬಲ್ಲಿರಿ. ಏಕೆಂದರೆ ಕೇವಲ ಆ ತಿಳಿವಳಿಕೆಯಲ್ಲಿ ಮಾತ್ರ ನೀವು ನನ್ನ ಬಂಧುಗಳಾಗಬಲ್ಲಿರಿ."

ಆ ಬಳಿಕ ಬಂತು ಅವನ ಯಾತನೆ ( ಆಕಾಂಕ್ಷೆ )ಯ ಚಳಿಗಾಲ.

ಅವನು ನಮಗೆ ಸ್ವಾತಂತ್ರ್ಯದ ಬಗ್ಗೆ ತಿಳಿಹೇಳಿದ; ಅದು ಗ್ಯಾಲಿಲಿಯಲ್ಲಿಯ ಅವನ ಗೀತಗಳ ವಸಂತಕಾಲದ ನುಡಿಯಂತೆಯೇ ಇತ್ತು. ಆದರೂ ಈಗಿನ ಅವನ ಮಾತುಗಳು ನಮ್ಮ ತಿಳಿವಳಿಕೆಯ ಆಳವನ್ನೇ ಶೋಧಿಸಿದ್ದವು.

ಗಾಳಿ ಬಿಟ್ಟಾಗ ಮಾತ್ರ ಉಲಿಯುವ ಎಲೆಗಳ ಬಗ್ಗೆ ಅವನು ಹೇಳಿದ; ಮಾನವನೆಂದರೆ, ಸದ್ಯ ಅಧಿಕಾರದಲ್ಲಿದ್ದ ದೇವದೂತನು ಇನ್ನೊಬ್ಬ ದೇವದೂತನ ತೃಷೆಯನ್ನು ಶಮಿಸಲು ತುಂಬಿಟ್ಟ ಬಟ್ಟಲದಂತೆ ಎಂದೂ, ಆದರೂ ಆ ಬಟ್ಟಲವು, ತುಂಬಿರಲಿ ತೆರವಿರಲಿ ಆ ಮಹೋನ್ನತನ ಎಡೆಯಲ್ಲಿ ತಿಳಿಯಾಗಿಯೇ ಇರುವದೆಂದೂ ಅವನು ಹೇಳಿದ.

ಅವನು ನುಡಿದ: " ನೀವೇ ಬಟ್ಟಲು, ನೀವೇ ಮಧು. ಕೊನೆಹನಿಯವರೆಗೂ ಕುಡಿಯಿರಿ; ಇಲ್ಲವೆ ನನ್ನನ್ನು ನೆನೆಯಿರಿ. ಅಂದರೆ ನಿಮ್ಮ ತೃಷೆ ಶಮಿಸಲ್ಪಡುವುದು."

ದಕ್ಷಿಣದತ್ತ ನಾವು ಹೊರಟಾಗ ಅವನು ನುಡಿದ: "ಒಳ್ಳೆಯ ಅಭಿಮಾನದಿಂದ ಉನ್ನತತಾಣದಲ್ಲಿ ತಲೆಯೆತ್ತಿ ನಿಂತಿರುವ ಈ ಜೆರೂಸಲೇಮವು, ಜೆಹಲಮ್ ಕಾಳಕೊಳ್ಳದ ಆಳದಲ್ಲಿ ಇಳಿದು ಬಿಡುವುದು. ಆದರ ಈ ನಾಶದ ಮಧ್ಯ ನಾನೊಬ್ಬ ಮಾತ್ರ ತಡೆದು ನಿಲ್ಲುವೆನು.

"ದೇಗುಲವು ಬಿದ್ದು ಹುಡಿಗೂಡಿ ಹೋಗುವುದು; ಆದರ ಅಂಗಳದ ಸುತ್ತೆಲ್ಲ ವಿಧವೆಯರ, ಅನಾಥರ ಚೀತ್ಕಾರವು ನಿಮಗೆ ಕೇಳಿಸುವುದು; ಪಾರಾಗುವ ಭರದಲ್ಲಿ ಜನರು ತಮ್ಮ ಬಂಧುಗಳ ಮುಖವನ್ನೂ ಕೂಡ ಗುರುತಿಸುವದಿಲ್ಲ. ಏಕೆಂದರೆ ಮಹಾ ಭಯವು ಅವರನ್ನಾವರಿಸಿರುವದು.

" ಹೀಗಿರುವಾಗೂ ನಿಮ್ಮಲ್ಲಿ ಇಬ್ಬರು ಕೂಡಿ, ಯಾವದೇ ನಾಮೋಚ್ಚಾರಣೆ ಮಾಡಿ ಪಡುವಣದೆಡೆಗೆ ನೋಡಿದರೆ ಅಲ್ಲಿ ನೀವು ನನ್ನನ್ನು ಕಾಣುವಿರಿ ಹಾಗೂ ಈ ನನ್ನ ಮಾತುಗಳು ಆಗ ಮತ್ತೆ ನಿಮ್ಮ ಕಿವಿಗಳ ಮೇಲೆ ಬೀಳುವವು."

ಬೆಥನಿಯ ಗುಡ್ಡವನ್ನು ನಾವು ತಲುಪಿದಾಗ ಅವನು ನುಡಿದ: " ನಾವು ಜೆರುಸಲೇಮಕ್ಕೆ ಹೋಗೋಣ ಆ ಊರು ನಮಗಾಗಿ ಕಾಯುತ್ತಿದೆ.

ನಾನೊಂದು ಕುದುರೆಮರಿಯ ಮೇಲೆ ಕುಳಿತು ಆ ಪಟ್ಟಣವನ್ನು ಪ್ರವೇಶಿಸುವೆ. ಹಾಗೂ ಅಲ್ಲಿಯ ಜನಜಂಗುಳಿಯೆದುರು ಮಾತನಾಡುವೆ.

"ನನ್ನನ್ನು ಬಂಧಿಸುವವರೂ ಅಲ್ಲಿ ಹಲವರಿದ್ದಾರೆ; ನನ್ನ ಕಿಡಿಯನ್ನು ಆರಿಸುವವರೂ ಕೆಲವರಿದ್ದಾರೆ, ಆದರೆ, ನನ್ನ ಮರಣದಲ್ಲಿಯೇ ನೀವು ಜೀವನವನ್ನು ಕಾಣಬಲ್ಲಿರಿ ಹಾಗೂ ನೀವು ಮುಕ್ತರಾಗುವಿರಿ.

"ತನ್ನ ಗೂಡು ಮತ್ತು ಹೊಲಗಳ ನಡುವೆ ಹಾರಾಡುತ್ತಿರುವ ಹಕ್ಕಿಯಂತೆ, ಹೃದಯ ಮತ್ತು ಮನಸುಗಳ ಮಧ್ಯೆ ಸುಳಿದಾಡುತ್ತಿರುವವರ ಉಸಿರನ್ನೇ ಅವರು ಶೋಧಿಸುವರು. ಆದರೆ ನನ್ನ ಉಸಿರು ಈಗಾಗಲೇ ಅವರಿಂದ ಪಾರಾಗಿ ಹೋಗಿದೆ; ಅವರು ನನ್ನ ಮೇಲೆ ಏರಿಬರಲಾರರು.

" ನನ್ನ ಮಹಾಪಿತನು ನನ್ನ ಸುತ್ತು ಕಟ್ಟಿದ ರಕ್ಷಾಗೋಡೆಯು ಪತನವಾಗಲಾರದು. ಅವನು ಪವಿತ್ರಗೊಳಿಸಿದ ಸ್ಥಾನವು ಭ್ರಷ್ಟವಾಗಲಾರದು.

"ಅರುಣೋದಯವಾದಾಗ ಸೂರ್ಯನು ನನ್ನ ತಲೆಗೆ ಕಿರೀಟವತೊಡಿಸುವನು. ಆ ದಿನವನ್ನೆದುರಿಸಲು ನಾನು ನಿಮ್ಮೊಡನೆಯೇ ಇರುವೆನು; ಅಲ್ಲದೆ ಆ ದಿನವು ಸುದೀರ್ಘವಾದುದು ಹಾಗೂ ಜಗವು ಅದರ ಓಹಟೆಯನ್ನು ಕಾಣಲಾರದು.

" ಜ್ಯೂವಾದಿಗಳೂ ಫಾರಿಸೀಗಳೂ, ಈ ನೆಲವು ನನ್ನ ನೆತ್ತರಕ್ಕಾಗಿ ನೀರಡಿಸಿದೆಯೆಂದು ಹೇಳುತ್ತಾರೆ. ನನ್ನ ನೆತ್ತರದಿಂದ ನಾನೀ ನೆಲದ ನೀರಡಿಕೆಯನ್ನು ಹಿಂಗಿಸುತ್ತೇನೆ. ಆದರೆ ಆ ನೆತ್ತರ ಹನಿಗಳಿಂದ ಆಲ-ಅಶ್ವತ್ಥಗಳಂಥ ಮಹಾ ವೃಕ್ಷಗಳು ಉದಯಿಸಿಯಾವು. ಮೂಡಗಾಳಿಗಳು ಆ ಆಲದ ಬೀಜಗಳನ್ನು ಬೇರೆ ಬೇರೆ ಭೂಮಿಗೆ ಒಯ್ದಾವು."

ಬಳಿಕ ಅವನು ನುಡಿದ: "ಜ್ಯೂಡಿಯಾಕ್ಕೆ ಅರಸು ದೊರೆತಾನು. ರೋಮು ರಾಜ್ಯದ ಮೇಲೆ ಅದು ದಾಳಿಮಾಡೀತು. ನಾನದರ ಅರಸನಾಗುವದಿಲ್ಲ. ಝಿಯಾನದ ಕಿರೀಟಗಳು ಕಿರುದಲೆಗಾಗಿ ಕೆತ್ತಿದಂತಿವೆ. ಸಾಲೋಮನ್‌ನ ಉಂಗುರವು ಈ ಬೆರಳಿಗೆ ಚಿಕ್ಕದಾಗಿದೆ.

" ನನ್ನ ಕೈಯನ್ನು ಲಕ್ಷ್ಯಗೊಟ್ಟು ನೋಡಿರಿ; ರಾಜದಂಡಧಾರಿ ಹಸ್ತಕ್ಕೂ ಇದು ಹೆಚ್ಚು ಶಕ್ತವಾಗಿರುವುದೂ ಸಾಮಾನ್ಯ ಖಡ್ಗಧಾರಿ ಹಸ್ತಕ್ಕೂ ಇದು ಹೆಚ್ಚು ಪ್ರಚಂಡವಾಗಿರುವುದೂ ನಿಮಗೆ ಕಾಣುವದಿಲ್ಲವೆ?

"ಇಲ್ಲ,ಸಿರಿಯನ್ ಪ್ಯೈಯನ್ನು ರೋಮನ್ನರ ವಿರುದ್ಧ ನಾನು ನಡೆಸುವ ದಿಲ್ಲ. ಆದರೆ ನೀವು ನನ್ನ ಮಾತುಗಳಿಂದ ಆ ಪಟ್ಟಣವನ್ನು ಎಚ್ಚರಿಸಿರಿ, ನನ್ನ ಆತ್ಮವು ಅದಕ್ಕೆ ಅದರ ಎರಡನೆಯ ಮುಂಬೆಳಗನ್ನು ಕುರಿತು ಹೇಳುವುದು.

"ನನ್ನ ಶಬ್ದಗಳೇ, ಅಶ್ವಗಳಿಂದಲೂ, ರಥಗಳಿಂದಲೂ ಕೂಡಿದ ಅದೃಶ್ಯ ಸೈನ್ಯವಾಗಿದೆ; ಹಾಗೂ ಭಾಲೆ, ಬರ್ಚಿಗಳಿಲ್ಲದೆಯೇ, ನಾನು ಈ ಸೀಝರರನನ್ನೂ, ಜೆರೂಸಲೇಮದ ಆಚಾರ್ಯರನ್ನೂ ಗೆಲ್ಲುವೆನು.

" ದಾಸರನ್ನು ಆಳಲೆಂದು ಒಬ್ಬ ದಾಸನೇ ಕುಳಿತ ಸಿಂಹಾಸನದ ಮೇಲೆ ನಾನು ಎಂದೂ ಕೂಡುವದಿಲ್ಲ. ಅಥವಾ ಇಟಲಿಯ ಪುತ್ರರ ಮೇಲೆಯೂ ನಾನು ಪ್ರತಿಭಟಿಸುವದಿಲ್ಲ.

"ಆದರೆ ನಾನು ಅವರ ಆಕಾಶದಲ್ಲಿಯ ಬಿರುಗಾಳಿಯಾಗುವೆ, ಅವರ ಆತ್ಮದಲ್ಲಿಯ ಗೀತವಾಗುವೆ. ಹಾಗೂ ನಾನು ಸ್ಮರಿಸಲ್ಪಡುವೆ. ಅವರು ನನ್ನನ್ನು ಅಭಿಷಿಕ್ತ ಜೀಸಸ್‌ನೆಂದು ಕರೆಯುವರು."

ಇವೆಲ್ಲ ಮಾತುಗಳನ್ನು ಅವನು, ಜೆರೂಸಲೇಮದ ಹೊರಗೆಯೇ, ಅದನ್ನು ಪ್ರವೇಶಿಸುವ ಮೊದಲೇ ಆಡಿದನು. ಅವನ ಈ ಮಾತುಗಳು ಕಲ್ಲುಗಳಲ್ಲಿ ಕಟೆದಂತಿದ್ದವು.

## ೨೦. ನಾಥಾ ನೀಲ

ನಾರ್ಝರೆಥದ ಜೀಸಸ್‌ನು ನಮ್ರನೂ ಸೌಮ್ಯನೂ ಆಗಿದ್ದನೆಂದು ಅವರೆನ್ನುತ್ತಾರೆ. ಅವನು ನ್ಯಾಯಪರನೂ ನೀತಿವಂತನೂ ಆಗಿದ್ದರೂ, ಅವನು ದುರ್ಬಲನಾಗಿದ್ದು ಮೇಲಿಂದ ಮೇಲೆ ಪ್ರಬಲರ ಪ್ರಭಾವಕ್ಕೊಳಗಾಗುತ್ತಿದ್ದನೆಂದು ಹೇಳುತ್ತಾರೆ. ಅಧಿಕಾರಯುಕ್ತ ಜನರೆದುರು ಅವನು ಸಿಂಹದೆದುರಿನ ಕುರಿಯಂತಾಗುತ್ತಿದ್ದನೆಂದೂ ಹೇಳುತ್ತಾರೆ.

ಆದರೆ ನಾನು ಹೇಳುವೆ: ಜೀಸಸ್‌ನಿಗೆ ಜನರ ಮೇಲೇ ಅಧಿಕಾರ ವಿತ್ತು. ಅವನಿಗೆ ತನ್ನ ಶಕ್ತಿಯ ಅರಿವಿತ್ತು; ಅದನ್ನೇ ಅವನು ಗ್ಯಾಲಿಲಿಯು

ಗುಡ್ಡಗಳ ಮೇಲಿಂದ ಘೋಷಿಸಿದನು, ಜ್ಯುಡಿಯಾ, ಫೊನೀಶಿಯಾ ಪಟ್ಟಣ ಗಳಲ್ಲಿಯೂ ಘೋಷಿಸಿದನು,

"ನಾನೇ ಜೀವನ, ನಾನೇ ಸತ್ಯದ ದಾರಿ " ಎಂದು ಯಾವನೇ ತಲೆ ಬಾಗುವ ಹಾಗು ಮೃದುಮನುಷ್ಯ ನುಡಿದಾನೇ?

" ನಾನೇ ನಮ್ಮ ಮಹಾಪಿತ ದೇವರಲ್ಲಿದ್ದೇನೆ; ಮಹಾಪಿತ ದೇವರು ನನ್ನಲ್ಲಿದ್ದಾನೆ " ಎಂದು ಯಾವನೇ ಸೌಮ್ಯ ಹಾಗೂ ಅವನತ ಮನುಷ್ಯನು ನುಡಿದಾನೇ?

" ಯಾವನು ನನ್ನನ್ನು ನಂಬುವದಿಲ್ಲವೋ, ಅವನು ಈ ಜೀವನ ವನ್ನೂ, ಅನಂತ ಜೀವನವನ್ನೂ ನಂಬಲಾರ" ಎಂದು ತನಗೇ ತನ್ನ ಶಕ್ತಿಯ ಅರಿವಿರದವನು ನುಡಿದಾನೆ?

" ನನ್ನ ನುಡಿಗಳು ಅಳಿದು ಹೋಗುವ ಮುನ್ನ ನಿಮ್ಮ ಜಗತ್ತೇ ಅಳಿದು ಹೋಗಿ ಭಸ್ಮವಾಗಿ ಬಿಡುವುದು " ಎಂದು ನಾಳಿನ ಬಗ್ಗೆ ಸಂಶಯ ದಳೆದವನು ಘೋಷಿಸಿಯಾನೇ?

ಒಬ್ಬ ಸೂಳೆಯನ್ನು ಕರೆತಂದು ಅವನನ್ನು ಮುತ್ತಿದಾಗ " ಯಾವನು ಕೇವಲ ನಿಷ್ಪಾಪನೊ ಅವನೇ ಈಕೆಯ ಮೇಲೆ ಮೊದಲ ಕಲ್ಲೆಸೆಯಲಿ" ಎಂದು ತನ್ನ ಬಗ್ಗೇ ತಾನು ಸಂಶಯಯುತನಾದ ಯಾವನಾದರೂ ನುಡಿದಾನೆ?

ಆಚಾರ್ಯರಿಂದ ಅಧಿಕಾರ ಪಡೆದು ಹಣವಿನಿಮಯ ಮಾಡುತ್ತಿದ್ದವ ರನ್ನೇ ದೇಗುಲದ ಪಟಾಂಗಣದಿಂದ ಹೊರದೂಡಿದವನು ಅಧಿಕಾರಕ್ಕೆ ಬೆದರುವವನೇ?

" ನನ್ನ ಸಾಮ್ರಾಜ್ಯವು ನಿಮ್ಮ ಈ ಮಣ್ಣಿನ ರಾಜ್ಯಗಳಿಗಿಂತಲೂ ಬಹಳ ಮೇಲೆ ಇದೆ " ಎಂದು ಸಾರಿ ಹೇಳುವವನು ಪಕ್ಕಕಡಿದುಹೋದ ಹಕ್ಕಿಯೇ?

" ಈ ದೇಗುಲವನ್ನು ಹಾಳುಗೆಡವಿರಿ; ಮೂರೇ ದಿನಗಳಲ್ಲಿ ನಾನದನ್ನು ಮತ್ತೆ ಕಟ್ಟಿಕೊಡುವೆ" ಎಂದು ಮತ್ತೆ ಮತ್ತೆ ಹೇಳುತ್ತಿದ್ದವನು ಕೇವಲ ಮಾತಿನ ನೆರವನ್ನೇ ನಂಬಿದ್ದವನೇ?

" ಅಸತ್ಯವಾದಿಗಳೇ ಪತಿತರೇ, ತಲೆಮಾಸಿದವರೇ, ಭ್ರಷ್ಟರೇ "

ಎಂದು ಅಧಿಕಾರಯುತರನ್ನು ಅವರ ಸಮಕ್ಷಮವೇ ಕೈಮಾಡಿ ಹೇಳುತ್ತಿದ್ದವನು ಪುಕ್ಕನೆ?

ಜ್ಯುಡಿಯಾದ ಆಳರಸಾಧಿಕಾರಿಗಳೆದುರೇ ಹೀಗೆ ದಿಟ್ಟತನದಿಂದ ನುಡಿಯಲು ಸಮರ್ಥನಾದವನು ಸೌಮ್ಯನೇ, ನಮ್ರನೇ ?

ಅಲ್ಲ. ಗರುಡನು ಅಳಬುರಕ ಆಲದಲ್ಲಿ ತನ್ನ ಗೂಡುಕಟ್ಟಲಾರನು. ಸಿಂಹವು ಪೊದೆಗಳ ಮಧ್ಯೆ ತನ್ನ ಗವಿಯನ್ನು ಮಾಡಿಕೊಳ್ಳಲಾರದು.

ಸಾಂತ್ವನಕ್ಕಾಗಿ ಹಾಗೂ ಸಾಹಚರ್ಯಕ್ಕಾಗಿ ದಲಿತರು ತಮ್ಮೆದುರು ಜೀಸಸ್‌ನೆಂದರೆ ಒಂದು ಮಿಂಚುಹುಳು ಎಂದೂ, ತಮ್ಮ ಹೃದಯ ಮೂಢತೆಯೇ ಸರಿಯೆಂದು ಸಿದ್ಧಗೊಳಿಸಲು ಹೃದಯಮೂಢರು ಜೀಸಸ್‌ನನ್ನು ನಮ್ರ, ಸೌಮ್ಯ ಎಂದೂ, ಹೇಳುವುದನ್ನು ಕೇಳಿದಾಗ ನನ್ನ ಕರುಳೇ ಕಿತ್ತಿಬಂದಂತಾಗಿ ನನಗೆ ಜಾಡ್ಯಬಂದಂತಾಗುತ್ತದೆ.

ಹೌದು; ಇಂಥವರಿಂದಲೇ ನನಗೆ ಹೃದಯಜಾಡ್ಯ ಬಂದಿದೆ. ನಾನು ಘೋಷಿಸುವೆ: ಜೀಸಸ್ ಒಬ್ಬ ಮಹಾವ್ಯಾಧ! ಅಜೇಯ ಪರ್ವತ ಪ್ರಾಯಾತ್ಮ!

## ೨೧. ಆ್ಯಂಟಿಯಾಚ್‌ದ ಸಾಬಾ

ತಾರ್ಸೂಸದ ಸಾಲನು, ಈ ಪಟ್ಟಣದೊಳಗಿನ ಜ್ಯು ಜನರಿಗೆ ಕ್ರೈಸ್ತ ತತ್ವಗಳನ್ನು ಬೋಧಿಸುತ್ತಿರುವುದನ್ನು ಈ ದಿನ ನಾನು ಕೇಳಿದೆ.

ಅವನು ತನ್ನನ್ನು ಪಾಲನೆಂದೂ, ಕುಲೀನರಿಗೆಂದು ಬಂದ ದೇವ ಪ್ರೇರಿತನೆಂದೂ ಹೇಳಿಕೊಳ್ಳುತ್ತಿದ್ದನು.

ನನ್ನ ಚಿಕ್ಕಂದಿನಲ್ಲಿಯೇ ನಾನವನನ್ನು ಬಲ್ಲೆ. ಆ ದಿನಗಳಲ್ಲಿ ಇವನು ನಾಝರೀನನ ಮಿತ್ರರಿಗೆಲ್ಲ ಉಪದ್ರವ ಮಾಡುತ್ತಿದ್ದನು. ಇವನ ಜನರು ಸ್ಟಿಫನ್‌ನೆಂಬ ಪ್ರಭಾವೀ ಯುವಕನನ್ನು ಕಲ್ಲುಗಳಿಂದ ಹೊಡೆಯುತ್ತಿದ್ದಾಗ ಇವನಿಗೆ ಎಷ್ಟು ತೃಪ್ತಿಯೆನಿಸಿತೆಂಬದು ಇನ್ನೂ ನನಗೆ ಸ್ವಚ್ಛಳವಾಗಿ ನೆನಪಿದೆ.

ಈ ಪಾಲನು ನಿಜವಾಗಿಯೂ ವಿಲಕ್ಷಣ ಮನುಷ್ಯನು. ಇವನಾತ್ಮವು ಮುಕ್ತಮಾನವನ ಆತ್ಮವಲ್ಲವೇ ಅಲ್ಲ. ಕೆಲಸಲ ಅವನು ಬೇಟೆಗೆ ಬಲಿಯಾಗಿ

ಗಾಯಗೊಂಡು, ತನ್ನ ನೋವನ್ನು ಈ ಜಗತ್ತಿನಿಂದ ಮರೆಮಾಡಿ ಸಂತವಿಸಿ ಕೊಳ್ಳಲು ಗವಿಯೊಂದನ್ನು ಹುಡುಕುತ್ತಿರುವ ಅಡವಿ ಮೃಗದಂತೆ ಕಾಣು ತ್ತಾನೆ. ಅವನು ಜೀಸಸ್‌ನ ಬಗ್ಗೆ ಹೇಳುವದಿಲ್ಲ ಅಥವಾ ಅವನ ನುಡಿಗಳ ಪುನರುಚ್ಚಾರ ಮಾಡುವದಿಲ್ಲ. ಹಳೆಯ ಪ್ರವಾದಿಗಳು ಭವಿಷ್ಯನುಡಿದ ಮೆಸ್ಸೈಹನನ್ನೇ ಅವನು ಬೋಧಿಸುತ್ತಾನೆ. ಅವನು ವಿದ್ವಾಂಸನಾದ ಜ್ಯೂ ಆಗಿದ್ದರೂ, ತನ್ನ ಬಂಧುಗಳಾದ ಜ್ಯೂ ಜನರನ್ನು ಕುರಿತು ಗ್ರೀಕ ಭಾಷೆಯಲ್ಲಿ ನುಡಿಯುತ್ತಾನೆ; ಅವನ ಗ್ರೀಕ ಭಾಷೆ ಅಡೆತಡೆದದ್ದೂ, ತಪ್ಪುಶಬ್ದ ಪ್ರಯೋಗದ್ದೂ ಆಗಿದೆ.

ಆದರೂ ಅವನಲ್ಲಿ ಹಲಕೆಲವು ಗುಪ್ತಶಕ್ತಿಗಳಿವೆ. ಅವನ ಸುತ್ತು ಮುತ್ತು ಕೂಡಿದವರಿಂದ ಅವನ ಸಾನ್ನಿಧ್ಯವು ಗಟ್ಟಿಗೊಳಿಸಲ್ಪಡುತ್ತದೆ. ಹಲಕೆಲವು ಸಲ ಅವನು ತನಗೇ ತಿಳಿಯದ ಸತ್ಯದ ಬಗ್ಗೆ ಜನರಿಗೆ ತಿಳಿಸುವ ಭರವಸೆ ಕೊಡುತ್ತಾನೆ.

ಜೀಸಸ್‌ನನ್ನು ತಿಳಿದ, ಹಾಗೂ ಅವನ ಸಂಭಾಷಣೆಗಳನ್ನು ಕೇಳಿದ ನಾವು, ಜೀಸಸ್‌ನು, ಮಾನವನು ತನ್ನ ನಿಯಮಗಳ ಬಂಧನ ಭಂಗವನ್ನು ಮಾಡಿ ತನ್ನ ಭೂತಕಾಲದಿಂದ ಮುಕ್ತನಾಗುವದು ಹೇಗೆಂಬದನ್ನು ಬೋಧಿ ಸಿದನೆಂದು ಹೇಳುತ್ತೇವೆ.

ಆದರೆ ಈ ಪಾಲನು ನಾಳಿನ ಮಾನವನಿಗಾಗಿ ನಿಯಮಗಳ ಬಂಧನದ ಕಮ್ಮಾರಿಕೆ ಮಾಡುತ್ತಿದ್ದನು. ತನಗೇ ಗೊತ್ತಿಲ್ಲದವನ ಹೆಸರಿನಲ್ಲಿ ಅವನು ಅಡ್ಡಗಲ್ಲಮೇಲೆ ತನ್ನ ಸುತ್ತಿಗೆಯಿಂದ ಹೊಡೆಯುತ್ತಿದ್ದನು.

ನಾಝರೀನನು ನಮ್ಮನ್ನು ಅನುರಾಗ-ಆನಂದಗಳಲ್ಲಿ ಇರುವಂತೆ ಮಾಡುತ್ತಿದ್ದನು.

ಆದರೆ ತಾರ್ಸೂಸದ ಈ ಮನುಷ್ಯ ನಮಗೆ ಪ್ರಾಚೀನ ಗ್ರಂಥಗಳಲ್ಲಿ ಬರೆದ ನಿಯಮಗಳ ಬಗ್ಗೆ ಎಚ್ಚರದಿಂದ ಇರಲು ಹೇಳುತ್ತಿದ್ದನು.

ಉಸಿರುಗಟ್ಟಿ ಸಾಯುತ್ತಿರುವವರಿಗೆ ಜೀಸಸ್‌ನು ತನ್ನ ಉಸಿರನ್ನೇ ಕೊಟ್ಟನು. ನನ್ನ ಏಕಾಂತ ರಾತ್ರಿಗಳಲ್ಲಿ ನಾನು ನಂಬಿದೆ ಹಾಗೂ ತಿಳಿದು ಕೊಂಡೆ. ಊಟಕ್ಕೆ ಕುಳಿತಾಗ ಅವನು ಕಥೆಗಳನ್ನು ಹೇಳುತ್ತ ಊಟ

ಕೊಟ್ಟವರನ್ನು ಸುಖಿಗಳನ್ನಾಗಿ ಮಾಡುತ್ತಿದ್ದ, ಮಧು-ಮಾಂಸಗಳಿಗೆ ತನ್ನ ಆನಂದದ ಮಸಾಲೆಯುೂಡಿಸುತ್ತಿದ್ದ.

ಆದರೆ ಈ ಪಾಲನು ನಮ್ಮ ಅನ್ನ-ನೀರುಗಳು ಹೇಗೆ ಇರಬೇಕೆಂದು ಪಥ್ಯ ಹೇಳುತ್ತಿದ್ದ.

ನನ್ನ ದೃಷ್ಟಿಕೋನವನ್ನು ಬೇರೆಕಡೆಗೆ ತಿರುಗಿಸಿದುದಕ್ಕಾಗಿ ನಾನೀಗ ಪರಿತಪಿಸುತಿ ರುವೆ.

## ೨೨. ಸಲೋಮಿ ತನ್ನೊಬ್ಬ ಗೆಳತಿಗೆ

ಅವನು, ಹಗಲಿನಲ್ಲಿ ಹೊಳೆ-ಹೊಳೆವ ಮಹೋನ್ನತ ಪಿಪ್ಪಲ ವೃಕ್ಷದಂತಿದ್ದ. ಏಕಾಕಿ ಗುಡ್ಡಗಳ ಮಧ್ಯೆ, ಹಗಲಿನಲ್ಲಿ ಹೊಳೆ-ಹೊಳೆವ ಸರೋವರದಂತಿದ್ದ. ಪರ್ವತದ ಶಿಖರದಮೇಲೆ ಹಗಲಿನಲ್ಲಿ ಹೊಳೆಹೊಳೆವ ಹಿಮದಂತಿದ್ದ.

ಹೌದು, ಅವನು, ಇವೆಲ್ಲವುಗಳಂತೆಯೇ ಇದ್ದ. ನಾನವನನ್ನು ಪ್ರೀತಿಸಿದ್ದೆ. ಆದರೂ, ಅವನ ಸಾನಿಧ್ಯದಲ್ಲಿ ಭಯಪಡುತಿದ್ದೆ. ಅವನ ಚರಣಗಳನ್ನು ನನ್ನ ತೋಳುಗಳಿಂದ ಬಳಸಿ ಅಪ್ಪಿಕೊಳ್ಳುವಂತೆ ನನ್ನ ಪ್ರೇಮಭಾರವನ್ನು ಧರಿಸಿ ಕರೆದೊಯ್ಯಲು ನನ್ನ ಕಾಲುಗಳು ಅಸಮರ್ಥವಾಗಿದ್ದವು. ನಾನವನಿಗೆ ಹೀಗೆ ಹೇಳಬಹುದಿತ್ತು:

ನನ್ನ ವ್ಯಾಮೋಹದಲ್ಲಿ ನಾನು ನಿನ್ನ ಮಿತ್ರನನ್ನು ಕೊಂದೆ.
ನನ್ನ ಈ ಪಾಪವನ್ನು ನೀನು ಕ್ಷಮಿಸಲಾರೆಯಾ ?
ನಿನ್ನ ದಯೆ ಸುರಿಸಿ, ನನ್ನೀ ಕುರಡು ಕೃತಿಯಿಂದ
ನನ್ನ ಎಳೆತನವನ್ನು ಮುಕ್ತಗೊಳಿಸಲಾರೆಯಾ ?
ನಿನ್ನ ಬೆಳಕಿನಲ್ಲಿ ಅದು ಮುನ್ನಡೆವಂತೆ ಮಾಡಲಾರೆಯಾ ?

ಅವನ ಮಿತ್ರನ ಪವಿತ್ರ ಶಿರ ತರಿದ ನನ್ನ ರಣಗುಣಿತವನ್ನು ಅವನು ಕ್ಷಮಿಸಿ ಬಿಡುತ್ತಿದ್ದನೆಂಬದು ನನಗೆ ಗೊತ್ತು. ಅವನು ತನ್ನ ಉಪದೇಶದ ಉದ್ದೇಶವನ್ನೇ ನನ್ನಲ್ಲಿ ಕಂಡು ಬಿಡುತ್ತಿದ್ದನೆಂಬದೂ ನನಗೆ ಗೊತ್ತು.

ಏಕೆಂದರೆ ಅವನು ಸಂಕಗಟ್ಟಿದ ಹಸಿವೆಯ ಕೊಳ್ಳವಿಲ್ಲ. ಅವನು ದಾಟಲಾರದ ದಾಹದ ಮರುಭೂಮಿಯಿಲ್ಲ.

ಹೌದು ಕೊನೆಗೂ ಅವನು ಮಹೋನ್ನತ ಪಿಪ್ಪಲದಂತಿದ್ದ.
ಗುಡ್ಡಗಳ ಮಧ್ಯದ ಸರೋವರದಂತಿದ್ದ,
ಲೆಬನಾನದ ಮೇಲಿನ ಹಿಮದಂತೆ ಇದ್ದ.

ಅವನ ಉಡುಪಿನ ಮಡಿಕೆಯಲ್ಲೇ ನನ್ನ ತುಟಿಗಳನ್ನು ನಾನು ತಂಪುಗೊಳಿಸಬಹುದಿತ್ತು.

ಆದರವನು ನನ್ನಿಂದ ಬಹಳ ದೂರವಿದ್ದ, ನಾನೂ ನಾಚಿಕೊಂಡು ಬಿಟ್ಟಿದ್ದೆ. ಅವನನ್ನು ಕಾಣಬೇಕೆಂಬ ಬಯಕೆ ಹುಟ್ಟಿದಾಗ ನನ್ನ ತಾಯಿಯಿಂದಲೇ ನಾನು ತಡೆಯಲ್ಪಟ್ಟಿದ್ದೆ.

ಅವನು ಹೀಗೆ ಹಾದುಹೋಗುತ್ತಿರುವಾಗ ಅವನ ಸೌಕುಮಾರತೆ ಕಂಡೆ. ನನ್ನ ಹೃದಯ ಮಿಡುಕುತ್ತದೆ. ಆದರೆ ನನ್ನ ತಾಯಿ ಅವನನ್ನು ತಿರಸ್ಕಾರದಿಂದ ದುರುಗುಟ್ಟಿ ನೋಡುತ್ತ ಕಿಡಕಿಯಿಂದ ನೋಡುತ್ತಿರುವ ನನ್ನನ್ನು ಹಿಂದೆಳೆದು ಮಲಗುವ ಕೋಣೆಗೆ ಎಳೆದೊಯ್ಯುತ್ತಿದ್ದಳು.

ಅವಳು ಗಟ್ಟಿಯಾಗಿ ಚೀರುತ್ತ ಹೇಳುತ್ತಿದ್ದಳು :
“ ಮರುಭೂಮಿಯಿಂದ ಬಂದ ಮತ್ತೊಬ್ಬ ಕ್ರಿಮಿಭಕ್ಷಕನಲ್ಲದೆ
ಅವನು ಇನ್ನಾರು ?
ತನ್ನ ಪಾಪಭೂಮಿಯ ನಾಯಿ ನರಿಗಳನ್ನು ಹರಿಬಿಟ್ಟು
ನಮ್ಮ ಮನೆಯಲ್ಲೇ ಬಂದು ಒದರಿ ನಮ್ಮ ಸಿಂಹಾಸನವನ್ನೇ
ಏರಲೆಂದು
ನಮ್ಮನ್ನು ಕಿರೀಟ ರಾಜದಂಡಗಳಿಂದ ದೂರೆಳೆವ ಒಬ್ಬ
ದ್ರೋಹೀ ಬಂಡುಗಾರ,
ಅಣಕುಗಾರ, ಧರ್ಮಭ್ರಷ್ಟನಲ್ಲದೆ ಅವನು ಇನ್ನಾರು ?
ಹೋಗು, ಇಂದಿನಿಂದ ಒಳಗೇ ಅವಿತುಕೊಂಡು ಬಿಡು.
ಅವನ ತಲೆ ಎಂದು ಬೀಳುವುದೆಂಬುದನ್ನು ಕಾಯುತ್ತಿರು.
ಆದರೆ ಅದು ನಿನ್ನ ತಳಿಗೆಯಲ್ಲೇ ಬೀಳುವುದು ಬೇಡ. ”

ಇದೆಲ್ಲವನ್ನೂ ನನ್ನ ತಾಯಿ ಆಡಿದಳು. ಆದರೆ ಅವು ನನ್ನ
ಮನದಲ್ಲಿ ಹೋಗಲೇ ಇಲ್ಲ.
ನಾನು ಅವನನ್ನು ಗುಟ್ಟಾಗಿ ಪ್ರೀತಿಸುತ್ತಿದ್ದೆ.
ನನ್ನ ನಿದ್ದೆ, ಜ್ವಾಲಾಪೇಷ್ಟಿತವಾಗಿತ್ತು.
ಈಗವನು ಹೊರಟು ಹೋಗಿದ್ದಾನೆ.
ನನ್ನೊಳಗಿದ್ದ ಏನೋ ಒಂದೂ ಈಗ ಹೊರಟುಹೋಗಿದೆ;
ಯೌವನಪ್ರಭುವೇ ಕೊಲ್ಲಲ್ಪಟ್ಟದ್ದರಿಂದ
ಇಲ್ಲಿ ಹೆಚ್ಚು ಕಾದುಕೊಂಡಿರಲೊಲ್ಲದ ಅದು
ನನ್ನಲ್ಲಿಯ ಯೌವನವೇ ಆಗಿರಬೇಕು.

## ೨೩. ಶಿಪ್ಸೈ ರಾಜೀಲ

ನಮ್ಮ ನಿಮ್ಮಂತೆಯೇ ಜೀಸಸ್‌ನೂ ರಕ್ತ ಮಾಂಸಗಳಿಂದ ಕೂಡಿದ ಮಾನವನೋ ಅಥವಾ ಮೈಯಿಲ್ಲದೆ ಮನಸಿನಲ್ಲಿದ್ದ ವಿಚಾರವೋ, ಅಥವಾ ಮಾನವನ ದರ್ಶನವನ್ನೇ ಕಾಣುವ ಭಾವನೆಯೋ ಎಂದು ಮೇಲಿಂದ ಮೇಲೆ ನಾನು ಆಶ್ಚರ್ಯಚಕಿತಳಾಗುತ್ತಿದ್ದೆ.

ಎಲ್ಲ ಮುಂಬೆಳಗುಗಳಿಗಿಂತಲೂ ಪ್ರಸನ್ನವಾದ ಮುಂಬೆಳಗಿನಲ್ಲಿ ಹಾಗೂ ಸಕಲ ನಿದ್ದೆಗಳಿಗಿಂತಲೂ ಆಳವಾದ ನಿದ್ದೆಯಲ್ಲಿ ಅಸಂಖ್ಯ ನರ-ನಾರಿಯರೆಲ್ಲ ಒಂದೇ ಹೊತ್ತಿನಲ್ಲಿ ಕಾಣುತ್ತಿದ್ದ ಕನಸೇ ಅವನಾಗಿದ್ದನೆಂದು ನನಗೆ ಮೇಲಿಂದ ಮೇಲೆ ಎನಿಸುತ್ತದೆ.

ನಾವು ಒಬ್ಬರೊಬ್ಬರಿದಿರು ಆ ಕನಸನ್ನು ಹೇಳುತ್ತಿರುವಾಗಲೇ ಅದು ನಿಜವೆಂದೆನಿಸುವಂತೆ,ನಿಶ್ಚಯವಾಗಿಯೂ ಅದು ನನಸಾಗುವುದೆಂದೆನಿಸುವಂತೆ ತೋರುತ್ತಿತ್ತು; ಅದಕ್ಕೆ ನಮ್ಮ ಕಲ್ಪನೆಯು ರೂಪು ಕೊಡುತ್ತಿರುವಾಗ, ನಮ್ಮ ಆಕಾಂಕ್ಷೆಯು ದನಿಯುನ್ನೀಯುತ್ತಿರುವಾಗ ಅದನ್ನು ನಮ್ಮ ಬದುಕಿನ ಬದುಕನ್ನಾಗಿ ಮಾಡಿಬಿಡುತ್ತಿದ್ದೆವು.

ಆದರೆ ನಿಜ ಹೇಳಬೇಕೆಂದರೆ ಅವನೊಂದು ಕನಸಲ್ಲ. ಮೂರು

ವರುಷಗಳಿಂದಲೂ ನಮಗವನು ಗೊತ್ತು. ಮಧ್ಯಾಹ್ನದ ಏರಿಕೆಯ ಬೆಳಕಿನಲ್ಲಿ ನಾವವನನ್ನು ನಮ್ಮ ತೆರೆಗಂಗಳಿಂದ ನೋಡಿದ್ದೆವು.

ನಾವು ಅವನ ಕೈಗಳನ್ನು ಸೋಂಕಿದ್ದೆವು. ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ನಾವವನೊಡನೆ ಹೋಗಿದ್ದೆವು. ಅವನ ಬೋಧಾಮೃತವನ್ನು ಕೇಳಿದ್ದೆವು, ಅವನ ಕೃತಿಗಳನ್ನು ಕಂಡಿದ್ದೆವು. ವಿಚಾರಸಾಗರಕ್ಕಾಗಿ ಸಾಗರಬಿದ್ದ ಒಂದು ವಿಚಾರಸರಿತೆಯೆಂದೂ, ಕನಸಿನ ರಾಜ್ಯದಲ್ಲಿಯ ಒಂದು ಕನಸೆಂದೂ ನಮ್ಮನ್ನು ನೀವು ಎಣಿಸುತ್ತೀರಾ?

ನಿಸರ್ಗವೇ ನಮ್ಮ ಸ್ವಭಾವದಲ್ಲಿ ನೆಲೆಯೂರಿದ್ದರೂ, ನಮ್ಮ ದೈನಂದಿನ ಜೀವನಕ್ಕೆ ಮಹಾ ಘಟನೆಗಳು ಯಾವಾಗಲೂ ಪರಕೀಯವೆಂದೇ ತೋರುವವು. ಅವುಗಳ ಬರುಹೋಗುವಿಕೆಗಳು ಅತ್ಯವಸರವೆಂದು ಕಂಡುಬಂದರೂ ಅವುಗಳ ನಿಜವಾದ ನಿಲುವು ವರ್ಷಾನುವರ್ಷಗಳವರೆಗೆ, ತಲೆತಲಾಂತರಗಳವರೆಗೆ ಉಳಿಯುವದು.

ನಾರೆಥರೆಥದ ಜೀಸಸ್‌ನೇ ಸ್ವತಃ ಒಂದು ಮಹಾ ಘಟನೆ. ಯಾವನ ತಾಯಿ-ತಂದೆ-ಬಂಧುಗಳನ್ನೆಲ್ಲಾ ನಾವು ಬಲ್ಲೆವೋ ಆ ಜೀಸಸ್‌ನೇ ಸ್ವತಃ ಜ್ಯುಡಿಯಾದೊಳಗಿನ ಒಂದು ಪವಾಡವಾಗಿದ್ದನು. ಹೌದು, ಅವನು ಮಾಡಿದ ಎಲ್ಲ ಪವಾಡಗಳನ್ನೂ ಒಂದರ ಮೇಲೊಂದರಂತೆ ಏರಿಸಿ ಅವನ ಕಾಲ ಬಳಿ ಇಟ್ಟರೂ ಅದು ಅವನ ಹದಡಗಳೆತ್ತರಕ್ಕೂ ಬರಲಿಕ್ಕಿಲ್ಲ. ಸರ್ವಕಾಲದ ಸರ್ವ ನದಿಗಳು ತೇಲಿಸಿಕೊಂಡು ಹೋದರೂ ನಮ್ಮಲ್ಲಿರುವ ಅವನ ನೆನಪು ತೇಲಿಹೋಗಲಾರದು.

ಇರುಳಿನಲ್ಲಿ ಉರಿಯುತ್ತಿರುವ ಪರ್ವತದಂತೆ ಅವನಿದ್ದ; ಆದರೂ ಅವನು ಪರ್ವತಗಳಾಚಿನ ಸೌಮ್ಯ ತಿಳಿವೆಳಕಾಗಿದ್ದ. ಅವನು ಬಾನಿನಲ್ಲಿಯ ಬಿರುಗಾಳಿಯಾಗಿದ್ದ; ಆದರೂ ಮುಂಬೆಳಗಿನ ಮಂಜಿನಲ್ಲಿಯ ಮಂಜುಳರವವಾಗಿದ್ದ. ಪರ್ವತದಿಂದ ಬೈಲಿಗೆ ಧುಮುಕುತ್ತ ತನ್ನ ದಾರಿಗಡ್ಡಬರುವ ಸಕಲವನ್ನೂ ಕೊಚ್ಚಿಕೊಂಡುಹೋಗುವ ಘನಘೋರ ಪ್ರವಾಹದಂತಿದ್ದ. ಹಾಗೂ ಹಸುಗೂಸಿನ ಮೆಲುನಗೆಯಂತೆಯೂ ಇದ್ದ.

ಈ ಕೊಳ್ಳವನ್ನು ಕಾಣಲೆಂದು ಪ್ರತಿ ವರುಷವೂ ನಾನು ವಸಂತದ ದಾರಿ ನೋಡುತ್ತಿದ್ದೆ. ಪದ್ಮಗಳಿಗಾಗಿ ಪಾರಿಜಾತಗಳಿಗಾಗಿ ನಾನು ಕಾಯು

ತ್ತಿದ್ದೆ. ಸಾಧ್ಯವಿಲ್ಲೆಂದು ಗೊತ್ತಿದ್ದರೂ ವರುಷದ ತುಂಬೆಲ್ಲ ಈ ವಸಂತವೇ ಕಂಡುಬಂದು ಏಕೆ ಸಂತಸಗೊಳಿಸಬಾರದೆಂದು ಪ್ರತಿ ವರುಷವೂ ನನ್ನೊಳಗೇ ನಾನು ಖಿನ್ನಳಾಗುತ್ತಿದ್ದೆ.

ನನ್ನ ಜೀವನ ಋತುಗಳಲ್ಲಿ ಜೀಸಸ್‌ನ ಪ್ರವೇಶವಾದಾಗ ಅವನೇ ನಿಜವಾಗಿಯೂ ವಸಂತ ಋತುವಾಗಿಬಿಟ್ಟ. ಬರಲಿರುವ ಎಲ್ಲ ಕಾಲದ ಭರವಸೆಯೂ ಅವನಲ್ಲಿತ್ತು. ಅವನು ನನ್ನ ಹೃದಯವನ್ನು ಆನಂದದಿಂದ ತುಂಬಿದ. ಸೂರ್ಯೋದಯದ ಬೆಳಕಿನಲ್ಲಿ ಅರಳುತ್ತಿರುವ ಕೋಮಲ ಕಮಲದಂತೆ ಅವನ ಬೆಳಕಿನಲ್ಲಿ ನಾನು ಬೆಳೆದೆ.

ಈ ಐಹಿಕ ಜಗದ ಬದಲಾಗುತ್ತಿರುವ ಋತುಮಾನಗಳು ನಮ್ಮವಲ್ಲವಾಗಿದ್ದರೂ ನಮ್ಮೀ ಜಗದಿಂದ ಅವನ ಅನುರಾಗವನ್ನು ಅಳುಕಿಸಲಾರವು.

ಇಲ್ಲ, ಜೀಸಸ್‌ನು ಒಂದು ಇರುಳನೆರಳಾಗಿದ್ದಿಲ್ಲ, ಕವಿಸಮಯವಾಗಿದ್ದಿಲ್ಲ. ನಮ್ಮ ನಿಮ್ಮಂತೆಯೇ ಅವನೂ ಮಾನವನೇ ಆಗಿದ್ದ. ಅದು ಕೇವಲ ನೋಟ, ಸೋಂಕು, ಕೇಳಿಕೆಗಾಗಿ ಮಾತ್ರ; ಉಳಿದೆಲ್ಲ ರೀತಿಗಳಲ್ಲಿ ಅವನು ನಮ್ಮಂತಿದ್ದಿಲ್ಲ.

ಅವನು ಆನಂದಪುರುಷನಾಗಿದ್ದ. ಆ ಆನಂದದ ದಾರಿಯಲ್ಲಿಯೇ ಅವನು ಸಕಲ ಜನರ ದುಃಖಗಳನ್ನೆಲ್ಲ ಅವನು ಕಂಡಿದ್ದ, ಅವನು ತನ್ನ ದುಃಖಗಳ ಎತ್ತರ ಮಾಳಿಗೆಯಿಂದಲೇ ಸಕಲ ಜನರ ಆನಂದವನ್ನೂ ನಿಟ್ಟಿಸಿ ನೋಡಿದ್ದ.

ನಾವು ಕಾಣದ ದರ್ಶನಗಳನ್ನವನು ಕಂಡಿದ್ದ, ನಾವು ಕೇಳದ ದನಿಯನ್ನು ಕೇಳಿದ್ದ. ಅದೃಶ್ಯ ಜನಸಮೂಹಕ್ಕಾಗಿಯೇ ಎನ್ನುವಂತೆ ಅವನು ಮಾತನಾಡಿದ. ಆಗಾಗ್ಗೆ ಅವನು, ಇನ್ನೂ ಜನಿಸದ ಜನಾಂಗಕ್ಕಾಗಿಯೇ ನಮ್ಮ ಮುಖಾಂತರ ಮಾತನಾಡಿದ.

ಜೀಸಸ್‌ನು ಸದಾ ಏಕಾಕಿಯಾಗಿದ್ದ. ಅವನು ನಮ್ಮ ಮಧ್ಯೆ ಇದ್ದರೂ ನಮ್ಮೊಡನಿರುತ್ತಿದ್ದಿಲ್ಲ. ಅವನು ಭೂಮಿಯ ಮೇಲಿದ್ದರೂ ಬಾನಿನವನಾಗಿದ್ದ. ನಮ್ಮ ಏಕಾಕಿತನದಲ್ಲಿ ಮಾತ್ರ ನಾವವನ ಏಕಾಂತ ಭೂಮಿಯನ್ನು ಪ್ರವೇಶಿಸಬಹುದಾಗಿತ್ತು.

ಕೋಮಲ ಪ್ರೀತಿಯಿಂದ ಅವನು ನಮ್ಮನ್ನೆಲ್ಲ ಪ್ರೀತಿಸಿದ. ಅವನ

ಹೃದಯವೊಂದು ಮಧುಗೃಹವಾಗಿತ್ತು. ನಾನು ನೀವು ಬೇಕಾದವರು ಬಟ್ಟಲ ತೆಗೆದುಕೊಂಡು ಹೋಗಿ ಅಲ್ಲಿಯ ಮಧುವನ್ನೀಂಟಬಹುದಾಗಿತ್ತು.

ಜೀಸಸ್‌ನಲ್ಲಿಯ ಒಂದು ವಿಷಯ ಮಾತ್ರ ನನಗೆ ತಿಳಿದಿರಲಿಲ್ಲ. ಅದೆಂದರೆ: ಅವನು ಶ್ರೋತೃಗಳೊಡನೆ ನಲಿದಾಡುತ್ತಿದ್ದರೂ, ನಗೆ ನುಡಿಗಳನ್ನು ಆಡುತ್ತಿದ್ದರೂ, ಮಾತಿನ ಚೆಲ್ಲಾಟವಾಡುತ್ತಿದ್ದರೂ, ತುಂಬು ಹೃದಯದಿಂದ ನಗುತ್ತಿದ್ದರೂ,— ಆದರೂ ಅವನ ಕಂಗಳಲ್ಲಿ ದೂರದ ಆಳವಡಗಿತ್ತು, ದನಿಯಲ್ಲಿ ವಿಷಾದವಡಗಿತ್ತು. ಈಗ ಮಾತ್ರ ನನಗದರ ಅರ್ಥ ತಿಳಿದಿದೆ.

ಈ ಭೂಮಿಯೆಂದರೆ ಚೊಚ್ಚಿಲು ಬಸಿರಿ ಸ್ತ್ರೀಯೆಂದು ನನಗೆ ಹಗಲೆಲ್ಲ ಎನಿಸುತ್ತದೆ. ಜೀಸಸ್ ಜನಿಸಿದಾಗ, ಅವನೇ ಆ ಚೊಚ್ಚಿಲು ಮಗುವಾಗಿದ್ದ. ತೀರಿಕೊಂಡಾಗ ಅವನೇ ಮರಣವನ್ನೆದುರಿಸಿದ ಮೊದಲ ಮಾನವನಾಗಿದ್ದ

ಏಕೆಂದರೆ ಆ ಕರಿ ಶುಕ್ರವಾರ ಭೂಮಿಯೇ ಸ್ತಬ್ಧವಾಗಿದ್ದುದೂ, ಸ್ವರ್ಗಗಳು ಸ್ವರ್ಗಗಳೊಡನೆ ಹೋರಾಡುತ್ತಿದ್ದುದೂ ನಿಮಗೆ ಕಂಡು ಬರಲಿಲ್ಲವೇ ?

ಅವನ ಮುಖ ನಮ್ಮ ದೃಷ್ಟಿಯಿಂದ ಮರೆಯಾದಾಗ, ನಾವೆಲ್ಲ ಶೂನ್ಯರಾಗಿ ಕೇವಲ ಮಂಜಿನಲ್ಲಿಯ ಸ್ಮೃತಿಯಂತಾದದ್ದು ನಿಮಗನಿಸಿಲ್ಲವೆ?

## ೨೪. ಬೆಥ್ರೋನದ ಕ್ಲಿಯೋಪಾಸ್

ಜೀಸಸ್ ಮಾತನಾಡಿದರೆ ಅದನ್ನು ಕೇಳಲು ಜಗತ್ತೇ ಮುನ್ನುಗ್ಗುತ್ತಿತ್ತು. ಅವನ ನುಡಿಗಳು ಕೇವಲ ನಮ್ಮ ಕಿವಿಗಳಿಗಾಗಿ ಇದ್ದಿಲ್ಲ; ಆದರೆ ದೇವರು ಯಾವದರಿಂದ ಈ ಪೃಥ್ವಿಯನ್ನು ಸೃಷ್ಟಿಸಿದನೋ ಆ ಪಂಚಭೂತಗಳಿಗಾಗಿ ಇದ್ದವು.

ನಮಗೆ ಜನ್ಮವಿತ್ತ ನಮ್ಮ ವಿಶಾಲತಾಯಿ ಸಾಗರದೊಡನೆ ಅವನು ಮಾತನಾಡಿದ. ನಮ್ಮ ಜೇಷ್ಠ ಭ್ರಾತೃವಾದ ಯಾವದರ ಶಿಖರಗಳು ಸಾಲೋಕ್ಯವಚನಬದ್ಧವೋ ಆ ಪರ್ವತಗಳೊಡನೆ ಅವನು ಮಾತನಾಡಿದ.

ನಮ್ಮ ಮೈ ಬಿಸಿಲಿಗೆ ಬಿರುಸಾಗುವ ಮುನ್ನ ನಾವು ನಮ್ಮ ಕನಸ

ಗಳನ್ನು ಒಪ್ಪಿಸಿದ. ಹಾಗೂ ಸಾಗರಪರ್ವತಗಳಿಂದಾಚೆಗೆ ಇರುವ ದೇವದೂತರೊಡನೆ ಅವನು ಮಾತನಾಡಿದ.

ಅವನ ನುಡಿಗಳು ಇನ್ನೂ ನಮ್ಮ ಹೃದಯದಾಳದಲ್ಲಿ, ಅರೆಮರೆತ ಪ್ರೇಮಗೀತಗಳಂತೆ ತೂಕಡಿಸುತ್ತಿರುತ್ತವೆ; ಹಾಗೂ ಕೆಲಕೆಲವು ಸಲ ನಮ್ಮ ಸ್ಮೃತಿಯ ಮುಖಾಂತರ ಉರಿದೇಳುತ್ತಿರುತ್ತವೆ. ಅವನ ನುಡಿಗಳು ಸರಳವೂ ಆನಂದದಾಯಕವೂ ಆಗಿದ್ದವು; ಅವನ ದನಿಯ ನಿನದವು ಮರುಭೂಮಿಯಲ್ಲಿಯ ತಂಪಾದ ನೀರಿನಂತಿತ್ತು.

ಒಮ್ಮೆ ಅವನು ಆಕಾಶದೆಡೆಗೆ ಕೈಯೆತ್ತಿದ್ದ. ಆಗ ಅವನ ಬೆರಳುಗಳು ತೆಂಗಿನ ಗರಿಗಳಂತೆ ಕಾಣುತ್ತಿದ್ದವು. ಅವನು ತನ್ನ ಮಹಾದನಿಯಿಂದ ನುಡಿದ :

"ಪುರಾತನ ಪ್ರವಾದಿಗಳು ನಿಮಗಾಗಿ ಮಾತನಾಡಿದ್ದಾರೆ. ಅವರ ನುಡಿಗಳಿಂದ ನಿಮ್ಮ ಕಿವಿಗಳು ತುಂಬಿಹೋಗಿವೆ. ಆದರೆ ನಾನು ನಿಮಗೆ ಹೇಳುವೆ, ನೀವು ಕೇಳಿದ್ದನ್ನೆಲ್ಲ ನಿಮ್ಮ ಕಿವಿಯಿಂದ ತೆರವುಗೊಳಿಸಿಬಿಡಿರಿ."

ಜೀಸಸ್‌ನ "ಆದರೆ ನಾನು ನಿಮಗೆ ಹೇಳುವೆ" ಎಂಬ ನುಡಿಗಳು ನಮ್ಮ ಈ ಜನಾಂಗದ ಅಥವಾ ನಮ್ಮ ಈ ಜಗತ್ತಿನ ಮಾನವನು ನುಡಿಯುವ ನುಡಿಗಳೇ ಅಲ್ಲ. ಜ್ಯುಡಿಯಾದ ಮೇಲಿನ ಆಕಾಶದಲ್ಲಿ ಹಾದುಹೋಗುತ್ತಿದ್ದ ದೇವದೂತರೊಡೆಯನ ನುಡಿಗಳೇ ಅವಾಗಿದ್ದವು.

ಮತ್ತೆ ಮತ್ತೆ, ಮೇಲಿಂದ ಮೇಲೆ, ಅವನು ನಿಯಮಗಳನ್ನೂ ಪ್ರವಾದಿಗಳನ್ನೂ ಉದಾಹರಿಸಿ ಬಳಿಕ "ಆದರೆ ನಾನು ನಿಮಗೆ ಹೇಳುವೆ" ಎನ್ನುತ್ತಿದ್ದ.

"ಆದರೆ ನಾನು ನಿಮಗೆ ಹೇಳುವೆ" ಇವೆಂಥ ಕಿಡಿನುಡಿಗಳು! ನಮ್ಮ ಮನಸಿನ ದಂಡೆಗೆ ಬಂದು ಅಪ್ಪಳಿಸುವ ಎಂಥ ಅಜ್ಞಾತ ಸಾಗರಗಳ ತೆರೆಗಳು!

ಆತ್ಮದ ಕಾಳರಾತ್ರಿಯನ್ನೇ ಶೋಧಿಸುತ್ತಿರುವ ಇವು ಎಂಥ ಚಿಕ್ಕೆಗಳು! ಮುಂಬೆಳಗಿಗಾಗಿ ಕಾದಿರುವ ಇವು ಎಂಥ ಅನಿದ್ರಿತ ಆತ್ಮಗಳು!

† † † †

ಜೀಸಸ್‌ನ ನುಡಿಗಳ ಬಗ್ಗೆ ಹೇಳಬೇಕಾದರೆ, ಅವನ ಮಾತುಗಳನ್ನು ಕೇಳಿರಬೇಕು ಅಥವಾ ಅವುಗಳ ಪ್ರತಿಧ್ವನಿಯನ್ನು ಆಲಿಸಿರಬೇಕು.

ನಾನೋ, ಮಾತನ್ನೂ ಕೇಳಿಲ್ಲ, ಪ್ರತಿಧ್ವನಿಯನ್ನೂ ಆಲಿಸಿಲ್ಲ.

ನಾನು ಮುಗಿಸಲಾರದ ಈ ಕತೆಯನ್ನು ಪ್ರಾರಂಭಿಸಿದ್ದಕ್ಕೆ ನಿಮ್ಮ ಕ್ಷಮೆ ಕೋರುವೆ. ಆದರೆ ಮುಕ್ತಾಯವೇ ಇನ್ನೂ ನನ್ನ ತುಟಿಗಳ ಮೇಲಿಲ್ಲ. ಅದಿನ್ನೂ ಗಾಳಿಯಲ್ಲಿಯ ಪ್ರೇಮಗೀತವಾಗಿಯೇ ಉಳಿದಿದೆ.

## ೨೫. ಗೆರೆಡೀನದ ನಾಮನ್

ಅವನ ಶಿಷ್ಯರು ಚದರಿಸಲ್ಪಟ್ಟರು. ಅವನು ಸ್ವತಃ ಮರಣಕ್ಕೀಡಾಗುವ ಮುನ್ನ ಅವರಿಗೆ ನೋವಿನ ಮೃತ್ಯುಪತ್ರವನ್ನೇ ಮಾಡಿಕೊಟ್ಟಿದ್ದ. ಬೈಲಲ್ಲಿಯ ನರಿ ಚಿಗರೆಗಳಂತೆ ಅವರು ಬೆನ್ನಟ್ಟಲ್ಪಟ್ಟಿದ್ದರು; ಅವರ ಬೇಟೆಗಾರರ ಬತ್ತಳಿಕೆ ಇನ್ನೂ ಬಾಣಗಳಿಂದ ಸೂಸಿತುಂಬಿತ್ತು.

ಅವರು ಬಂಧಿಸಲ್ಪಟ್ಟು ಮರಣಕ್ಕೀಡಾದಾಗಲೂ ಆನಂದದಿಂದಲೇ ಇದ್ದರು. ಮದುವೆ ಸಮಾರಂಭದಲ್ಲಿಯ ಮದುಮಗನ ಮುಖದಂತೆ ಅವರ ಮುಖಗಳು ಹೊಳೆಹೊಳೆಯುತ್ತಿದ್ದವು. ಏಕೆಂದರೆ ಅವನು ಅವರಿಗೆ ಆನಂದದ ಮೃತ್ಯುಪತ್ರವನ್ನೂ ಮಾಡಿಕೊಟ್ಟಿದ್ದ.

ನನಗೊಬ್ಬ ಉತ್ತರದೇಶದ ಗೆಳೆಯನಿದ್ದ. ಅವನ ಹೆಸರು ಸ್ಟೀಫನ್. 'ಜೀಸಸ್‌ನು ದೇವಪುತ್ರ' ಎಂದವನು ಘೋಷಿಸಿದ್ದಕ್ಕಾಗಿ ಅವನನ್ನು ಬಂಧಿಸಿ ಪೇಟೆಗೊಯ್ದು ಅವನ ಮೇಲೆ ಕಲ್ಲೆಸೆದರು. ಆ ಕಲ್ಲುಬಡಿತ ತಾಳಲಾರದೆ ಅವನು ನೆಲಕ್ಕೆ ಬಿದ್ದ. ಆಗ ಅವನ ಎರಡೂ ಕೈಗಳು, ತನ್ನ ಗುರುವಿನಂತೆಯೇ ತಾನೂ ಸಾಯಬೇಕೆಂದು ಚಾಚಿದಂತಿದ್ದವು. ಅವನ ತೋಳುಗಳು ಹಾರಲೆಂದೆತ್ತಿದ ಹಕ್ಕಿಯ ರೆಕ್ಕೆಗಳಂತಿದ್ದವು. ಅವನ ಕಂಗಳ ಕೊನೆಯ ಕಿರಣವು ಬಾಡುತ್ತಿದ್ದಾಗ ಕೂಡ ಅವನ ತುಟಿಗಳ ಮೇಲೆ ಮುಗುಳು ನಗೆಮಲ್ಲಿಗೆ ಅರಳುತ್ತಿದ್ದುದನ್ನು ನಾನು ಸ್ವತಃ ನನ್ನ ಕಂಗಳಿಂದಲೇ ನೋಡಿದೆ. ಆ ನಗೆಯು, ಚಳಿಗಾಲ ಮುಗಿಯುವ ಮೊದಲೇ ವಸಂತಾಗಮನದ ನಿಶ್ಚಯವನ್ನು ಸಾರಿಹೇಳುವ ಉಸುರಿನಂತಿತ್ತು. ಅಂಥದನ್ನು ನಾನು ಹೇಗೆ ಬಣ್ಣಿಸಲಿ?

ಸ್ಟೀಫನ್‌ನು ಹೀಗೆ ನುಡಿಯುತ್ತಿದ್ದನೆಂದು ತೋರುತ್ತದೆ: ''ನಾನು ಪರಲೋಕಕ್ಕೆ ಹೋಗಲೇಬೇಕಾಗಿದ್ದರೆ ಅಲ್ಲಿಯೂ ಕೂಡ, ಅಲ್ಲಿಯ ಜನರೂ ನನ್ನನ್ನು ಹಿಡಿದೊಯ್ದು ಪೇಟೆಗೆ ತಂದು ಕಲ್ಲೆಸೆಯುತ್ತಿದ್ದರೂ, ಜೀಸಸ್‌ನನ್ನು, ಅವನಲ್ಲಡಗಿದ್ದ ಸತ್ಯದ ಸಲುವಾಗಿ, ಹಾಗೂ ಈಗ ನನ್ನಲ್ಲಿಯೂ ಇಳಿದ ಅದೇ ಸತ್ಯದ ಸಲುವಾಗಿ ಘೋಷಿಸುವೆ.''

ಕಲ್ಲುಗಳು ಬಡಿದು ಸ್ಟೀಫನ್ ಒದ್ದಾಡುತ್ತಿರುವುದನ್ನೇ ನೋಡುತ್ತ ಸಂತೋಷಪಡುತ್ತಿದ್ದ ಒಬ್ಬ ಅಲ್ಲಿಯೇ ನಿಂತದ್ದನ್ನು ನಾನು ನಿರೀಕ್ಷಿಸಿದೆ. ಅವನ ಹೆಸರು ತಾರ್ಸಸದ ಸಾಲ. ಅವನೇ ಸ್ಟೀಫನ್‌ನನ್ನು ಆಚಾರ್ಯರಿಗೆ, ರೋಮನ್ನರಿಗೆ, ಜನಜಂಗುಳಿಗೆ ಕಲ್ಲೊಗೆಯಲೆಂದು ಹಿಡಿದುಕೊಟ್ಟಿದ್ದ.

ಸಾಲನು ಗಿಡ್ಡನೂ, ತಿಗಳಿದಲೆಯವನೂ ಆಗಿದ್ದ; ಗೂನು ಬೆನ್ನಿನವನೂ ಅಸಡ್ಡೆ ಮೋರೆಯವನೂ ಆಗಿದ್ದ. ಅವನನ್ನು ಕಂಡರೆ ನನಗೆ ಸೇರಿಕೆ ಬರಲಿಲ್ಲ. ಆದರೆ ಈಗವನೇ ಮನೆ ಮಾಳಿಗೆಯಿಂದ ಜೀಸಸ್‌ನನ್ನು ಬೋಧಿಸುತ್ತಾನೆಂದು ನನಗೆ ಹೇಳಿದರು; ಇದನ್ನು ನಂಬುವುದೇ ಕಠಿಣ.

ತನ್ನನ್ನು ವಿರೋಧಿಸುತ್ತಿದ್ದ ವೈರಿಪಾಳೆಯವನ್ನು ಹೊಕ್ಕು ಅವರನ್ನು ಸೆರೆಹಿಡಿದು ಪಳಗಿಸುವ ಕಾರ್ಯಕ್ಕೆಂದು ನಡೆದ ಜೀಸಸ್‌ನ ನಡೆಯನ್ನು ಮೃತ್ಯುವೂ ಕೂಡ ತಡೆಹಿಡಿಯಲು ಶಕ್ತವಾಗಲಿಲ್ಲ.

ಸ್ಟೀಫನ್ ತೀರಿಹೋದಬಳಿಕ ದಮಸ್ಕಸದ ದಾರಿಯಮೇಲೆ ಆ ತಾರ್ಸಸದ ಮನುಷ್ಯನನ್ನು ಹಿಡಿದು ಗೆದ್ದು ಪಳಗಿಸಿದರೆಂದು ನನಗೆ ಹೇಳಲ್ಪಟ್ಟಾಗ್ಯೂ, ನನಗವನು ಸೇರಿಕೆ ಬರಲಿಲ್ಲ. ನಿಜವಾದ ಶಿಷ್ಯನಾಗಲು ಬೇಕಾದ ಹೃದಯಕ್ಕಿಂತಲೂ ಅವನ ತಲೆಯೇ ದೊಡ್ಡದಾಗಿತ್ತು.

ಆದರೂ ಒಂದು ವೇಳೆ ನನ್ನದೇ ತಪ್ಪಿರಬಹುದು. ನಾನು ಹಗಲೆಲ್ಲ ತಪ್ಪುತ್ತಿರುತ್ತೇನೆ.

# ೨೬. ಥಾಮಸ್

ವಕೀಲನಾಗಿದ್ದಂಥ ನನ್ನ ಅಜ್ಜ ಒಮ್ಮೆ ಹೇಳಿದ್ದ: "ಸತ್ಯವು ನಮ್ಮೆ ದುರು ಪ್ರತ್ಯಕ್ಷವಾದಾಗ ಮಾತ್ರ ನಾವು ಸತ್ಯವನ್ನು ಪರಿಪಾಲಿಸೋಣ."

ಜೀಸಸ್‌ನಿಂದ ನನಗೆ ಕರೆಬಂದಾಗ ನಾನದಕ್ಕೆ ಓಗೊಟ್ಟೆ. ಏಕೆಂದರೆ ಅವನ ಆಜ್ಞೆ ನನ್ನ ಇಚ್ಛಾಶಕ್ತಿಗಿಂತಲೂ ಪ್ರಬಲವಾದದ್ದಿತ್ತು. ಆದರೂ ನನ್ನ ಯೋಚನೆಯನ್ನು ಮಾತ್ರ ನಾನು ಬಿಟ್ಟಿದ್ದಿಲ್ಲ.

ಅವನು ಭಾಷಣ ಮಾಡಿದಾಗ, ಉಳಿದವರೆಲ್ಲ ಬಿರುಗಾಳಿಯಲ್ಲಿಯ ಟೊಂಗೆಗಳಂತೆ ಜೋತುಹೋಗುತ್ತಿದ್ದಾಗ ಕೂಡ ನಾನು ಮಾತ್ರ ಅಚಲ ನಾಗಿ ಕೇಳುತ್ತಿದ್ದೆ. ಆದರೂ ನನಗವನ ಬಗ್ಗೆ ಪ್ರೇಮವಿತ್ತು.

ಮೂರುವರ್ಷಗಳ ಹಿಂದೆ ಅವನು ತನ್ನ ಹೆಸರನ್ನು ಹಾಡುತ್ತಿದ್ದ ಹಾಗೂ ರಾಷ್ಟ್ರಗಳಿಗಾಗಿ ತನ್ನ ಸಾಕ್ಷ್ಯಗಳಂತಿದ್ದ ನಮ್ಮ ಚದರಿದ ಗುಂಪನ್ನು ಉಳಿದು ಹೊರಟುಹೋದ.

ಆ ಕಾಲಕ್ಕೆ ನನ್ನನ್ನು 'ಸಂಶಯೀ ಥಾಮಸ್' ಎಂದು ಕರೆಯುತ್ತಿ ದ್ದರು. ನನ್ನ ಅಜ್ಜನ ನೆರಳು ಇನ್ನೂ ನನ್ನ ಮೇಲಿತ್ತು. ಯಾವಾಗಲೂ ಸತ್ಯದ ಸಾಕಾರವನ್ನು ಬಯಸುತ್ತಿದ್ದೆ ನಾನು

ನನ್ನ ನೋವನ್ನೇ ನಂಬುವುದಕ್ಕಿಂತ ಮೊದಲು, ನಾನು ನನ್ನ ಗಾಯ ದಲ್ಲಿ ಬೆರಳಿದ್ದಿ ನೆತ್ತರ ಹತ್ತುವುದೇ ಎಂದು ನೋಡುತ್ತಿದ್ದೆ.

ಹೃದಯಪೂರ್ವಕ ಪ್ರೀತಿಸುತ್ತಿದ್ದರೂ ಮನಸಿನಲ್ಲಿ ಸಂಶಯವಿದ್ದ ಮನುಷ್ಯನೆಂದರೆ, ಯುದ್ಧನೌಕೆಯಲ್ಲಿ ನಿದ್ದೆ ಹತ್ತಿದಾಗ, ಒಡೆಯನ ಚಾಟಿ ಯೇಟು ಬಿದ್ದು ಎಚ್ಚರಾಗುವವರೆಗೂ ಸ್ವಾತಂತ್ರ್ಯದ ಕನಸನ್ನು ಕಾಣುತ್ತಿದ್ದ ಗುಲಾಮನಂತೆಯೇ ಸರಿ.

ನಾನೂ ಈ ಗುಲಾಮನಂತಾಗಿದ್ದೆ; ನಾನು ಸ್ವಾತಂತ್ರ್ಯದ ಕನಸು ಕಾಣುತ್ತಿದ್ದರೂ ನನ್ನ ಅಜ್ಜನ ನಿದ್ದೆ ನನ್ನನ್ನು ಮುಸುಕಿತ್ತು. ನನ್ನ ದಿನದ ಚಾಟಿಯೇಟು ನನ್ನ ಮೈಗೆ ಅವಶ್ಯವಿತ್ತು.

ನಾಝರೀನನ ಸಾನ್ನಿಧ್ಯದಲ್ಲಿ ಕೂಡ ಪೂರ್ವಾಚಾರಕ್ಕೇ ಕಟ್ಟುಬಿದ್ದ ಕೈದಿಯವನಂತೆ ನಾನು ಕಣ್ಣು ಮುಚ್ಚಿಕೊಂಡಿದ್ದೆ.

ನಂಬಿಗೆಯೇ ತನ್ನ ಅವಳಿ ಜವಳಿ ಎಂಬುದನ್ನು ಅರಿಯದಷ್ಟು ಸಂಶಯವು ಏಕಾಕಿಯಾಗಿರುತ್ತದೆ.

ಹಡೆದ ತಾಯಿಯೇ ಹುಡುಕಿಕೊಂಡು ಬಂದು ಅಪ್ಪಿಕೊಳ್ಳಲೆಂದು ಕೈಚಾಚಿದರೂ, ಜಾಗರೂಕತೆ, ಭಯಗಳಿಂದ ಹಿಂಜರಿಯುತ್ತಿದ್ದ, ದಿಕ್ಕು ಗಾಣದ ದುಃಖೀ ಅನಾಥ ಕೂಸೇ ಈ ಸಂಶಯವು !

ಏಕೆಂದರೆ, ತನ್ನ ಗಾಯವು ಮಾದು ಮೊದಲಿನಂತಾಗುವವರೆಗೂ ಸಂಶಯವು ಸತ್ಯವನ್ನು ತಿಳಿಯಲಾರದು.

ಜೀಸಸ್‌ನು ತನ್ನನ್ನೇ ನನ್ನೆದುರು ಪ್ರಕಟಿಸಿಕೊಳ್ಳುವವರೆಗೂ ಹಾಗೂ ತನ್ನ ಗಾಯಗಳಲ್ಲಿ ನನ್ನ ಬೆರಳೆದ್ದಿ ತೋರಿಸುವವರೆಗೂ ನಾನವನ ಬಗ್ಗೆ ಸಂಶಯಿತನಾಗಿದ್ದೆ.

ಆಮೇಲೆ ಅವನನ್ನೇ ನಂಬಿಬಿಟ್ಟೆ. ಅಲ್ಲಿಂದಲೇ ನಾನು ನನ್ನ 'ನಿನ್ನೆ' ಯಿಂದ ಹಾಗೂ ನನ್ನ ಪೂರ್ವಜರ "ನಿನ್ನೆ" ಗಳಿಂದ ಪಾರಾದೆ

ನನ್ನಲ್ಲಿಯ 'ಮೃತ'ವು ಅವರ 'ಮೃತ'ದಲ್ಲಿ ಹುಗಿಯಲ್ಪಟ್ಟಿತು. ಹಾಗೂ ನನ್ನಲ್ಲಿಯ ಜೀವಂತವು ಆ ಅಭಿಷಿಕ್ತ ರಾಜನಲ್ಲಿ, ಮಾನವಪುತ್ರ ಜೀಸಸ್‌ನಲ್ಲಿ, ಅವನಿಗಾಗಿಯೇ ಜೀವಿಸುವುದು.

ಇರಾಣಿಗಳಲ್ಲಿ ಹಾಗೂ ಹಿಂದೂಗಳಲ್ಲಿ ಹೋಗಿ ನಾನು ಅವನ ನಾಮೋಚ್ಚಾರಣೆಯನ್ನು ಮಾಡಲೇಬೇಕೆಂದು ಅವರು ನಿನ್ನೆ ನನಗೆ ಹೇಳಿದರು.

ನಾನು ಅವಶ್ಯ ಹೋಗುವೆ. ಈ ದಿನದಿಂದ ನನ್ನ ಕೊನೆಯ ದಿನದ ವರೆಗೂ, ಪ್ರತಿದಿನ ಬೆಳಗೂ ಬೈಗೂ ವೈಭವವುಕ್ಕುತ್ತಿದ್ದ ನನ್ನ ಪ್ರಭುವನ್ನೇ ನಾನು ನೋಡುವೆ, ಹಾಗೂ ಅವನ ನುಡಿಗಳನ್ನೇ ಆಲಿಸುವೆ.

# ೨೭. ತಾರ್ಕಿಕ ಎಲ್‌ಮದಮ್

ನಾಝರೀನದ ಜೀಸಸ್‌ನ ಬಗ್ಗೆ ನನಗೆ ಮಾತನಾಡಗೊಡಿರಿ: ನನಗೆ ಬಹಳ ಹೇಳುವದಿದೆ, ಆದರೆ ಆ ಕಾಲವಿನ್ನೂ ಬಂದಿಲ್ಲ ಆದರೂ ಈಗ ನಾನವನ ಬಗ್ಗೆ ಹೇಳುವದೆಲ್ಲ ನಿಜವೇ. ಏಕೆಂದರೆ ಸತ್ಯಾನ್ವೇಷಣೆಯನ್ನು ಳಿದ ಮಾತೆಲ್ಲವೂ ವ್ಯರ್ಥವೇ.

ಸಕಲ ಕಟ್ಟು ನಿಯಮಗಳ ವಿರುದ್ಧ ನಿಂತ ಮನಸ್ವೀ ಮಾನವನೊಬ್ಬ ನನ್ನು ನೋಡಿ; ಸ್ವತ್ತುಗಳನ್ನೆಲ್ಲ ವಿರೋಧಿಸುತ್ತಿದ್ದ ಭಿಕ್ಷುಕನನ್ನು ನೋಡಿ; ಲೋಗರೊಡನೆ, ಬಿಡಾಡಿಗಳೊಡನೆ ಮಾತ್ರ ಕೂಡಿಕೊಂಡು ಮೋಜು ಮಾಡುತ್ತಿದ್ದ ಕುಡುಕನನ್ನು ನೋಡಿ.

ಅವನು ದೇಶದ ಅಭಿಮಾನೀ ಪುತ್ರನಾಗಿಲ್ಲ; ಸಾಮ್ರಾಜ್ಯದ ಸಂರಕ್ಷಿತ ಪ್ರಜೆಯಾಗಿಲ್ಲ. ಆದ್ದರಿಂದಲೇ ದೇಶ-ಸಾಮ್ರಾಜ್ಯಗಳ ಬಗ್ಗೆ ಅವನಿಗೆ ತಿರಸ್ಕಾರವಿದೆ.

ಅವನು ಖೇಚರನಂತೆ ಕರ್ತವ್ಯಹೀನನಾಗಿ ಸ್ವತಂತ್ರನಾಗಿ ಹಾರಾಡು ತ್ತಿದ್ದ: ಅಂತೆಯೇ ಬೇಟೆಗಾರರು ತಮ್ಮ ಬಾಣ ಬಿಟ್ಟು ಅವನು ಭೂಮಿಂ ಗಿಳಿಯುವಂತೆ ಮಾಡಿದರು.

ಪೂರ್ವದ ಗೋಪುರಗಳನ್ನು ಬಡಿದು ಕೆಡವುತ್ತಿರುವ ಯಾವನೂ ಅಲ್ಲಿಂದ ಉರುಳಿ ಬೀಳುತ್ತಿರುವ ಕಲ್ಲುಗಳಿಂದ ಪಾರಾಗಲಾರ.

ತನ್ನ ಪೂರ್ವಜರ ಮಹಾಪ್ರವಾಹದ ಬಾಗಿಲನ್ನೇ ತೆಗೆದ ಯಾವನೂ ಅದರಲ್ಲಿಯೇ ಮುಳುಗಿ ಹೋಗದಿರಲಾರ. ಇದು ನಿಯಮಬದ್ಧ. ಅಂತೆಯೇ ನಿಯಮ ಭಂಗಮಾಡಿದ ಜೀಸಸ್‌ನೂ ಅವನ ಮೂಢ ಅನುಯಾಯಿಗಳೂ ಶೂನ್ಯಗೊಳಿಸಲ್ಪಟ್ಟರು.

ನಮ್ಮ ದೈವಗತಿಯನ್ನೇ ಬದಲಿಸಬಲ್ಲೆವೆಂದು ಹೇಳುತ್ತಿದ್ದ ಅವನಂಥ ವರೇ ಇನ್ನೂ ಅನೇಕ ಜನರಿದ್ದರು. ಆದರೆ ಅವರೇ ಸ್ವತಃ ಬದಲಿಸಲ್ಪಟ್ಟರು. ಹಾಗೂ ತಾವೇ ಹಾನಿಗೊಳಗಾದರು.

ಹಣ್ಣು ಬಿಡದ ದ್ರಾಕ್ಷಾಲತೆಯೊಂದು ಕೋಟೆ ಗೋಡೆಯ ಬಳಿ ಬೆಳೆಯುತ್ತಿತ್ತು. ಅದು ಆ ಗೋಡೆಗುಂಟ ಕುಡಿಚಾಚಿ, ಅಲ್ಲಿಯ ಕಲ್ಲುಗಳಿ

ಗಂಟಿಕೊಂಡು ಮೇಲಮೇಲಕ್ಕೇರುತ್ತಿತ್ತು. ಅಂಥ ಬಳ್ಳಿ ತನ್ನ ಮನಸಿನಲ್ಲಿ "ನನ್ನ ಶಕ್ತಿ, ನನ್ನ ಭಾರಗಳಿಂದ ನಾನೀ ಗೋಡೆಗಳನ್ನೇ ನಾಶಮಾಡುವೆ" ಎಂದು ಅಂದುಕೊಂಡರೆ ಉಳಿದ ಬಳ್ಳಿಗಳು ಏನೆನ್ನಬೇಕು? ನಿಶ್ಚಯವಾಗಿ ಅವೆಲ್ಲ ಇದರ ಮೂರ್ಖತನಕ್ಕೆ ನಗದೆ ಇರಲಾರವು.

ಹಾಗೆಯೇ ನಾನು ಕೂಡ, ಈ ಮನುಷ್ಯನನ್ನು ಹಾಗೂ ಇವನ ದುರ್ಬೋಧೆಗೊಳಗಾದ ಇವನ ಶಿಷ್ಯರನ್ನು ನೋಡಿ, ನಗದೆ ಇರಲಾರೆ.

## ೨೮. ಒಬ್ಬ ಮೇರಿ

ಅವನ ಮುಖವು ಯಾವಾಗಲೂ ಮೇಲಕ್ಕಿರುತ್ತಿತ್ತು; ಅವನ ಕಂಗಳಲ್ಲಿ ದೈವೀಜ್ಯೋತಿಯಿತ್ತು.

ಅವನು ಸದಾ ಖಿನ್ನನಾಗಿರುತ್ತಿದ್ದ, ಆದರೆ ಅವನಾ ಖಿನ್ನತೆಯು ನೊಂದವರ ಬಗೆಗಿದ್ದ ಸಾಂತ್ವನತೆಯೂ ಏಕಾಕಿಗಳ ಬಗೆಗಿದ್ದ ಜತೆಗಾರತೆಯೂ ಆಗಿತ್ತು.

ಅವನು ನಕ್ಕಾಗ, ಆ ನಗೆಯು ಅಜ್ಞಾತದ ಬಗ್ಗೆ ಆಕಾಂಕ್ಷೆಯುಳ್ಳವರ ಹಸಿವಿನಂತಿರುತ್ತಿತ್ತು. ಮಗುಗಳ ಕಣ್ಣೆವೆಗಳಿಂದ ಚಿಮ್ಮುತ್ತಿದ್ದ (ಮಿಂಚು) ಚಿಕ್ಕೆ ಹುಡಿ (ನಕ್ಷತ್ರ ಚೂರ್ಣ) ಯಂತಿತ್ತದು; ಹಾಗೂ ಬಾಯೊಳಗಿನ ಆಡಾಡ–ಬುತ್ತಿಯ ತುತ್ತಿನಂತಿತ್ತು.

ಅವನು ಖಿನ್ನನಾಗಿದ್ದ. ಆದರದು ತುಟಿಗೇರಿ ನಗೆಯಾಗಿ ಅರಳುವ ಖಿನ್ನತೆಯಾಗಿತ್ತು.

ಲೋಕದಲ್ಲಿ ಚಳಿಗಾಲವಿಳಿದಾಗ ಅಡವಿಯಲ್ಲಿಯ ಚಿನ್ನದ ತೆರೆಯಂತೆ ಅದು ಇತ್ತು. ಹಾಗೂ ಹಲ ಕೆಲಸಲ ಅದು ಸರೋವರದ ದಂಡೆಯ ಮೇಲಿನ ಬೆಳದಿಂಗಳಂತೆಯೂ ಕಾಣುತ್ತಿತ್ತು.

ಲಗ್ನ ಸಮಾರಂಭದಲ್ಲಿ ಹೆರುಷದುಂಬಿ ಹಾಡುವವನಂತೆ ನಗುತ್ತಿದ್ದ.

ಆದರೂ ತನ್ನ ಜತೆಗಾರರಿಗಿಂತಲೂ ಮೇಲೇರಿ ಅಂತರಾಳದಲ್ಲಿ ಹಾರಾಡಲೊಲ್ಲದ ಹಕ್ಕಿಯ ಖಿನ್ನತೆಯಂತೆ, ಅವನ ಖಿನ್ನತೆಯಿತ್ತು.

## ೨೯. ಗ್ರೀಕ-ಕವಿ ರುಮ್ಯಾನಸ್

ಅವನು ಕವಿಯಾಗಿದ್ದ. ನಮ್ಮ ಕಂಗಳಿಗಾಗಿ ಅವನು ನೋಡಿದ, ನಮ್ಮ ಕಿವಿಗಳಿಗಾಗಿ ಕೇಳಿದ, ಹಾಗೂ ನಮ್ಮ ಮೌನ ನುಡಿಗಳು ಅವನ ತುಟಿಗಳ ಮೇಲಿದ್ದವು. ನಮಗೆ ತಿಳಿಯಲಾರದುದನ್ನೂ ಅವನ ಬೆರಳುಗಳು ಸೋಂಕಿದ್ದವು.

ಅವನ ಹೃದಯದ ಗೂಡಿನಿಂದ ಅನೇಕ ಹಾಡುವ ಹಕ್ಕಿಗಳು ಹೊರ ಬಂದು ಉತ್ತರಕ್ಕೂ ದಕ್ಷಿಣಕ್ಕೂ ಹರಿಬಿದ್ದಿದ್ದವು. ಹಾಗೂ ಗುಡ್ಡದೋರೆ ಯಲ್ಲಿಯ ಚಿಕ್ಕ ಚಿಕ್ಕ ಹೂಗಳು ಸಗ್ಗದ ಹಾದಿಯ ಅವನ ಹೆಜ್ಜೆಜಾಡನ್ನು ತಡೆದಿದ್ದವು

ಅವನು ಬಗ್ಗಿ ಕೆಳಗಿನ ಹುಲ್ಲುಗರಿ ಮುಚ್ಚುತ್ತಿದ್ದುದನ್ನು ನಾನು ಅನೇಕ ಸಲ ನೋಡಿದ್ದೇನೆ. ಹಾಗೂ ನನ್ನ ಹೃದಯದ ಒಳಗೇ, ಅವನು ಹೀಗೆ ನುಡಿಯುತ್ತಿರುವುದನ್ನು ಕೇಳಿದ್ದೇನೆ: ''ಪುಟ್ಟ ಹಸಿರು ಗರಿಗಳೇ, ಬೆಸಾನದ ಓಕ್ ವೃಕ್ಷಗಳಂತೆ, ಹಾಗೂ ಲೆಬನಾನದ ಸಿಡಾರ ವೃಕ್ಷಗಳಂತೆ, ನೀವೂ ನನ್ನ ರಾಜ್ಯದಲ್ಲಿ ಇರಬಲ್ಲಿರಿ.

ಸಕಲ ಸುಂದರ ವಸ್ತುಗಳನ್ನೂ, ಚಿಕ್ಕಮಕ್ಕಳ ಬೆರಗಿನ ಮುಖಗಳು, ದಕ್ಷಿಣದ ಗಂಧಧೂಪಗಳು—ಎಲ್ಲವನ್ನೂ ಅವನು ಪ್ರೀತಿಸುತ್ತಿದ್ದ.

ಊಟದ ಮನೆಯಲ್ಲಿದ್ದ ಒಬ್ಬ ಅರಿಯದವನಿಂದಲೋ ಅಥವಾ ಒಬ್ಬ ಸಿರಿವಂತ ಗೃಹಸ್ಥನಿಂದಲೋ ಯಾರಿಂದೇ ಆಗಲಿ ಅಂತಃಕರಣದಿಂದ ಕೊಡ ಲ್ಪಟ್ಟ ದಾಳಿಂಬವನ್ನೋ, ಅಥವಾ ಒಂದು ಬಟ್ಟಲು ಮಧುವನ್ನೋ ಕೂಡ ಅವನು ಪ್ರೀತಿಸುತ್ತಿದ್ದ.

ಅವನು ಬದಾಮಿ ಹೂಗಳನ್ನು ಪ್ರೀತಿಸುತ್ತಿದ್ದ; ಅವನು ಅವನ್ನೆಲ್ಲ ತನ್ನ ಬೊಗಸೆಗಳಲ್ಲಿ ತುಂಬಿಕೊಂಡು ಭೂಮಿಯ ಮೇಲಿನ ಸಕಲ ಗಿಡ ಗಳನ್ನು ತನ್ನ ಪ್ರೇಮದಿಂದ ಅಪ್ಪಿಕೊಳ್ಳುವಂತೆ ಮುಖಕ್ಕೊತ್ತಿಕೊಳ್ಳುತ್ತಿದ್ದು ದನ್ನು ನಾನು ಅನೇಕಸಲ ನೋಡಿದ್ದೇನೆ.

ಸಾಗರ-ಸ್ವರ್ಗಗಳೆರಡೂ ಅವನಿಗೆ ಗೊತ್ತಿದ್ದವು. ಇಲ್ಲಿಯ ಬೆಳಕಲ್ಲಿದೆ,

ಬೇರೆಯ ಬೆಳಕನ್ನುಳ್ಳ ಮುತ್ತುಗಳ ಬಗ್ಗೆ, ಹಾಗೂ ನಮ್ಮ ಇರುಳುಗಳಾಚಿನ ಚಿಕ್ಕೆಗಳ ಬಗ್ಗೆ ಅವನು ನುಡಿಯುತ್ತಿದ್ದ.

ಗರುಡಪಕ್ಷಿಗಳಂತೆ ಬೆಟ್ಟಗಳನ್ನೂ ಹೊಳೆಹಳ್ಳಗಳಂತೆ ಕಂದರಗಳನ್ನೂ ಆವನು ಅರಿತಿದ್ದ. ಹಾಗೂ ಅವನ ಮೌನದಲ್ಲಿ ಮರುಭೂಮಿಯೂ, ಮಾತಿನಲ್ಲಿ ನಂದನವನವೂ ಇರುತ್ತಿದ್ದವು.

ಹೌದು, ಸಕಲೋನ್ನತಗಳ ಆಚೆಗಿನ ವಸಂತ ಕುಂಜವೇ ಹೃದಯದಲ್ಲಿದ್ದ ಕವಿಯಾಗಿದ್ದ ಅವನು. ಅವನ ಗೀತಗಳು ನಮಗಾಗೆಂದೇ ಹಾಡಲ್ಪಡುತ್ತಿದ್ದರೂ, ಅವು ಬೇರೆಯವರಿಗೂ, ಹಾಗೂ ಎಲ್ಲಿ ಬದುಕೇ ಸದಾ ಯೌವನವಾಗಿರುವುದೋ ಹಾಗೂ ಕಾಲವೇ ಸದಾ ಉಷಃಕಾಲವಾಗಿರುವುದೋ ಅಂಥ ಬೇರೊಂದು ನಾಡಿನವರಿಗಾಗಿಯೂ ಸಹ ಇದ್ದವು.

ಒಂದು ಕಾಲದಲ್ಲಿ ನಾನೂ ಕವಿಯೆನಿಸಿಕೊಂಡಿದ್ದೆ; ಆದರೆ ಬೆಥನಿಯಲ್ಲಿ ಯಾವಾಗ ಅವನೆದುರು ಬಂದು ನಿಂತೆನೋ ಆಗ, ಸಕಲ ವಾದ್ಯ-ವಾದನಗಳಮೇಲೂ ಪ್ರಭುತ್ವವಿದ್ದವನೆದುರು ನಾನೊಬ್ಬ ಏಕದಾರಿಯವನಾಗಿದ್ದೆನೆಂಬುದು ನನಗೆ ಗೊತ್ತಾಯಿತು. ಏಕೆಂದರೆ ಅವನ ದನಿಯಲ್ಲಿ ಗುಡುಗಿನ ನಗೆಯೂ, ಮಳೆಯ ಕಂಬನಿಯೂ ಹಾಗೂ ಬಿರುಗಾಳಿಯಲ್ಲಿಯ ಗಿಡಗಳ ನರ್ತನವೂ ಕೂಡಿಯೇ ಇದ್ದವು.

ನನ್ನ ವಾದ್ಯಕ್ಕೆ ಕೇವಲ ಒಂದೇ ಒಂದು ತಂತುವಿದೆಯೆಂದೂ ಹಾಗೂ ನನ್ನ ದನಿಯು, ನಿನ್ನೆಯ ನೆನವುಗಳನ್ನೂ ನಾಳಿನ ಬಯಕೆಗಳನ್ನೂ ನೆಯ್ಯಲಾರದೆಂದೂ ತಿಳಿದು ಬಂದಂದಿನಿಂದ ನಾನು ನನ್ನಾ ಏಕದಾರಿಯನ್ನು ಬದಿಗಿಟ್ಟು ಮೌನವಾಗಿರಲು ನಿರ್ಧರಿಸಿದೆ. ಆದರೆ ಯಾವಾಗಲೂ ಸಂಧಿಪ್ರಕಾಶದಲ್ಲಿ ನಾನು ಆ ಸಕಲಕವಿಗಳ ಸಾಮ್ರಾಟನಾದ ಆ ಕವಿಯನ್ನು ಆಲಿಸುತ್ತಿದ್ದೆ, ಲಕ್ಷ್ಯಗೊಟ್ಟು ಕೇಳುತ್ತಿದ್ದೆ.

# ೩೦. ಓರ್ವ ಶಿಷ್ಯ: ಲೇವಿ

ಒಂದು ಸಂಜೆ ಅವನು ನಮ್ಮ ಮನೆ ಮುಂದೆ ಹಾದು ಹೋದಾಗ ನನ್ನಾತ್ಮವೇ ನನ್ನೊಳಗೆ ಚಲಿಸಿದಂತಾಯಿತು

ಅವನು ನನ್ನೊಡನೆ ನುಡಿದು ಹೀಗೆಂದ: "ಬಾ, ಲೇವಿ, ನನ್ನನ್ನು ಹಿಂಬಾಲಿಸು."

ಆ ದಿನ ನಾನವನನ್ನು ಹಿಂಬಾಲಿಸಿದೆ.

ಮರುದಿನ ಸಂಜೆಯ ಮುಂದೆ ನಾನವನನ್ನು ನಮ್ಮ ಮನೆಗೆ ಬರಬೇಕೆಂದೂ ನಮ್ಮ ಅತಿಥಿಯಾಗಬೇಕೆಂದೂ ಬೇಡಿಕೊಂಡೆ. ಅದರಂತೆ ಅವನೂ, ಅವನ ಮಿತ್ರರೂ, ನನ್ನ ಮನೆ ಹೊಸ್ತಿಲನ್ನು ದಾಟಿದರು; ನಾನೂ, ನನ್ನ ಪತ್ನಿಯೂ ನನ್ನ ಮಗುಗಳೂ ಧನ್ಯರಾದೆವು.

ಆದಿನ ಬೇರೆ ಅತಿಥಿಗಳೂ ಬಂದಿದ್ದರು. ಅವರೆಲ್ಲ ಸುಪ್ರಸಿದ್ಧರೂ ವಿದ್ವಾಂಸರೂ ಆಗಿದ್ದರು; ಆದರೂ ಅವರ ಹೃದಯಾಂತರಾಳದಲ್ಲಿ ಅವನ ಬಗ್ಗೆ ವಿರೋಧವಿತ್ತು.

ನಾವೆಲ್ಲರೂ ಊಟಕ್ಕೆ ಕುಳಿತಾಗ, ಒಬ್ಬ, ಸುಪ್ರಸಿದ್ಧ ಜೀಸಸ್‌ನನ್ನು ಕೇಳಿದ: "ನೀನೂ, ನಿನ್ನ ಶಿಷ್ಯರೂ ಕಾಯಿದೆಗಳನ್ನು ಭಂಗಿಸುತ್ತಿರುವುದೂ, ವಿಶ್ರಾಮದಿನದಲ್ಲಿ ಬೆಂಕಿಮಾಡುತ್ತಿರುವುದೂ ನಿಜವೇ.?"

ಜೀಸಸ್‌ನು ಹೀಗೆ ನುಡಿದು ಉತ್ತರಿಸಿದ: "ಓಹೋ, ನಾವು ಅವಶ್ಯವಾಗಿ ವಿಶ್ರಾಮದಿನ ಬೆಂಕಿಮಾಡುತ್ತಿರುವೆವು. ವಿಶ್ರಾಮದಿನವನ್ನೇ ನಾವು ಬೆಳಗುತ್ತಿರುವೆವು, ಹಾಗೂ ಉಳಿದೆಲ್ಲ ದಿನಗಳ ಕೋಲಿಯನ್ನೇ ನಾವು ನಮ್ಮ ಕಿಡಿಗಳಿಂದ ಆ ದಿನ ಸುಡುತ್ತಿರುವೆವು."

ಇನ್ನೊಬ್ಬ ಪ್ರಸಿದ್ಧ ಕೇಳಿದ: "ನೀನು, ಖಾನಾವಳಿಯಲ್ಲಿ ಶ್ವಪಚರೊಡನೆ ಮಧುವನ್ನು ಕುಡಿಯುತ್ತೀಯೆಂದು ನಮಗೆ ತಿಳಿದು ಬಂದಿದೆ."

ಜೀಸಸ್ ಉತ್ತರಿಸಿದ: "ಹೌದು, ಅಂಥವರನ್ನೂ ನಾವು ಸಾಂತ್ವನಗೊಳಿಸುತ್ತೇವೆ. ನಿಮ್ಮಲ್ಲಿಯ ಅನಭಿಷಿಕ್ತ ಹಾಗೂ ನವವಸ್ತ್ರದವರೊಡನೆ, ರೊಟ್ಟಿ ತುಂಡು, ಮಧುಬಟ್ಟಲಗಳನ್ನೂ ಸ್ವೀಕರಿಸಲೆಂದೇ ಇಲ್ಲಿಯೂ ನಾವು ಬಂದಿಲ್ಲವೇ?

''ಕೆಲವರು, ಹೌದು, ತೀರಾ ಕೆಲವೇ ಗರಿರಹಿತರು ಗಾಳಿಯನ್ನು ಧೈರ್ಯದಿಂದ ಎದುರಿಸುತ್ತಾರೆ, ಹಾಗೂ ಗರಿಯುಳ್ಳವರೂ, ಸಂಪೂರ್ಣ ಸಮರ್ಥರೂ ಇನ್ನೂ ಗೂಡಿನೊಳಗೇ ಇದ್ದಾರೆ.

"ನಾವು ಅವರೆಲ್ಲರನ್ನೂ— ಮಂದರನ್ನೂ ಚುರುಕರನ್ನೂ – ನಮ್ಮ ಚುಂಚುಗಳಿಂದಲೇ ಪೋಷಿಸಬೇಕಾಗಿದೆ.''

ಮಗದೊಬ್ಬ ಪ್ರಸಿದ್ಧ ನುಡಿದ: ''ನೀನು ಜೆರೂಸಲೇಮಿನ ಸೂಳೆಯರ ನ್ನೆಲ್ಲ ಸಂರಕ್ಷಿಸುತ್ತೀ. ನಾನು ಕೇಳಿದ್ದೇನಲ್ಲ?''

ಆಗ ನಾನು ಜೀಸಸ್‌ನ ಮುಖದಮೇಲೆ, ಮೊದಲಿದ್ದಂತೆ, ಲೆಬನಾ ನದ ಬೆಟ್ಟಗಳ ಬಂಡೆಗಲ್ಲೆತ್ತರವನ್ನು ಕಂಡೆ; ಅವನು ನುಡಿದ: ''ಹೌದು; ಅದು ನಿಜ.

'' ಪಾಪ–ಪುಣ್ಯ ವಿಚಾರಣೆಯದಿನ ಈ ಹೆಂಗಳೆಯರೆಲ್ಲ, ಆ ನಮ್ಮ ಮಹಾಪಿತನ ಸಿಂಹಾಸನದೆದುರು ಬರುವರು, ಹಾಗೂ ತಮ್ಮ ಕಂಬನಿಗಳಿಂ ದಲೇ ತಾವು ಪವಿತ್ರಗೊಳಿಸಲ್ಪಡುವರು. ಆದರೆ ನೀವು, ನೀವು ಮಾತ್ರ ನಿಮ್ಮ ನಿರ್ಣಯ ನಿಗಳದಿಂದ ಬಂಧಿತರಾಗಿ ಕೆಳಗೊಗೆಯಲ್ಪಡುವಿರಿ.

'' ಬ್ಯಾಬಿಲೋನವು ತನ್ನೀ ಸೂಳೆಯರಿಂದ ಹಾಳಾಗುವದಿಲ್ಲ; ಬ್ಯಾಬಿ ಲೋನವು, ತನ್ನಲ್ಲಿಯ ಡಾಂಭಿಕರು ದಿನದ ಬೆಳಕನ್ನು ಕಾಣದಾಗಲೆಂದೇ ಸುಟ್ಟು ಭಸ್ಮವಾಗಿ ಬೀಳುವುದು.''

ಇನ್ನೊಬ್ಬ ಪ್ರಸಿದ್ಧನೂ, ಅವನನ್ನು ಇನ್ನೇನನ್ನೊ ಕೇಳಬಯಸಿದ್ದನು; ಆದರೆ ನಾನು ಸನ್ನೆಮಾಡಿ ಅವರನ್ನೆಲ್ಲ ಸುಮ್ಮನಿರಲು ಕೇಳಿಕೊಂಡೆ. ಏಕೆಂದರೆ ಅವನು ಅವರನ್ನೆಲ್ಲ ಗಾಬರಿಗೊಳಿಸಿ ಬಿಡುವನೆಂಬದು ನನಗೆ ಗೊತ್ತಿತ್ತು. ಅಲ್ಲದೆ ಅವರೂ ನನ್ನ ಅತಿಥಿಗಳೇ ಆಗಿದ್ದರು; ಅವರು ನಾಚಿ ಮೋರೆ ಕೆಳಗೆ ಮಾಡದಂತೆ ನಾನು ನೋಡಿಕೊಳ್ಳಬೇಕಿತ್ತು.

ಮಧ್ಯರಾತ್ರಿಯ ಸುಮಾರಿಗೆ ಈ ಪ್ರಸಿದ್ಧರೆಲ್ಲ ಹೊರ ಹೊರಡಲಿದ್ದರು; ಅವರ ಆತ್ಮಗಳು ನಡುಗುತ್ತಿದ್ದವು.

ಬಳಿಕ ನಾನು ನನ್ನ ಕಂಗಳನ್ನು ಮುಚ್ಚಿಕೊಂಡೆ; ಕೂಡಲೆ, ದರ್ಶನ ದಲ್ಲಿಯೇ ಎಂಬಂತೆ, ಜೀಸಸ್‌ನ ಸುತ್ತಲೂ ಏಳುಜನ ಹೆಂಗಳೆಯರು ಶುಭ್ರ ವಸನಧಾರಿಗಳಾಗಿ ನಿಂತುದನ್ನು ಕಂಡೆ. ಅವರ ಕೈಗಳು ಅವರ ಎದೆಯ

ಮೇಲೆ ಮಡಿಸಿ ಕಟ್ಟಿಕೊಂಡಿದ್ದವು, ಅವರ ತಲೆಗಳು ಮುಂಬಾಗಿದ್ದವು. ಆ ನನ್ನ ಮುಂಜುಗನಸಿನಲ್ಲಿಯೇ ನಾನು ತುಸು ತೀಕ್ಷ್ಣವಾಗಿ ಈಕ್ಷಿಸಿದೆ. ಆ ಏಳು ಜನ ಹೆಂಗಳೆಯರಲ್ಲಿ ಒಬ್ಬಳ ಮುಖವು ನಸಗಾ ಕತ್ತಲೆಯಲ್ಲಿಯೂ, ಹೊಳೆ ಹೊಳೆದು ಸ್ಪಷ್ಟವಾಗಿ ಕಾಣಿಸುತ್ತಿತ್ತು.

ಅದೇ, ಜೆರೂಸಲೇಮದಲ್ಲಿ ಜೀವಿಸಿದ್ದ ಆ ಸೂಳೆಯ ಮುಖವಾಗಿತ್ತು.

ಬಳಿಕ ನಾನು ಕಣ್ಣುಬಿಟ್ಟು ಅವನೆಡೆಗೆ ನೋಡಿದೆ ಅವನು ನನ್ನೆಡೆಗೂ, ಹಾಗೂ ಇನ್ನೂ ಊಟ ಬಿಟ್ಟೇಳದ ಉಳಿದವರೆಡೆಗೂ ನೋಡುತ್ತ ನಗುತ್ತಿದ್ದ.

ನಾನು ಮತ್ತೆ ಕಣ್ಣು ಮುಚ್ಚಿಕೊಂಡೆ ಕೂಡಲೆ ಅವನ ಸುತ್ತು, ಬೆಳಕಿನಲ್ಲಿ ಶ್ವೇತ ವಸ್ತ್ರಧಾರಿಗಳಾದ ಏಳು ಪುರುಷರನ್ನು ಕಂಡೆ. ಅವರಲ್ಲಿ ಒಬ್ಬನ ಮುಖವನ್ನೂ ನಾನು ಗುರುತಿಸಿದೆ.

ಅವನ ಬಲಗೈಯಾಗಿ ಆ ಬಳಿಕ ಬಲಿದಾನಕ್ಕೆ ಬಲಿಯಾದ ಕಳ್ಳನ ಮುಖವೇ ಅದಾಗಿತ್ತು.

ಆ ಮೇಲೆ ಜೀಸಸ್‌ನೂ ಅವನ .ಮಿತ್ರರೂ, ನಮ್ಮ ಮನೆಯಿಂದ ಹೊರಹೊರಟು ಹಾದಿಹಿಡಿದರು.

## •೩೧. ಗ್ಯಾಲಿಲಿಯ ಒಬ್ಬ ವಿಧವೆ

ನನ್ನ ಮಗ, ಚೊಚ್ಚಿಲು ಮತ್ತು ಒಬ್ಬನೇ ಒಬ್ಬ ಮಗ, ಜೀಸಸ್‌ನೆಂಬ ಮನುಷ್ಯ, ಜನ ಜಂಗುಳಿಯೆದುರು ಭಾಷಣ ಮಾಡುತ್ತಿದ್ದುದನ್ನು ಕೇಳುವವರೆಗೆ, ಅವನು ಹೊಲದಲ್ಲಿ ಗೈಮೆಮಾಡುತ್ತ ತೃಪ್ತಿಯಿಂದಲೇ ಇದ್ದ.

ಆ ಬಳಿಕ ನನ್ನ ಮಗ ಬೇರೆಯೇ ಆಗಿ ಬಿಟ್ಟ; ಯಾವದೋ ಒಂದು ಅಪರಿಚಿತ, ಅನಾರೋಗ್ಯಕರ ಹೊಸ ಚೇತನ ಹಿಡಿದವರಂತೆ ಬೇರೆಯೇ ಆಗಿಬಿಟ್ಟ.

ಅವನು ಹೊಲ, ತೋಟಗಳನ್ನು ಬಿಟ್ಟುಬಿಟ್ಟ; ನನ್ನ ಯೋಚನೆಯನ್ನೂ ಬಿಟ್ಟ. ಆಕಾಶಗಮಗನದ ಪ್ರಾಣಿಯಂತೆ ಅವನು ವ್ಯರ್ಥವಾಗಿಬಿಟ್ಟ.

ನಾಝರೆಥದ ಆ ಜೀಸಸ್‌ನೊಬ್ಬ ಪಾಪಿ; ಏಕೆಂದರೆ ಒಳ್ಳೆ ಜನರು ತಾಯಿಯಿಂದ ಮಗನನ್ನಗಲಿಸುವರೇ?

ನನ್ನ ಮಗು ನನಗೆ ಹೇಳಿದ ಕೊನೆಯ ಮಾತುಗಳು ಹೀಗೆ: ''ಅವನ ಶಿಷ್ಯರಲ್ಲೊಬ್ಬನೊಡನೆ ನಾನು ಉತ್ತರ ದೇಶಕ್ಕೆ ಹೋಗುವೆ. ನನ್ನ ಜೀವನವೇ ಆ ನಾಝರೀನನನ್ನು ಅವಲಂಬಿಸಿದೆ. ನೀನು ನನಗೆ ಜನ್ಮಕೊಟ್ಟ ತಾಯಿ; ಅದಕ್ಕಾಗಿ ನಾನು ನಿನಗೆ ಕೃತಜ್ಞ. ಆದರೂ ನಾನು ಹೊರಟು ಹೋಗಲೇಬೇಕು. ನಮ್ಮ ಈ ಸಮೃದ್ಧ ಹೊಲವನ್ನೂ ಸಂಪತ್ತನ್ನೂ ಬೆಳ್ಳಿ ಬಂಗಾರಗಳನ್ನೂ ನಿನಗೇ ಬಿಟ್ಟುಕೊಟ್ಟಿಲ್ಲವೇ? ನನ್ನ ಈ ಉಡುಪು; ಈ ಕೋಲುಗಳನ್ನುಳಿದು ಇನ್ನೇನನ್ನೂ ನಾನು ಸಂಗಡ ಒಯ್ಯುವದಿಲ್ಲ.''

ಹೀಗೆ ನುಡಿದು ನನ್ನ ಮಗ ನನ್ನನ್ನು ಬಿಟ್ಟು ಹೊರಟುಬಿಟ್ಟ.

ಈಗ ರೋಮನ್ನರೂ, ಪಾದ್ರಿಗಳನೂ, ಜೀಸಸ್‌ನನ್ನು ಹಿಡಿದು ಶಿಲುಬೆಗೇರಿಸಿಬಿಟ್ಟರು; ಅವರು ಒಳ್ಳೆಯದನ್ನೇ ಮಾಡಿದರು.

ತಾಯಿ-ಮಕ್ಕಳನ್ನಗಲಿಸುವ ಈ ಮನುಷ್ಯ ದೈವೀಪುರುಷನಾಗಿರಲೇ ಆರ.

ನಮ್ಮ ಮಕ್ಕಳನ್ನೆಲ್ಲ ಜೆಂಟಾಯಿಲದ ಪಟ್ಟಣಗಳಿಗೆ ಕಳಿಸುವ ಇವ ನಮ್ಮ ಮಿತ್ರನಾಗಲಾರ.

ನನ್ನ ಮಗ ನನ್ನೆಡೆಗೆ ತಿರುಗಿ ಬರುವದಿಲ್ಲೆಂಬದು ನನಗೆ ಗೊತ್ತು; ಅವನ ಕಂಗಳಲ್ಲಿಯೇ ನಾನದನ್ನು ಕಂಡೆ. ಇದಕ್ಕಾಗಿಯೇ, ಯಾವನು ನನ್ನನ್ನು ಈ ಹರಗದ ಹೊಲ, ಕೃಷಿಯಿರದ ತೋಟಗಳಲ್ಲಿ ಏಕಾಕಿಯನ್ನಾಗಿ ಮಾಡಿದನೋ, ಆ ನಾಝರೆಥದ ಜೀಸಸ್‌ನನ್ನು ನಾನು ದ್ವೇಷಿಸುತ್ತೇನೆ.

ಅವನನ್ನು ಸ್ತುತಿಸುವವರನ್ನು ದ್ವೇಷಿಸುತ್ತೇನೆ.

ಕೆಲವೇ ದಿನಗಳ ಹಿಂದೆ ಅವರು, ಜೀಸಸ್‌ನು ಹೀಗೆಂದನೆಂದು ಹೇಳಿದರು: ''ನನ್ನ ನುಡಿಗಳನ್ನು ಕೇಳುವವರೂ, ನನ್ನನ್ನು ಹಿಂಬಾಲಿಸುವವರೂ ನನ್ನ ಬಂಧುಗಳು, ನನ್ನ ತಾಯಿ-ತಂದೆಗಳು.''

ಆದರೆ, ಅವನ ಬೆಂಬತ್ತಿ ಹೋಗಲೆಂದು ಮಕ್ಕಳು ತಮ್ಮ ತಾಯಂದಿರನ್ನು ಏಕೆ ತೊರೆಯಬೇಕು?

ಇನ್ನೂ ರುಚಿನೋಡದ ಬುಗ್ಗೆಗಾಗಿ ನನ್ನ ಮೊಲೆಹಾಲೇ ಏಕೆ ಮರೆತು ಹೋಗಬೇಕು? ಉದಾಶೀನ ಹಾಗೂ ಸ್ನೆಹಾಭಾವದ ಉತ್ತರ ದೇಶಕ್ಕಾಗಿ ನನ್ನ ಮಡಿಲಕಕ್ಕುಲತೆಯೇ ಏಕೆ ತ್ಯಜಿಸಲ್ಪಡಬೇಕು?

ಹೌದು, ನಾನೀ ನಾರ್ಥುರೀನನನ್ನು ದ್ವೇಷಿಸುವೆ, ನನ್ನ ಜೀವ ಮಾನದ ಕೊನೆಯವರೆಗೂ ದ್ವೇಷಿಸುವೆ. ಏಕೆಂದರೆ ಅವನು, ನನ್ನ ಚೊಚ್ಚಿಲ ಹಾಗೂ ಒಬ್ಬನೇ ಒಬ್ಬನಾದ ಮಗನನ್ನು ಅಪಹರಿಸಿ ಬಿಟ್ಟಿದ್ದಾನೆ.

## ೩೨. ಜೀಸಸ್‌ನ ಕಕ್ಕನ ಮಗ ಜುಡಾಸ

ಆಗಸ್ಟ ತಿಂಗಳದಲ್ಲಿಯ ಒಂದಿರುಳು ನಾವೆಲ್ಲ ಪ್ರಭುವಿನೊಡನೆ, ಸರೋವರ ತೀರದ ಒಂದು ಬಯಲಲ್ಲಿದ್ದೆವು. ಪೂರ್ವಜರು ಆ ಬಯಲನ್ನು "ತಲೆಬುರುಡೆ ಗದ್ದೆ'' ಎಂದು ಕರೆಯುತ್ತಿದ್ದರು.

ಜೀಸಸ್‌ನು ಹುಲ್ಲುಮೇಲೊರಗಿ ನಕ್ಷತ್ರಗಳನ್ನು ನಿಟ್ಟಿಸುತ್ತಿದ್ದ.

ಒಮ್ಮೆಲೆ ಇಬ್ಬರು ನಮ್ಮೊಡನೆ ತೇಕುತ್ತ ಓಡಿ ಬಂದರು. ದುಃಖದಲ್ಲಿದ್ದವರಂತೆ, ಅವರು ಬಂದವರೇ ಜೀಸಸ್‌ನ ಕಾಲಿಗೆರಗಿದರು. ಜೀಸಸ್ ಚಟಕ್ಕನೆ ಎದ್ದುನಿಂತ; ಅವರನ್ನು ಕೇಳಿದ : '' ನೀವೆಲ್ಲಿಂದ ಬಂದಿರಿ ? ''

ಅವರೊಳಗಿನೊಬ್ಬ ನುಡಿದ : '' ಮ್ಯಾಚೀರಿಸ್‌ದಿಂದ. ''

ಜೀಸಸ್ ಅವನ ಕಡೆ ನೋಡಿದ, ಸಂತ್ರಸ್ತನಾದ; ಮತ್ತೆ ಕೇಳಿದ : '' ಜಾನ್ ಹೇಗಿದ್ದಾನೆ?''

ಆ ಮನುಷ್ಯ ನುಡಿದ : '' ಅವನೀ ದಿನ ಕೊಲ್ಲಲ್ಪಟ್ಟ. ಸೆರೆಮನೆಯಲ್ಲಿಯೇ ಅವನ ತಲೆ ಹೊಡೆಯಲಾಯಿತು. ''

ಜೀಸಸ್ ಮುಖ ಮೇಲೆ ಮಾಡಿದ. ಬಳಿಕ ನಮ್ಮಿಂದಾಚೆಗೆ ತುಸು ದೂರ ನಡೆದು ಹೋದ. ಕೆಲಹೊತ್ತಿನ ಮೇಲೆ ತಿರುಗಿ ನಮ್ಮ ಮಧ್ಯೆ ಬಂದು ನಿಂತ.

ಅವನು ನುಡಿದ: '' ಈ ಪ್ರವಾದಿಯನ್ನು ಆ ಅರಸು ಈ ಮೊದಲೇ ಕೊಲ್ಲಬೇಕಾಗಿತ್ತು. ನಿಶ್ಚಯವಾಗಿಯೂ ಆ ಅರಸು ತನ್ನ ಪ್ರಜೆಗಳ ಸುಖವನ್ನೇ ಕೆಣಕಿದ್ದಾನೆ. ಪುರಾತನ ಅರಸರು, ಪ್ರವಾದಿಯ ತಲೆಯನ್ನು ಕೊಲೆಗಡಕರಿಗೊಪ್ಪಿಸಲು ಇಷ್ಟು ಕೂಡ ತಡ ಮಾಡುತ್ತಿದ್ದಿಲ್ಲ ನಾನು ಜಾನನಿಗಾಗಿ ದುಃಖಿಸುವದಿಲ್ಲ; ಆದರೆ ಅವನನ್ನು ಖಡ್ಗಕ್ಕಾಹುತಿ ಕೊಟ್ಟ

ಹೆರಾಡನಿಗಾಗಿ ದುಃಖಿಸುವೆ. ಪಾಪ! ಆ ಅರಸು, ಹಗ್ಗ ಹಂಗಪ ಪಕ್ಷಿ ಹಿಡಿದೊಯ್ಯುತ್ತಿದ್ದ ಪಶುವಿನಂತಾಗಿದ್ದಾನೆ. ಪಾಪ! ತಮ್ಮ ವೈಭವದ ಕತ್ತಲಲ್ಲಿ ತಾವೇ ಶೂನ್ಯರಾಗಿದ್ದ ಈ ಪುಟ್ಟ ಪಾಳೆಯಗಾರರು ಕತ್ತರಿಸಿ ಕೆಳಗುರುಳುತ್ತಾರೆ. ಅಂದ ಬಳಿಕ ಸ್ತಬ್ಧ ಸಾಗರದ ಮೃತಮೀನುಗಳಂತಿದ್ದ ನಿಮ್ಮದೇನು? ನಾನೀ ಅರಸರನ್ನು ದ್ವೇಷಿಸುವದಿಲ್ಲ. ಜನಜಂಗುಳಿಗಿಂತಲೂ ಜಾಣರಾದಾಗ ಮಾತ್ರ ಅವರೇ ಜನರನ್ನಾಳಲಿ.''

ಆ ಬಳಿಕ ಸ್ವಾಮಿ, ಆ ಎರಡು ದುಃಖೀ ಮುಖಗಳ ಕಡೆಗೂ, ಬಳಿಕ ನಮ್ಮೆಲ್ಲರ ಕಡೆಗೂ ನೋಡುತ್ತ ಮತ್ತೆ ಹೀಗೆ ನುಡಿದ: ''ಜಾನನು ಗಾಯ ಗೊಂಡೇ ಜನಿಸಿದ್ದ; ಅವನ ಗಾಯದ ನೆತ್ತರವು ಅವನ ನುಡಿಯೊಡನೆ ಹರಿಯುತ್ತಿತ್ತು. ಅವನು ತನ್ನಿಂದಲೇ ಸ್ವತಂತ್ರವಾಗದ ಸ್ವಾತಂತ್ರ್ಯ ವಾಗಿದ್ದ. ಹಾಗೂ ಸರಳರೊಡನೆಯೂ ನ್ಯಾಯವಂತರೊಡನೆಯೂ ಶಾಂತ ನಾಗಿರುತ್ತಿದ್ದ. ನಿಜವಾಗಿ ಹೇಳಬೇಕೆಂದರೆ ಅವನು ಕಿವುಡರ ನಾಡಿನಲ್ಲಿ ಕೂಗಿಕೊಳ್ಳುವ ದನಿಯಾಗಿದ್ದ. ದುಃಖಿಯೂ ಏಕಾಕಿಯೂ ಆಗಿದ್ದ ಅವನನ್ನು ನಾನು ಪ್ರೀತಿಸಿದ್ದೆ. ತಲೆವಾಗಿ ಹುಡಿಗೂಡುವುದಕ್ಕಿಂತಲೂ ತನ್ನ ತಲೆಯನ್ನೇ ಖಡ್ಗಕ್ಕಾಹುತಿಯಾಗಿ ಕೊಟ್ಟ ಅವನ ಅಭಿಮಾನವನ್ನು ನಾನು ಪ್ರೀತಿಸಿದ್ದೆ. ಝುಚರ್‍ಯಾದ ಪುತ್ರನಾದ ಈ ಜಾನನು ಅವನ ಕುಲದಲ್ಲೇ ಕಟ್ಟಕಡೆಯವನು; ಹಾಗೂ ತನ್ನ ಪೂರ್ವಜರಂತೆ ಅವನೂ, ದೇಗುಲ ಹಾಗೂ ಬಲಿಪೀಠಗಳ ನಡುವೇ ಕೊಲ್ಲಲ್ಪಟ್ಟನು ಎಂದು ನಿಶ್ಚಯವಾಗಿ ನಾನು ನಿಮಗೆ ಹೇಳುವೆ.''

ಹೀಗೆ ನುಡಿದವನೇ ಜೀಸಸ್ ನಮ್ಮನ್ನುಳಿದು ಹೊರಟುನಡೆದ.

ಮತ್ತೆ ತಿರುಗಿ ಬಂದು ನುಡಿದ: ''ಕ್ಷಣಿಕ ಅರಸರು ಅನಂತದರಸ ರನ್ನು ಕೊಲ್ಲಿಸುವ ಪ್ರಘಾತ ಎಂದೆಂದಿಗೂ ನಡೆಯುತ್ತಲೇ ಬಂದಿದೆ. ಇನ್ನೂ ಜನಿಸದ ಮಾನವನನ್ನು ವಿಚಾರಣೆಗೆ ಗುರಿಮಾಡಿ ಅರಸನ್ನು ಹೀಗಳೆಯುವ ಹಾಗೂ ಅಪರಾಧಗೈಯುವ ಮೊದಲೇ ಅವನಿಗೆ ಮರಣದಂಡನೆ ವಿಧಿಸುವ ಕೃತಿ ಎಂದೆಂದಿಗೂ ನಡೆಯುತ್ತಲೇ ಬಂದಿದೆ.

''ಝುಚರ್‍ಯಾದ ಈ ಪುತ್ರನು ನನ್ನೊಡನೆ, ನನ್ನ ರಾಜ್ಯದಲ್ಲಿ, ಬದುಕು ತ್ತಾನೆ; ಅವನ ಬಾಳು ಚಿರಂಜೀವಿ.''

ಬಳಿಕ ಅವನು ಜಾನನ ಶಿಷ್ಯರೆಡೆಗೆ ತಿರುಗಿ ನುಡಿದ: "ಪ್ರತಿ ಕೃತಿಗೂ ಮರುಕೃತಿಯೆಂಬುದಿದೆ. ಈ ಕೃತಿಯ ಮರುಕೃತಿ ನಾನೇ ಆಗಬಹುದು. ನನ್ನ ಗೆಳೆಯನ ಗೆಳೆಯರೆಡೆಗೆ ತಿರುಗಿ ಹೋಗಿರಿ; ನಾನೂ ಅವರೊಡನೆಯೇ ಇದ್ದೇನೆಂದು ಅವರಿಗೆ ಹೇಳಿರಿ"

ಆ ಈರ್ವರು ನಮ್ಮನ್ನುಳಿದು ಹೊರಟರು; ಹೊರಡುವಾಗ ಅವರು, ಹೃದಯದ ಜಡತೆ ಕಡಿಮೆಯಾದವರಂತೆ ಕಂಡರು. ಬಳಿಕ ಜೀಸಸ್ ಹುಲ್ಲ ಮೇಲೆ ಹಾಗೇ ಉರುಳಿ ಎರಡೂ ಕೈ ಚಾಚಿಕೊಂಡು ನಕ್ಷತ್ರಗಳನ್ನು ನೀರಿಕ್ಷಿಸತೊಡಗಿದ.

ಈಗ ಬಹಳ ಹೊತ್ತಾಗಿತ್ತು. ನಾನೂ ಅವನಿಂದ ಬಹಳ ದೂರ ವಿದ್ದಿಲ್ಲ. ನನಗೂ ವಿಶ್ರಾಂತಿ ಬೇಕಾಗಿತ್ತು; ಆದರೆ ನನ್ನ ನಿದ್ದೆಯ ಬಾಗಿಲನ್ನೇ ಯಾವದೋ ಕೈಯು ಬಡಿಯುತ್ತಿತ್ತು. ಹೀಗಾಗಿ, ಅರುಣೋದಯವಾಗುವವರೆಗೆ ಹಾಗೂ ಜೀಸಸ್‌ನು, ಮುಂದೆ ಹಾದೀ ಹಿಡಿಯಲು ಕರೆಯುವ ವರೆಗೆ, ನಾನು ಎಚ್ಚರದಿಂದಲೇ ಬಿದ್ದುಕೊಂಡಿದ್ದೆ.

## ೩೩. ಮರುಭೂಮಿಯ ಆ ಮಾನವ

ನಾನು ಜೆರೂಸಲೇಮಕ್ಕೆ ಪರಕೀಯನಾಗಿದ್ದೆ. ಪುಣ್ಯಸ್ಥಳವಾದ ಜೆರೂಸಲೇಮವನ್ನು ನೋಡಲೆಂದೂ ಅಲ್ಲಿಯ ಪೀಠಕ್ಕೆ ಬಲಿ ಒಪ್ಪಿಸಲೆಂದೂ ಬಂದಿದ್ದೆ; ಏಕೆಂದರೆ ನನ್ನ ಹೆಂಡತಿ, ನನ್ನ ವಂಶೋದ್ಧಾರಕ್ಕೆಂದು ಅವಳಿ ಜವಳಿ ಗಂಡುಮಗುಗಳನ್ನು ಹೆತ್ತಿದ್ದಳು.

ಪೀಠಕ್ಕೆ ಮುಡಿಪು ಸಲ್ಲಿಸುವುದೇ ಮೊದಲಾದ ಕಾರ್ಯಗಳು ಮುಗಿದ ಬಳಿಕ ನಾನು ಗುಡಿಯ ಮೇಲಿನ ಪಟಾಂಗಣದಲ್ಲಿ ನಿಂತುಕೊಂಡು ಕೆಳಗೆ ಧನವಿನಿಮಯ ಮಾಡುವವರನ್ನೂ ಹಾಗೂ ಮುಂದಿನಂಗಳದಲ್ಲಿ ನೆರೆದ ಮಹಾ ಗದ್ದಲವನ್ನೂ ನೋಡುತ್ತಲಿದ್ದೆ.

ಅಲ್ಲಿ ನಾನು ನಿಂತುಕೊಂಡಂತೆಯೇ, ಆ ಧನವಿನಿಮಯದವರ ಹಾಗೂ ಬಲಿಗಾಗಿ ಪಾರಿವಾಳ ಮಾರುವವರ ಗುಂಪಿನಲ್ಲಿ ಒಮ್ಮಿಲೆ ಒಬ್ಬ ಮನುಷ್ಯ ಬಂದ.

ಅವನೊಬ್ಬ ಭವ್ಯ ಪುರುಷನಾಗಿದ್ದ. ಹಾಗೂ ಅವನು ಒಳ್ಳೇ ಲಗುಬಗೆಯಿಂದ ಅಲ್ಲಿ ಬಂದಿದ್ದ.

ಅವನು ತನ್ನ ಕೈಯಲ್ಲಿ ಆಡಿನ ಚರ್ಮದ ಹಗ್ಗವನ್ನು ಹಿಡಿದಿದ್ದ. ಧನ ವಿನಿಮಯ ಮಾಡುತ್ತಿದ್ದವರ ಮೇಜುಗಳನ್ನು ಉರುಳಿಸಲೂ, ಬಲಿಗಾಗಿ ಪಕ್ಷಿಗಳನ್ನು ಮಾರುತ್ತಿದ್ದವರನ್ನು ಆ ಹಗ್ಗದಿಂದ ಥಳಿಸಲೂ ಅವನು ಪ್ರಾರಂಭಿಸಿದ.

ಅವನು ದೊಡ್ಡ ದನಿಯಿಂದ "ಆಕಾಶವೇ ಮನೆಯಾದ ಆ ಹಕ್ಕಿಗಳನ್ನು ಆಕಾಶಕ್ಕೇ ಬಿಟ್ಟುಬಿಡಿರಿ" ಎಂದು ಕೂಗುತ್ತಿದ್ದುದು ನನಗೆ ಕೇಳಿಸಿತು.

ಹೆಂಗಸರು ಗಂಡಸರು ಎಲ್ಲರೂ ಅವನಿರುವಲ್ಲಿಂದ ಚದರಿ ಹೋಗತೊಡಗಿದರು. ಅವನು ಉಸುಬಿನ ದಿನ್ನೆಗಳ ನಡುವೆ ಸುಳಿಯುತ್ತಿದ್ದ ಬಿರುಗಾಳಿಯಂತೆ ಸುತ್ತಾಡುತ್ತಿದ್ದ.

ಇದೆಲ್ಲವೂ ಒಂದು ಕ್ಷಣದಲ್ಲಿಯೇ ನಡೆದು ಹೋಯಿತು; ಗುಡಿಯ ಮುಂದಿನ ಪಟಾಂಗಣವು ಧನವಿನಿಮಯದವರಿಂದ ತೆರವಾಗಿ ಹೋಯಿತು. ಕೇವಲ ಆ ಮನುಷ್ಯನೊಬ್ಬನೇ ಏಕಾಕಿಯಾಗಿ ಅಲ್ಲಿ ನಿಂತುಕೊಂಡಿದ್ದ; ತುಸು ದೂರದಲ್ಲಿಯೇ ಅವನ ಅನುಯಾಯಿಗಳು ನಿಂತುಕೊಂಡಿದ್ದರು

ಬಳಿಕ ನಾನು ಈಕಡೆ ತಿರುಗಿದಾಗ ಇನ್ನೊಬ್ಬ ಮನುಷ್ಯ ಆ ಗುಡಿಯ ಪಟಾಂಗಣದಲ್ಲಿದ್ದುದನ್ನು ನೋಡಿದೆ. ಅವನೆಡೆಗೆ ಹೋಗಿ ನಾನವನಿಗೆಂದೆ: "ಇನ್ನೊಂದು ಗುಡಿಯಂತೆಯೇ ಏಕಾಕಿಯಾಗಿ ನಿಂತುಕೊಂಡಿದ್ದ ಈ ಮನುಷ್ಯನಾರು?" ಅವನು ಉತ್ತರಿಸಿದ: "ಇವನೇ ನಾಝರೆಥದ ಜೀಸಸ್. ಇತ್ತೀಚೆಗೆ ಗ್ಯಾಲಿಲಿಯಲ್ಲಿ ಉದ್ಭವಿಸಿದ ಪ್ರವಾದಿ. ಇಲ್ಲಿ ಈ ಜೆರೂಸಲೇಮದಲ್ಲಿಯ ಜನರೆಲ್ಲರೂ ಅವನನ್ನು ದ್ವೇಷಿಸುತ್ತಾರೆ."

"ಅವನ ಚಾಟಿಯೆದುರು ನಿಲ್ಲಲು ನನ್ನ ಹೃದಯವು ಸಾಕಷ್ಟು ಸಮರ್ಥವೂ, ಅವನ ಪಾದಗಳೆಡೆಗೆ ಮಣಿಯಲು ಸಾಕಷ್ಟು ನಯವೂ ಆಗಿದೆ" ಯೆಂದು ನಾನು ನುಡಿದೆ.

ಬಳಿಕ ಜೀಸಸ್, ತನ್ನ ದಾರೀ ನೋಡುತ್ತ ನಿಂತಿದ್ದ ಅನುಯಾಯಿಗಳೆಡೆಗೆ ತಿರುಗಿದ. ಅವನು ಅವರೆಡೆಗೆ ತಲುಪುವ ಮೊದಲೇ, ಗುಡಿಯಲ್ಲಿಯ-

ಮೂರು ಪಾರಿವಾಳಗಳು ಹಾರಿ ಬಂದು ಒಂದು ಅವನ ಎಡಭುಜದ ಮೇಲೆಯೂ ಇನ್ನೆರಡು ಅವನ ಪಾದಗಳ ಬಳಿಗೂ ಕುಳಿತವು. ಅವನು ಆ ಮೂರನ್ನೂ ತನ್ನ ಮೃದುಗೈಯಿಂದ ಸವರಿದ. ಬಳಿಕ ಅವನು ಮುನ್ನಡೆದ; ಅವನ ಹೆಜ್ಜೆಗಳ ಪ್ರತಿ ಹೆಜ್ಜೆಗೂ ಹರದಾರಿ ಹರದಾರಿಗಳಿದ್ದವು.

ಅವನು ಈ ನೂರಾರು ಜನ ಸ್ತ್ರೀ ಪುರುಷರನ್ನು ಎದುರಿಸಿ ಚದುರಿಸಲು ಅವನಲ್ಲಿ ಯಾವ ಶಕ್ತಿಯಿತ್ತು ಎಂಬುದನ್ನು ನನಗೀಗ ಹೇಳಬಲ್ಲಿರಾ? ಅವನನ್ನು ಎಲ್ಲರೂ ದ್ವೇಷಿಸುತ್ತಿದ್ದರೆಂದು ನನಗೆ ಹೇಳಲಾಗಿದ್ದರೂ ಆ ದಿನ ಒಬ್ಬರೂ ಅವನೆದುರು ನಿಲ್ಲಲಾಗಲಿಲ್ಲ. ಗುಂಡಿಯ ಪಟಾಂಗಣದಲ್ಲಿ ಅವನು ನಡೆದು ಬರುತ್ತಿರುವಾಗಲೇ ದ್ವೇಷದ ದವಡೆಗಳನ್ನೇ ಅವನು ಕಿತ್ತುಕೊಂಡು ಬಿಟ್ಟಿದ್ದನೇ?

## ೩೪. ಪೀಟರ

ಒಂದು ದಿನ ಇಳಿಹೊತ್ತಿನಲ್ಲಿ ಜೀಸಸ್‌ನು ನಮ್ಮನ್ನೆಲ್ಲ ಬೆಥಸಾಯಿಡಾ ಎಂಬ ಹಳ್ಳಿಗೆ ಕರೆದೊಯ್ದ. ನಾವೆಲ್ಲರೂ ದಣಿದು ಹೋಗಿದ್ದೆವು, ದಾರಿಯ ಧೂಳಿನಿಂದ ಮುಚ್ಚಿಬಿಟ್ಟಿದ್ದೆವು

ನಾವೆಲ್ಲರೂ ತೋಟದ ಮಧ್ಯದಲ್ಲಿರುವ ಒಂದು ದೊಡ್ಡ ಮನೆಯೆದುರು ಬಂದೆವು; ಆ ಮನೆಯ ಯಜಮಾನ ಬಾಗಿಲಲ್ಲೇ ನಿಂತುಕೊಂಡಿದ್ದ.

ಜೀಸಸ್ ಅವನಿಗೆ ಹೇಳಿದ: "ಇವರೆಲ್ಲ ನಿನ್ನ ಮನೆಯಲ್ಲಿಯೇ ಮಲಗಲಿ. ಇದು ಚಳಿಯಿರುಳಾಗಿದೆ; ಈ ಜನಕ್ಕೆ ವಿಶ್ರಾಂತಿಯ ಹಾಗೂ ಬೆಚ್ಚಗಿನ ತಾಣದ ಆವಶ್ಯಕತೆಯಿದೆ."

ಆ ಸಿರಿವಂತ ಮನುಷ್ಯ ನುಡಿದ: "ಇವರೆಲ್ಲ ನನ್ನ ಮನೆಯಲ್ಲಿ ಮಲಗಲಾರರು."

ಜೀಸಸ್‌ನೆಂದ: "ಹಾಗಾದರೆ ಇವರೆಲ್ಲ ಇಲ್ಲಿ ತೋಟದಲ್ಲಾದರೂ ಮಲಗಿಕೊಳ್ಳಲಿ."

ಆ ಮನುಷ್ಯ ಉತ್ತರಿಸಿದ: "ಇಲ್ಲ, ನನ್ನ ತೋಟದಲ್ಲಿಯೂ ಅವರು ಮಲಗಲಾರರು"

ಬಳಿಕ ಜೀಸಸ್ ನಮ್ಮೆಡೆಗೆ ತಿರುಗಿ ನುಡಿದ ; " ಇದೇ, ನಿಮಗೆ ನಾಳಿಗೆ ಬರಲಿರುವ ಭವಿತವ್ಯ. ಈ ವರ್ತಮಾನವೇ ನಾಳಿನ ನಿಮ್ಮ ಭವಿತವ್ಯದಂತಿದೆ. ನಿಮ್ಮನ್ನು ಕಂಡೊಡನೆ ಎಲ್ಲ ಬಾಗಿಲುಗಳೂ ಮುಚ್ಚಿಕೊಳ್ಳುವವು. ಬಾನ ಚಿಕ್ಕೆಗಳ ಕೆಳಗಿನ ಈ ತೋಟಗಳೂ ಕೂಡ ನಿಮಗೆ ಮಲಗಲು ಸ್ಥಳ ಕೊಡ ಲಾರವು.

"ಈ ದಾರಿದಣಿವನ್ನು ನಿಮ್ಮ ಕಾಲುಗಳು ಶಾಂತವಾಗಿ ತಡೆದುಕೊಂಡು ನನ್ನೊಡನೆ ನೀವು ಇನ್ನೂ ಸ್ವಲ್ಪ ನಡೆದು ಬಂದರೆ, ನೀವು, ಕಾಲ್ತೊಳೆವ ಪಾತ್ರೆ, ಹಾಸಿಗೆ, ಬಹುಶಃ ರೊಟ್ಟಿ, ಮಧುಗಳನ್ನೂ ನೀವು ಕಂಡೀರಿ. ಆದರೆ ಒಂದುವೇಳೆ ನೀವಿವನ್ನೆಲ್ಲ ಕಾಣದೆಯೂ ಹೋಗಬಹುದು; ಆಗ ನನ್ನ ಮರುಭೂಮಿಗಳಲ್ಲೊಂದನ್ನು ದಾಟಿದೆವೆಂದು ತಿಳಿದುಕೊಳ್ಳಲು ಮರೆಯ ಬೇಡಿ.

"ಬನ್ನಿ, ಮುಂದೆ ಹೋಗೋಣ. "

ಇಷ್ಟೆಂದೊಡನೆ ಆ ಸಿರಿವಂತ ಮನುಷ್ಯ ಗೊಂದಲದಲ್ಲಿ ಬಿದ್ದ. ಅವನ ಮುಖಮುದ್ರೆಯೇ ಬದಲಾಯಿತು; ತನ್ನೊಳಗೇ ತಾನು ಏನೇನೊ ಒಟಗುಟ್ಟಿದ. ಅದು ನನಗೆ ಕೇಳಿಸಲಿಲ್ಲ. ಅವನು ನಮ್ಮಿಂದ ಮುರುಟಿಕೊಂಡು ತನ್ನ ತೋಟದೊಳಗೆ ತಿರುಗಿನಡೆದ.

ಜೀಸಸ್‌ನನ್ನು ಹಿಂಬಾಲಿಸಿ ನಾವು ಹಾದೀ ಹಿಡಿದೆವು.

## ೩೫. ಬ್ಯಾಬಿಲೋನದ ಜ್ಯೋತಿಷಿ ಮೆಲಾಚೀ

ಜೀಸಸ್‌ನ ಪವಾಡಗಳ ಬಗ್ಗೆ ನೀವು ನನ್ನನ್ನು ಕೇಳುತ್ತೀರಿ.

ಪ್ರತಿ ಸಹಸ್ರ ಸಹಸ್ರ ವರುಷಗಳಲ್ಲಿ, ಸೂರ್ಯ ಚಂದ್ರ, ಹಾಗೂ ಈ ಭೂಮಿತಾಯಿ ಮತ್ತು ಅವಳ ಎಲ್ಲ ಬಂಧುಗ್ರಹಗಳು ಒಂದೇ ಸರಳ ರೇಖೆಯಲ್ಲಿ ಬಂದು ಎಲ್ಲವೂ ಒಂದು ಕ್ಷಣ ಕೂಡಿರುತ್ತವೆ.

ಬಳಿಕ ಅವು ಮೆಲ್ಲಮೆಲ್ಲನೆ ಚದುರಿಹೊಗಿ, ಪುನಃ ಮತ್ತೊಂದು ಸಹಸ್ರ-ಸಹಸ್ರ ವರ್ಷಗಳವರೆಗೂ ಕಾದುಕೊಂಡು ದಾರೀನೋಡುತ್ತಿರುತ್ತವೆ.

ಈ ಋತುಮಾನಗಳಿಗಿಂತಲೂ ಇನ್ನು ಹೆಚ್ಚಿನ ಪವಾಡಗಳಿಲ್ಲ.

ಆದರೂ ನಾನೂ ನೀವೂ ಈ ಎಲ್ಲ ಎಲ್ಲ ಋತುಮಾನಗಳನ್ನು ಅರಿಯೆವು. ಈ ಒಂದು ಋತುವೇ ಮನುಷ್ಯಾಕಾರದಲ್ಲಿ ಮೂರ್ತೀಭವಿಸಿ ಮೂಡಿಬಂದಾಗ ಇನ್ನೇನು?

ನಮ್ಮ ದೇಹಗಳ, ಮತ್ತು ಕನಸುಗಳ ಮೂಲದ್ರವ್ಯಗಳೇ ನಿಯಮ ಬದ್ಧವಾಗಿ ಜೀಸಸ್‌ನಲ್ಲಿ ಕೂಡಿ ಬಂದಿರುತ್ತವೆ. ಅವನೆದುರಿನ ಕಾಲರಹಿತವೂ ಅವನಲ್ಲಿ ಕಾಲಪೂರಿತವಾಗಿ ಬಿಟ್ಟಿದೆ.

ಅವನು ಕುರುಡರಿಗೆ ದಿಟ್ಟಿಯನ್ನೂ, ಪಾರ್ಶ್ವವಾಯು ಹೊಡೆದವರಿಗೆ ಕಾಲುಗಳನ್ನೂ, ಕೊಟ್ಟನೆಂದೂ, ಹುಚ್ಚರ ಮೈಯೊಳಗಿನ ದೆವ್ವಗಳನ್ನು ಓಡಿಸಿಬಿಟ್ಟನೆಂದೂ ಅವರು ಹೇಳುತ್ತಾರೆ.

ಒಮ್ಮೊಮ್ಮೆ, ಈ ಕುರುಡೆಂಪರೆ, ಜಾಜ್ವಲ್ಯ ವಿಚಾರಗಳಿಂದ ಅಳಿಯ ಬಹುದಾದ ತಮೋವಿಚಾರವೂ ಆಗಿರಬಹುದು. ಒಮ್ಮೊಮ್ಮೆ, ಅಳಿದ ಅವ ಯವಗಳೆಂದರೆ, ಉತ್ಸಾಹ ಶಕ್ತಿಯಿಂದ ಅಳಿಯಬಹುದಾದ ಆಲಸ್ಯದ ಕುಂಟಿರಬಹುದು. ಹಾಗೂ, ನಮ್ಮ ಜೀವನದೊಳಗಿನ ಅವಿಶ್ರಾಂತ ಮೂಲ ದ್ರವ್ಯಗಳಾದ ಈ ಭೂತಗಳನ್ನು ಪವಿತ್ರ ಹಾಗೂ ಶಾಂತ ದೇವದೂತರಿಂದ ಹೊಡೆದಟ್ಟಲ್ಪಡಬಹುದು.

ಅವನು ಸತ್ತವರನ್ನೂ ಬದುಕಿಸಿದನೆಂದು ಹೇಳುತ್ತಾರೆ. ಮರಣ ವೆಂದರೇನು? ಎಂಬದನ್ನು ನೀವು ಹೇಳಬಲ್ಲಿರಾದರೆ, ಜೀವನವೆಂದರೇನು? ಎಂಬದನ್ನು ನಾನೂ ಹೇಳಬಲ್ಲೆ.

ಒಂದು ಹೊಲದಲ್ಲಿ ಬಿದ್ದ ಆಲದ ಕಾಯಿಯೊಂದನ್ನು ನಾನು ಪರೀಕ್ಷಿಸಿ ನೋಡಿದೆ. ಅದು ಸ್ತಬ್ಧವೂ ನಿರುಪಯೋಗಿಯೂ ಆಗಿ ಕಾಣುತ್ತಿತ್ತು. ವಸಂತಋತುವಿನಲ್ಲಿ ನಾನದನ್ನು ನೋಡಿದಾಗ ಅದು ಬೇರುಬಿಟ್ಟು ಸಸಿಯಾಗಿ ಮೇಲೆದ್ದು, ರವಿಯೆಡೆಗೆ ಮುಖವೆತ್ತುತ್ತಿದ್ದ ಆಲದಗಿಡದ ಪ್ರಾರಂಭ ಸ್ಥಿತಿಯಾಗಿತ್ತು.

ಈ ಪವಾಡವು ಸಾವಿರ ಸಾವಿರ ಸಲ, ಪ್ರತಿ ಶಿಶಿರದ ತೂಕಡಿಕೆಯಲ್ಲಿ ಹಾಗೂ ಪ್ರತಿ ವಸಂತದ ಆಕಾಂಕ್ಷೆಯಲ್ಲಿ ಮೂಡುತ್ತ ಬಂದಿದ್ದರೂ ಇದೊಂದು ಪವಾಡವೆಂದೇ ನೀವು ತಿಳಿಯಬೇಕು.

ಇದೇ, ಮಾನವ ಹೃದಯದಲ್ಲಿಯೂ ಏಕಾಗಬಾರದು? ಅಭಿಷಿಕ್ತ

ಮಾನವನ ಅಧರಗಳಲ್ಲಿಯೂ ಹಸ್ತಗಳಲ್ಲಿಯೂ ಋತುಮಾನಗಳು ಕೂಡಿ ಬರಲಾರವೇ ?

ಸತ್ತಂತೆ ಬಿದ್ದಿರುವ ಬೀಜಕ್ಕೆ, ಬೇರುಬಿಟ್ಟು ಕೂಡಿ ಬಿಡುವಂತೆ ಮಾಡುವ ಗುಣವನ್ನು ದೇವರು ಪೃಥ್ವಿಗೆ ನೀಡಿದ್ದರೆ, ಸತ್ತಂತೆ ಕಾಣುವ ಹೃದಯದಲ್ಲಿ ಉಸಿರೂದಿ ಅದನ್ನು ಉಸುರಾಡಿಸುವಂತೆ ಮಾಡುವ ಗುಣವನ್ನು ಅವನು ಮಾನವನಿಗೆ ಏಕೆ ಕೊಡದಿರಲಾರ ?

ತೀರ ಅಲ್ಪವೆಂದು ನಾನು ಬಗೆದ ಈ ಪವಾಡಗಳನ್ನು ಕುರಿತು ನುಡಿದಿದ್ದೇನೆ; ಇವಕ್ಕಿಂತಲೂ ಮಹಾಪವಾಡವೆಂದರೆ ಸ್ವತಃ ಆ ಮಾನವನೇ ಆಗಿದ್ದಾನೆ; ದಾರಿಕಾರನಾದ ಆ ಮಾನವನೇ ಆಗಿದ್ದಾನೆ; ನನ್ನ ಕಿಟ್ಟವನ್ನೇ ಚಿನ್ನವನ್ನಾಗಿಸಿದ, ನನ್ನನ್ನು ದ್ವೇಷಿಸುವವರನ್ನೂ ನಾನು ಹೇಗೆ ಪ್ರೀತಿಸಬೇಕೆಂಬದನ್ನು ಕಲಿಸಿದ, ಹಾಗೂ ಹೀಗೆ ಮಾಡುತ್ತ ನನಗೆ ಸ್ವಾಸ್ಥ್ಯವನ್ನು ನೀಡಿದ, ಮತ್ತು ನನ್ನ ನಿದ್ದೆಗೆ ಸವಿಗನಸುಗಳನ್ನು ನೀಡಿದ ಅವನೇ ಮಹಾ ಪವಾಡವಾಗಿದ್ದಾನೆ.

ಇದೇ ನನ್ನ ಸ್ವತಃದ ಜೀವನದಲ್ಲಿಯ ಪವಾಡ.

ನನ್ನಾತ್ಮ ಕುರುಡಾಗಿತ್ತು; ನನ್ನಾತ್ಮ ಕುಂಟಾಗಿತ್ತು. ನಾನು ಅವಿಶ್ರಾಂತ ಭೂತಗಳಿಂದ ಆಕ್ರಮಿಸಲ್ಪಟ್ಟಿದ್ದೆ. ನಾನು ಮೃತನಂತಿದ್ದೆ.

ಆದರೀಗ ನಾನು ಸರಿಯಾಗಿ ನೋಡಬಲ್ಲೆ, ಚೆನ್ನಾಗಿ ನಡೆಯಬಲ್ಲೆ. ನಾನು ಶಾಂತಿಯಿಂದಿದ್ದೇನೆ. ದಿನದ ಪ್ರತಿ ಕ್ಷಣದಲ್ಲಿಯೂ ನನ್ನ ಪ್ರಾಣದ ಘೋಷಣೆ ಹಾಗೂ ಸಾಕ್ಷ್ಯವಾಗಿ ನಾನು ಬದುಕುತ್ತಿದ್ದೇನೆ.

ನಾನವನ ಬೆಂಬಲಿಗರಲೊಬ್ಬನಲ್ಲ. ಋತುವಿಗೊಮ್ಮೆ ಮಹಾಕಾಶದ ಬಯಲನ್ನು ದರ್ಶಿಸುತ್ತಿದ್ದ ಹಾಗೂ ಅಲ್ಲಿಯ ನಿಯಮ-ಪವಾಡಗಳ ಬಗ್ಗೆ ಲಕ್ಷ್ಯಗೊಟ್ಟು ಈಕ್ಷಿಸುತಿದ್ದ ನಾನು ಒಬ್ಬ ಹಳೆಯ ಜ್ಯೋತಿಷಿ.

ನಾನು ನನ್ನ ಜೀವನದ ಸಂಜೆಯಲ್ಲಿದ್ದೇನೆ. ಯಾವಯಾವಾಗ ನಾನಾ ಜೀವನದ ಪ್ರಭಾತವನ್ನು ಶೋಧಿಸುವೆನೋ ಆಗಾಗೆಲ್ಲ ಜೀಸಸ್‌ನ ಯೌವನವೇ ನನಗೆ ಕಂಡು ಬರುತ್ತವೆ.

ಕಾಲವು ಸದಾ ಯೌವನವನ್ನೇ ಶೋಧಿಸುತ್ತಿರುತ್ತದೆ. ನನ್ನಲ್ಲಿ ಮಾತ್ರ ಅದು ಈಗ ದರ್ಶನವನ್ನು ಶೋಧಿಸುತ್ತಿರುವ ಜ್ಞಾನವಾಗಿದೆ.

## ೩೬. ಒಬ್ಬ ತತ್ತ್ವಜ್ಞಾನಿ

ಅವನು ನಮ್ಮೊಡನಿದ್ದಾಗೆಲ್ಲ, ನಮ್ಮನ್ನೂ ನಮ್ಮ ಜಗತ್ತನ್ನೂ ಆಶ್ಚರ್ಯ ಗಂಗಳಿಂದ ಈಕ್ಷಿಸುತ್ತಿದ್ದ. ಏಕೆಂದರೆ ಕಾಲನ ತೆರೆಯಿಂದ ಅವನ ಕಂಗಳು ಮರೆಮಾಡಲ್ಪಟ್ಟದ್ದಿಲ್ಲ ಹಾಗೂ ಅವನು ನೋಡುತ್ತಿದ್ದುದೆಲ್ಲ, ಅವನ ಯೌವನದ ಬೆಳಕಿನಲ್ಲಿ ತಿಳಿ ತಿಳಿಯಾಗಿ ಕಾಣುತ್ತಿತ್ತು.

ಚೆಲುವಿನ ಆಳದ ಬಗ್ಗೆ ಅವನಿಗೆ ಗೊತ್ತಿದ್ದರೂ ಅವನು ಅದರ ಶಾಂತಿ-ಭವ್ಯತೆಗಳನ್ನು ಕಂಡು ಯಾವಾಗಲೂ ಅಚ್ಚರಿಪಡುತ್ತಿದ್ದ. ಅವನು ಈ ಭೂಮಿಯ ಮೇಲೆ, ಮೊಟ್ಟಮೊದಲಿನ ಮನುಷ್ಯ ಮೊಟ್ಟಮೊದಲಿನ ದಿನ ನಿಂತಂತೆ ನಿಲ್ಲುತ್ತಿದ್ದ.

ಭಾವನೆಗಳೆಲ್ಲವೂ ಮಂದವಾಗಿ ಹೋದ ನಾವು ಹಗಲ ಬೆಳಕಿನಲ್ಲಿ ನಿಟ್ಟಿಸುತ್ತಿದ್ದರೂ ನಮಗೇನೂ ಕಾಣಿಸುವದೇ ಇಲ್ಲ; ಕಿವಿಗೊಟ್ಟು ಆಲಿಸಿ ದರೂ ಕೇಳಿಸುವದೇ ಇಲ್ಲ. ಕೈ ಚಾಚಿದರೂ ನಿಲುಕಿ ಸೋಂಕುವದಿಲ್ಲ. ಅರೇ ಬಿಯಾದ ಅಗುರೆಲ್ಲವೂ ಉರಿದು ಹೋಗುತ್ತಿದ್ದರೂ, ಅದರ ಸುವಾಸನೆಯೇ ನಮಗೆ ಹತ್ತದೆ ನಾನು ನಮ್ಮ ಹಾದೀ ಹಿಡಿದು ಹೋಗುತ್ತಿರುತ್ತೇವೆ.

ಸಂಜೆಗೆ ತನ್ನ ಹೊಲಗಳಿಂದ ತಿರುಗಿ ಬರುತ್ತಿದ್ದ ನೇಗಿಲದವನನ್ನು ನಾವು ಈಕ್ಷಿಸುವದಿಲ್ಲ; ಅಥವಾ ಕುರಿಹಿಂಡನ್ನು ದಡ್ಡಿಗೆ ಸಾಗಿಸುತ್ತಿದ್ದ ಕುರುಬನ ಕೊಳಲದನಿಯನ್ನು ಕೇಳುವದಿಲ್ಲ; ಅಥವಾ ಕೈಚಾಚಿ ಸೂರ್ಯಾಸ್ತ ವನ್ನು ಸೋಂಕಲೆತ್ನಿಸುವದಿಲ್ಲ ಹಾಗೂ ಸೆರಾನದ ಗುಲಾಬಿ ಹೂಗಳ ಸುಗಂಧಕ್ಕಾಗಿ ನಮ್ಮ ಮೂಗು ಹಸಿದಿರುವದಿಲ್ಲ.

ಇಲ್ಲ; ರಾಜ್ಯವಿರದ ರಾಜನನ್ನು ನಾವೆಂದೂ ಮನ್ನಿಸುವದಿಲ್ಲ. ಕೈಗಳಿಂದ ತಂತಿಗಳು ಜಗ್ಗಲ್ಪಡದ ಹೊರತು ನಮಗೆ ವೀಣಾರವ ಕೇಳಿಸುವ ದಿಲ್ಲ. ಹಾಗೂ ನಮ್ಮ ಓಲಿವ್ಹ್ ತೋಟದಲ್ಲಿ ತಾನೂ ಒಂದು ಚಿಕ್ಕ ಓಲಿವ್ಹ್ ಗಿಡವಾಗಿ ಆಡುತ್ತಿದ್ದ ಮಗುವನ್ನೂ ನಾವು ನೋಡುವದಿಲ್ಲ. ಹಾಗೂ ಶಬ್ದಗಳೆಲ್ಲವೂ ಈ ತೊಗಲದುಟಿಗಳಿಂದ ಹೊರಬರದ ಹೊರತು ನಾವು ಒಬ್ಬರಿಗೊಬ್ಬರು ಕಿವುಡರೋ ಮೂಕರೋ ಆಗಿ ಬಿಡುತ್ತಿರುತ್ತೇವೆ.

ನಿಜವಾಗಿಯೆಂದರೆ, ನೋಡುತ್ತಿದ್ದರೂ ನಾವು ಕಾಣುವದಿಲ್ಲ; ಆಲಿಸು

ತ್ತಿದ್ದರೂ ನಾವು ಕೇಳುವದಿಲ್ಲ. ನಾವು ಉಣ್ಣುತ್ತೇವೆ, ಕುಡಿಯುತ್ತೇವೆ, ಆದರೆ ರುಚಿ ಕಾಣುವದಿಲ್ಲ. ಇದೇ ನಮ್ಮೆಲ್ಲರ ಹಾಗೂ ನಾಝರೆಥದ ಜೀಸಸ್‌ನ ನಡುವಿರುವ ಅಂತರವಾಗಿದೆ.

ಅವನ ಭಾವನೆಗಳು ಸರ್ವದಾ ನವೋನವವಾಗಿರುತ್ತವೆ ಹಾಗೂ ಈ ಜಗತ್ತು ಯಾವಾಗಲೂ ಅವನಿಗೊಂದು ಹೊಸ ಜಗತ್ತೇ ಆಗಿರುತ್ತದೆ

ಮಗುವಿನ ತೊದಲು ನುಡಿಗಳೂ ಅವನಿಗೆ ಸಮಸ್ತ ಮಾನವ ಕುಲದ ಆಕ್ರಂದನಕ್ಕಿಂತೇನೂ ಕಡಿಮೆಯೆಂದೆನಿಸುವದಿಲ್ಲ; ನಮಗೋ ಅವು ಕೇವಲ ತೊದಲು ನುಡಿಗಳು ಮಾತ್ರವಾಗಿರುತ್ತವೆ.

ಶೇವಂತಿಯ ಹೂಗಿಡದ ಬೇರೆಂದರೆ ಅವನಿಗೆ ದೇವನೆಡೆಗೆ ಧಾವಿಸು ತ್ತಿದ್ದ ಆಕಾಂಕ್ಷೆಯಾಗಿ ತೋರುತ್ತದೆ; ನಮಗೊ, ಅದು ಕೇವಲ ಒಂದು ಬೇರಾಗಿ ತೋರುತ್ತದೆ.

## ೩೭. ನಾಝರೆಥದ ಮುದುಕ 'ಉರಿಯಾ'

ನಮಗೆಲ್ಲ ಅವನು ಅಪರಿಚಿತನಾಗಿದ್ದ; ಅವನ ಜೀವನವೇ ಕಾಡಿರೆ ಗಳಿಂದ ಮುಚ್ಚಲ್ಪಟ್ಟಿತ್ತು.

ಅವನು ದೇವರ ದಾರಿಯಲ್ಲಿ ನಡೆಯಲಿಲ್ಲ. ಆದರೆ ಮೂರ್ಖರ ಹಾಗೂ ಅಪ್ರಸಿದ್ಧರ ರೀತಿ–ನೀತಿಗಳನ್ನು ಅನುಸರಿಸಿದ.

ಅವನ ಬಾಲ್ಯವು ನಮ್ಮ ನಿಸರ್ಗದ ಮಧುರಕ್ಷೀರವನ್ನು ಪ್ರತಿಭಟಿ ಸಿತು. ಹಾಗೂ ತ್ಯಜಿಸಿತು.

ಇರುಳಿನಲ್ಲಿ ಉರಿಯುತ್ತಿದ್ದ ಒಣಹುಲ್ಲಿನಂತೆ ಅವನ ಯೌವನವು ಜ್ವಾಲಾವೇಷ್ಟಿತವಾಗಿತ್ತು.

ಅವನು ದೊಡ್ಡವನಾದೊಡನೆ ನಮ್ಮೆಲ್ಲರ ಮೇಲೂ ಕತ್ತಿ ಎತ್ತಿದ.

ಇಂಥ ಜನರು ಮಾನವೀ ದಯೆಯ ಓಹಟಿ ಕಾಲದಲ್ಲೇ ಗರ್ಭಧರಿಸಿ, ಅಪವಿತ್ರ ಬಿರುಗಾಳಿಯಲ್ಲಿ ಜನ್ಮದಾಳುತ್ತಾರೆ. ಹಾಗೂ ಆ ಬಿರುಗಾಳಿ ಯಲ್ಲಿಯೇ ಒಂದು ದಿನ ಬದುಕಿ ಕೊನೆವರೆಗೂ ಹಾಳಾಗಿ ಹೋಗುತ್ತಾರೆ.

ನಮ್ಮ ವಿದ್ವಾಂಸ ಹಿರಿಯರೊಡನೆ ವಾದಿಸುತ್ತಿದ್ದ ಹಾಗೂ ಅವರ ಸ್ಥಾನಮಾನದ ಗೇಲಿ ಮಾಡುತ್ತಿದ್ದ ಈ ಅತ್ಯಾಹೆಯ ಹುಡುಗನ ನೆನಪಿಲ್ಲವೆ ನಿಮಗೆ ?

ಕರಗಸ, ಉಳಿಗಳೊಡನೆ ಬದುಕುತ್ತಿದ್ದ ಈ ಯುವಕನ ನೆನಪಿಲ್ಲವೆ ನಿಮಗೆ ? ಹಬ್ಬ ಹರಿದಿನಗಳಲ್ಲಿಯೂ ಇವನು ನಮ್ಮ ಹುಡುಗ ಹುಡಿಗೆಯ ರೊಡನೆ ಕೂಡಿಕೊಳ್ಳುತ್ತಿದ್ದಿಲ್ಲ; ಏಕಾಕಿಯಾಗಿಯೇ ಇರುತ್ತಿದ್ದ.

ತಾನೇ ಇವರೆಲ್ಲರಿಗಿಂತ ಮೇಲಿನವನೆಂಬಂತೆ. ನಮಸ್ಕಾರ ಮಾಡು ತ್ತಿದ್ದವರಿಗೆ ಅವನು ಪ್ರತಿ ನಮಸ್ಕಾರ ಮಾಡುತ್ತಿದ್ದಿಲ್ಲ.

ಒಮ್ಮೆ ನಾನೂ ಅವನನ್ನು ಹೊಲದಲ್ಲಿ ಕಂಡು ನಮಸ್ಕರಿಸಿದೆ. ಆದರೆ ಅವನು ನಕ್ಕುಬಿಟ್ಟ ಮಾತ್ರ. ಆ ನಗೆಯಲ್ಲಿ ಔದ್ಧತ್ಯವೂ ಅಪಮಾನ ಬುದ್ಧಿಯೂ ಇದ್ದುದು ನನಗೆ ಕಂಡಬಂತು.

ಈ ಘಟನೆಯಾದ ಕೆಲವೇ ದಿನದಲ್ಲಿ, ನನ್ನ ಮಗಳು ತನ್ನ ಸಖಿಯ ರೊಡನೆ ಮಧುವನಕ್ಕೆ ದ್ರಾಕ್ಷೆಗಳನ್ನಾಯಲು ಹೋದಾಗ ಅವನನ್ನು ಮಾತ ನಾಡಿಸಿದರೂ ಅವನು ಅವಳಿಗೆ ಉತ್ತರ ಕೊಡಲೇ ಇಲ್ಲ.

ನನ್ನ ಮಗಳೇ ಆ ಗುಂಪಿನಲ್ಲಿಲ್ಲವೇನೋ ಎಂಬಂತೆ, ದ್ರಾಕ್ಷೆಗಳನ್ನಾ ಯುವ ಸಕಲರನ್ನೂ ಕುರಿತು ಮಾತ್ರ ಅವನು ಮಾತನಾಡಿದ.

ಅವನು ತನ್ನವರನ್ನು ತೊರೆದು ಉಡಾಳನಾಗಿ ಬಿಟ್ಟಾಗ ಅವನ್ನು ಕೇವಲ ಬೊಗಳುವವನಾಗಿ ಹೋದ. ಅವನ ದನಿ ನಮ್ಮ ಮೈ ಪರಚುವ ಉಗುರಿನಂತಿತ್ತು; ಅವನ ದನಿಯ ನಿನದವಿನ್ನೂ ನಮ್ಮ ನೆನವನ್ನು ನೋಯಿಸುತ್ತದೆ.

ನಮ್ಮ ಬಗ್ಗೆಯೂ ನಮ್ಮ ಅಜ್ಜಮುತ್ತಂದಿರ ಬಗ್ಗೆಯೂ ಅವನು ಕೆಡು ನುಡಿಗಳನ್ನೇ ಆಡುತ್ತಿದ್ದ. ಅವನ ನಾಲಗೆ, ನಮ್ಮೆದೆಗಳಲ್ಲಿಯ ವಿಷಪೂರಿತ ಶಲ್ಯವಾಗಿತ್ತು.

ಜೀಸಸ್ ಹೀಗಿದ್ದ.

ಅವನು ನನ್ನ ಮಗನೇ ಆಗಿದ್ದರೆ, ನಾನವನನ್ನು ರೋಮನ್ ಸೈನ್ಯಕ್ಕೆ ಸೇರಿಸಿ ಅರೇಬಿಯಾಕ್ಕಟ್ಟಿಬಿಡುತ್ತಿದ್ದೆ; ಹಾಗೂ ಸೇನಾಪತಿಗೆ ಹೇಳಿಕೊಂಡು

ಅವನು ಮುಂಚೂಣಿಯಲ್ಲಿ ನಿಲ್ಲುವಂತೆ ಮಾಡಿ ವೈರಿಗಳ ಬಾಣಕ್ಕೆ ಅವನನ್ನು ಆಹುತಿಯಾಗಿ ಕೊಟ್ಟು ಅವನ ಔದ್ಧತ್ಯದಿಂದ ನಾನು ಮುಕ್ತನಾಗುತ್ತಿದ್ದೆ.

ಆದರೆ ನನಗೆ ಗಂಡುಮಗುವೇ ಇಲ್ಲ. ಆ ಭಾಗ್ಯವಿಲ್ಲದುದಕ್ಕೇ ನಾನು ಕೃತಜ್ಞ. ಏಕೆಂದರೆ ನನ್ನ ಮಗನೇ, ತನ್ನ ಜನಾಂಗದ ವಿರೋಧಿಯಾಗಿ, ನನ್ನ ನರೆಗೂದಲು ನಾಚಿಕೆಯಿಂದ ಹುಡಿಗೂಡಿ ಹೋಗುವಂತೆ, ಹಾಗೂ ನನ್ನ ಬಿಳಿ ಗಡ್ಡಗಳು ಬಾಗುವಂತೆ ಮಾಡಿದ್ದರೆ ಏನಾಗುತ್ತಿತ್ತು ?

## ೩೮. ಸ್ಯಾನ್‌ಹೆಡ್ರಿನ್‌ದಲ್ಲಿದ್ದ ದೊಡ್ಡವರಲ್ಲಿ ತೀರ ಚಿಕ್ಕವನಾದ ಕವಿ ನಿಕೊಡಿಮಸ್

ಜೀಸಸ್‌ನು ತನ್ನದೇ ಆದ ದಾರಿಯಲ್ಲಿ ನಡೆದು, ತನ್ನನ್ನೇ ತಾನು ವಿರೋಧಿಸಿಕೊಂಡನೆಂದೂ ಅವನಿಗೆ ತನ್ನ ಮನಸ್ಸೇ ತನಗೆ ಗೊತ್ತಿದ್ದಿಲ್ಲವೆಂದೂ, ಹಾಗೂ ಆ ದಿಙ್ಮೂಢತೆಯಲ್ಲಿಯೇ ಹೌಹಾರಿ ಹೋಗಿದ್ದನೆಂದೂ ಎನ್ನುವ ಅನೇಕ ಮೂರ್ಖರೂ ಇದ್ದಾರೆ

ತಮ್ಮ ಘೂತ್ಕಾರವನ್ನು ಬಿಟ್ಟರೆ ಗೀತವೇ ಇಲ್ಲವೆನ್ನುವ ಗೂಗೆಗಳಂತೆ ಈ ಅನೇಕರು ಇದ್ದಾರೆ.

ತಮಗಿಂತಲೂ ಹೆಚ್ಚಿನ ಮಾತುಮೋಡಿಯುವರಿಗೆ ಮಾನಕೊಡುವ ಈ ಮಾತಿನ ಮೋಡಿಕಾರರನ್ನು ಹಾಗೂ ತಮ್ಮ ತಲೆಯನ್ನೇ ತಟ್ಟೆಯಲ್ಲಿಟ್ಟುಕೊಂಡು ಸಂತೆಗೆ ಹೋಗಿ ಮೊದಲ ಗಿರಾಕಿಗೇ ಮಾರಿ ಬಿಡುವವರನ್ನು ನಾನೂ ನೀವೂ ಬಲ್ಲೆವು.

ಬಾನ ಮಾನವನನ್ನೇ ಹಳಿಯುತ್ತಿರುವ ಹುಲುಮನುಜರದೂ ನಮಗೆ ಗೊತ್ತಿದೆ. ಓಕ, ಸೆಡಾರ ವೃಕ್ಷಗಳನ್ನು ಕುರಿತು ಹುಲ್ಲೇನು ಹೇಳೀತೆಂಬುದೂ ನಮಗ ಗೊತ್ತಿದೆ.

ಇವರು ಎತ್ತರಕ್ಕೇರಲಾರದುದನ್ನು ಕಂಡು ನನಗೆ ಕನಿಕರವೆನಿಸುತ್ತದೆ.

ಕಾಲವನ್ನೇ ಎದುರಿಸುವ, ಆಲವನ್ನು ದ್ವೇಷಿಸುವ ಈ ನೆಗ್ಗಲಮುಳ್ಳುಗಳನ್ನು ಕಂಡು ನನಗೆ ಕನಿಕರವೆನಿಸುತ್ತದೆ.

ಆದರೆ, ಸಕಲ ಸುರದೂತರ ವಿಷಾದದಿಂದ ಸುತ್ತುಗಟ್ಟಲ್ಪಟ್ಟ ಕನಿಕರವೂ ಅವರಿಗೆ ಬೆಳಕನ್ನೀಯಲಾರದು.

ಪುಕ್ಕಹಕ್ಕಿಯ ಜೊಂಡುಗರಿಗಳು ಕಾಳಿನ ರಾಸಿಯಲ್ಲಿ ಹರವಿ ಬಿದ್ದಿದ್ದರೂ, ಆ ಹಕ್ಕಿ, ಆ ಕಾಳಿಗೆ ಹಾಗೂ ಹಾಡುವ ಗಾಳಿಗೆ ಸ್ವತಃ ಸತ್ತುಹೋದಂತೆಯೇ ಎಂಬುದು ನನಗೆ ಗೊತ್ತು.

ಪಕ್ಕರಹಿತ ಜೇಡವು ಹಾರಬಲ್ಲ ಸಕಲಕ್ಕೂ ಬಲೆ ಹೆಣೆಯುವದೆಂಬದೂ ನನಗೆ ಗೊತ್ತು.

ಕುತಂತ್ರಿಗಳೂ, ಕೋಡು ಮುಂದೆ ಮಾಡುವ ಇರುಕಳರೂ ಡೊಳ್ಳು ಬಾರಿಸುವವರೂ ಮೊದಲಾದವರು ತಮ್ಮ ಗದ್ದಲ ಸಪ್ಪಳಗಳ ಸಮೃದ್ಧಿಯಲ್ಲಿಯೇ, ಬಾನಾಡಿಯ ಹಾಗೂ ಅರಣ್ಯದಲ್ಲಿಯ ಮೂಡುಗಾಳಿಯ ದನಿಯನ್ನು ಆಲಿಸಲಾರರೆಂಬುದೂ ನನಗೆ ಗೊತ್ತು.

ಪ್ರವಾಹದ ವಿರುದ್ಧ ಈಸುತ್ತ ಉಗಮುವನ್ನು ಕಾಣಲಾರದವರನ್ನೂ, ಪ್ರವಾಹದಗುಂಟ ಸಾಗಿ ಸಾಗರವನ್ನು ಕಾಣಲು ಹೆದರುವವರನ್ನು ನಾನು ಚೆನ್ನಾಗಿ ಬಲ್ಲೆ.

ಗುಡಿ ಕಟ್ಟುವವನಿಗೆ ತನ್ನ ಕಾರ್ಯಕುಶಲವಲ್ಲದ ಕೈ ಒಪ್ಪಿಸಿಕೊಟ್ಟು, ಏನೂ ಬರುವದಿಲ್ಲೆಂದು ಆ ಕೈ ತಿರಸ್ಕರಿಸಲ್ಪಟ್ಟ ಮೇಲೆ, ತನ್ನ ಹೃದಯದ ಕತ್ತಲಲ್ಲೇ ತಾನು " ಈಗ ಕಟ್ಟಿದ್ದನ್ನೆಲ್ಲ ನಾನು ಕೆಡವಿಬಿಡುವೆ. " ಎಂದೆನ್ನುವವರನ್ನೂ ನಾನು ಬಲ್ಲೆ.

ಇಂಥವರೆಲ್ಲರನ್ನೂ ನಾನು ಬಲ್ಲೆ. ಜೀಸಸ್‌ನು, ಒಮ್ಮೆ "ನಾನು ನಿಮಗಾಗಿ ಶಾಂತಿಯನ್ನು ತರುವೆ" ಇನ್ನೊಮ್ಮೆ "ನಾನು ಖಡ್ಗ ತರುವೆ" ಎಂದು ಹೇಳಿದನೆಂದು ಅವನನ್ನು ಆಕ್ಷೇಪಿಸುವ ಜನರೇ ಇವರು.

ಆದರೆ ಅವನು ನಿಜವಾಗಿಯೂ " ಶುದ್ಧ ಭಾವದವರಿಗಾಗಿ ಶಾಂತಿ ತರುವೆ. ಹಾಗೂ ಈ ಶಾಂತಿಧಾರಕರ ಹಾಗೂ ಖಡ್ಗಧಾರಕರ ಮಧ್ಯೆ ಖಡ್ಗ ವಿಡುವೆ " ಎಂದು ಹೇಳಿದನೆಂಬುದನ್ನು ಅವರು ಅರಿಯಲಾರರು.

" ನನ್ನ ರಾಜ್ಯವು ಈ ಭೂಮಿಯದಲ್ಲ" ಎಂದೂ " ಸೀಝರನದನ್ನು ಸೀಝರನಿಗೆ ಒಪ್ಪಿಸಿಬಿಡಿರಿ " ಎಂದೂ ಅವನು ಹೇಳಿದುದನ್ನು ಕೇಳಿ ಅವರು ಅಚ್ಚರಿಬಡುವರು; ತಮ್ಮ ಆಕಾಂಕ್ಷೆಯ ರಾಜ್ಯದ್ವಾರವನ್ನು

ಪ್ರವೇಶಿಸಲು ತಾವು ಮುಕ್ತರಾಗಬೇಕಾದರೆ, ತಮ್ಮ ಅವಶ್ಯಕತೆಗಳ ದ್ವಾರ ಪಾಲಕರನ್ನು ಎದುರು ಬೀಳಿಸಿಕೊಳ್ಳಬಾರದೆಂಬುದನ್ನು ಅವರು ಅರಿಯರು. ಈ ಸುಂಕ ತೆತ್ತುವದು ಆ ಪಟ್ಟಣಪ್ರವೇಶಕ್ಕೆ ಆಗತ್ಯವಿದೆ.

"ಅವನು ಮೃದುಲತೆಯನ್ನೂ, ದಯೆಯನ್ನೂ, ಮಗುಗಳನ್ನು ಪ್ರೀತಿಸುವುದನ್ನೂ ಬೋಧಿಸಿದನು; ಆದರೂ ಜೆರೂಸಲೇಮದ ಬೀದಿಗಳಲ್ಲಿ ತನ್ನನ್ನು ಹುಡುಕಿಕೊಂಡು ಬಂದ ತನ್ನ ತಾಯಿಯನ್ನೂ ಬಂಧುಗಳನ್ನೂ ಅವನು ಲೆಕ್ಕಿಸಲಿಲ್ಲ." ಎಂದು ಹೇಳುವ ಜನರೇ ಇವರು.

ಅವನ ಈ ತಾಯಿ, ಈ ಬಂಧುಗಳು, ತಮ್ಮ ಮಮತಾಭಯದಲ್ಲಿ, ಜೀಸಸ್‌ನು ಹೊಸದಿನದ ಪ್ರಭಾತ ನೋಡುವದಕ್ಕಾಗಿ ನಮ್ಮ ಕಣ್ಣು ತೆರೆಸು ತ್ತಿರುವುದನ್ನು ಬಿಟ್ಟು ಪುನಃ ತನ್ನ ಬಡಿಗತನದ ಕೆಲಸಕ್ಕೇ ಬಂದು ಸೇರಿ ಕೊಂಡರೆ ಸುರಕ್ಷಿತ ಎಂದು ಬಯಸುತ್ತಿದ್ದರೆಂಬುದನ್ನು ಇವರು ಅರಿಯರು.

ನಮ್ಮ ಅನಿದ್ರಿತ ಜ್ಞಾಪಕದಲ್ಲಿ ಚಿರಜೀವಿಯಾಗಲೆಂದು ಗುಪ್ತದಾಚೆ ಗಿನ ಮೃತ್ಯುವನ್ನೇ ಆಹ್ವಾನಿಸಿ ಎದುರಿಸುತ್ತಿದ್ದ ಅವನು ಮೃತ್ಯುವಿನ ನೆಳಲ ಲ್ಲಿಯೇ ವಾಸಿಸಬೇಕೆಂದು ಅವನ ತಾಯಿಯೂ ಬಂಧುಗಳೂ ಬಯಸು ತ್ತಿದ್ದರು.

ಶೂನ್ಯದಾಳಕ್ಕೆ ದಾರಿ ತೋರುತ್ತಿರುವ ಈ ಕತ್ತೆಗಳನ್ನೆಲ್ಲ ನಾನು ಬಲ್ಲೆ. "ನಾನೇ ದಾರಿ; ನಾನೇ ಮುಕ್ತಿಯ ಬಾಗಿಲು." ಎಂದೂ ಹಾಗೂ "ನಾನೇ ಜೀವನ, ನಾನೇ ಪುನರುತ್ಥಾನ" ಎಂದೂ ಜನಜಂಗುಳಿಗೆ ಸಾರುತ್ತ ತನ್ನ ಮಹಿಮೆಯನ್ನೇ ಜಂಭಕೊಚ್ಚಿಕೊಳ್ಳುತ್ತಿರುವನೆಂದು ಇವರು ಜೀಸಸ್‌ನನ್ನು ಹಳಿಯುತ್ತಿರಲಿಲ್ಲವೇ ?

ಆದರೆ, ಮೇ ತಿಂಗಳು ತನ್ನ ಭರತಿಯಲ್ಲಿ ಬಯಸುತ್ತಿರುವುದಕ್ಕಿಂತ ಹೆಚ್ಚಿನದೇನನ್ನೂ ಜೀಸಸ್‌ನು ಬಯಸುತ್ತಿದ್ದಿಲ್ಲ.

ಪ್ರಜ್ವಲಿತ ಸತ್ಯವನ್ನು ಕುರಿತು ಅದು ಪ್ರಜ್ವಲಿಸುತ್ತದೆಂದೂ ಅವನು ಹೇಳಬಾರದೆಂದಿತ್ತೇ ?

ತಾನೇ ದಾರಿ, ತಾನೇ ಬದುಕು, ತಾನೇ ಹೃದಯದ ಪುನರುತ್ಥಾನ ಎಂದು ಅವನು ನುಡಿದುದು ನಿಜವೇ. ಆದರ ಸತ್ಯಪ್ರತೀತಿಗೆ ನಾನೇ ಸ್ವತಃ ದೃಷ್ಟಾಂತವಾಗಿದ್ದೇನೆ.

ಕಾಯಿದೆಗಳನ್ನೂ ಆಜ್ಞೆಗಳನ್ನೂ ಉಳಿದು ಇನ್ನೇನನ್ನೂ ನಂಬದಿದ್ದ, ಹಾಗೂ ನಿರೀಕ್ಷಣೆಗಳಿಗೇ ಸದಾ ತಲೆವಾಗುತ್ತಿದ್ದ, ನನ್ನ-ನಿಕೋಡಿಮಸ್‌ನ-ನೆನಪಿದೆಯೇ ನಿಮಗೆ ?

ಮೂಡಣಾದ್ರಿಯ ಮೇಲೆ ತನ್ನ ಮೊದಲ ಕಿರಣದ ನಗೆ ಬೀರಿ ಬರುತ್ತಿರುವ ರವಿಯುದಯದಿಂದ, ಪಡುವಣಾದ್ರಿಯ ಆಚೆಗೆ ಅಸ್ತಮಿಸುವ ಸೂರ್ಯಾಸ್ತದವರೆಗೂ ನಗುನಗುತ್ತಲೇ ಬದುಕಿನೊಡನೆ ಸಾಗಿರುವ ಈಗಿನ ನನ್ನನ್ನೂ ನೋಡಿರಿ.

'ಮುಕ್ತಿ' ಎಂಬ ಪದದೆದುರು ನೀವೇಕೆ ತಡೆಯುತ್ತೀರಿ? ನಾನೇ ಸ್ವತಃ ಅವನ ಮುಖಾಂತರವಾಗಿ ನನ್ನ ಮುಕ್ತಿಯನ್ನು ಪಡೆದಿದ್ದೇನೆ.

ಜೀಸಸ್‌ನು ನನ್ನನ್ನು ನಿದ್ದೆಯಿಂದೆಚ್ಚರಿಸಿ, ನನ್ನ ದೂರದ ಕನಸುಗಳನ್ನೇ ನನ್ನ ಸಹಚರಿಗಳನ್ನೂ ಸಹಪಥಿಕರನ್ನೂ ಮಾಡಿ ಬಿಟ್ಟಿದ್ದಾನೆ; ಅಂತೇ ನಾಳೆಗೇನು ಬರಬಹುದೋ ಎಂಬ ಚಿಂತೆಯೇ ನನಗಿಲ್ಲ. ಆ ಮಹಾಮಾನವನನ್ನು ನಂಬಿದೆನೆಂದು ನಾನು ಹುಲುಮನುಜನಾಗಬಹುದೇ ?

ಗ್ಯಾಲಿಲಿಯ ಆ ಕವಿ ನನ್ನೆದುರು ನುಡಿದಾಗಲೇ, ನನ್ನ ಅಸ್ಥಿ-ಮಾಂಸಮಯ ಬಂಧನಗಳು ಕಳಚಿದವು; ನಾನು ಆತ್ಮವೇಷ್ಟಿತನಾಗಿಬಿಟ್ಟೆ; ಎತ್ತರಕ್ಕೆತ್ತಲ್ಪಟ್ಟೆ, ಆ ಆಕಾಶಮಧ್ಯದಲ್ಲಿ, ನನ್ನ ಪಕ್ಕಗಳು ನನ್ನ ಆಕಾಂಕ್ಷೆಯ ಹಾಡನ್ನು ಸಂಚಯಿಸಿದವು.

ಆ ಎತ್ತರ ಗಾಳಿಯಿಂದ ಇಳಿಸಲ್ಪಟ್ಟು, ಸಾನ್ ಹ್ಯಾಡ್ರಿನದಲ್ಲಿ ನನ್ನ ಪಕ್ಕಗಳೇ ಕಿತ್ತೆಸೆಯಲ್ಪಟ್ಟಾಗ ಕೂಡ, ನನ್ನ ಅಸ್ಥಿಗಳು, ನನ್ನ ಗರಿರಹಿತ ಪಕ್ಕಗಳು ಆ ಹಾಡನ್ನು ಸಂರಕ್ಷಿಸಿ ಇರಿಸಿಕೊಂಡವು. ಈ ನಿಮ್ಮನಾಡಿನ ಸಕಲ ಬಡತನಗಳೂ ಕೂಡ ನನ್ನಾ ಸಂಪತ್ತನ್ನು ಅಪಹರಿಸಲಾರವು. ನಾನು ಸಾಕಷ್ಟು ಹೇಳಿದೆ. ಕಿವುಡರು, ಜೀವನಗೀತವನ್ನು ತಮ್ಮ ಮೃತ ಕರ್ಣಗಳಲ್ಲಿ ಬೇಕಾದರೆ ಹುಗಿದುಬಿಡಲಿ. ಅವನ ಕೈಯಲ್ಲಿ ಮೊಳೆ ಹೊಡೆದು, ಅದರಿಂದ ರಕ್ತಸುರಿಯುತ್ತಿದ್ದಾಗ್ಯೂ ಹಿಡಿದುಕೊಂಡು ಮಿಡಿದ ಅವನಾ ವೀಣೆಯ ನಿನದದಲ್ಲಿಯೇ ನಾನು ನನ್ನ ತೃಪ್ತಿಯನ್ನು ಕಂಡು ಕೊಂಡಿದ್ದೇನೆ.

# ೩೯. ಆ್ಯರಿಮ್ಯಾಥೀಯ ಜೋಸೆಫ್: ದಶವರ್ಷಾನಂತರ

ಈ ನಾಝರೀನನ ಹೃಯದಲ್ಲಿ ಎರಡು ಪ್ರವಾಹಗಳು ಹರಿಯುತ್ತಿದ್ದವು: ಅವನು 'ತಂದೆ'ಯೆನ್ನುತ್ತಿದ್ದ, ದೇವರೊಡನಿದ್ದ, ಸಖ್ಯಪ್ರವಾಹ ಒಂದು; ಊರ್ಧ್ವಲೋಕ ರಾಜ್ಯವೆಂದು ಅವನು ಹೇಳುತ್ತಿದ್ದ ಸಮುಲ್ಲಾಸ ಪ್ರವಾಹ ಒಂದು.

ಏಕಾಂತದಲ್ಲಿ ನಾನು ಅವನನ್ನು ಕುರಿತು ಚಿಂತಿಸಿದೆ. ಅವನ ಹೃದಯದಲ್ಲಿಯ ಈ ಎರಡೂ ಪ್ರವಾಹಗಳನ್ನು ಅನುಸರಿಸಿದೆ. ಒಂದರ ದಂಡೆಯ ಮೇಲೆ ನನ್ನಾತ್ಮವನ್ನೇ ನಾನು ಕಂಡೆ; ಹಲಕೆಲವು ಸಲ ನನ್ನ ಆತ್ಮವು ಭಿಕ್ಷುಕನಂತೆಯೂ ಬಿಡಾಡಿಯಂತೆಯೂ, ಮತ್ತೆ ಕೆಲವು ಸಲ ಉಪವನದಲ್ಲಿ ವಿಹರಿಸುತ್ತಿದ್ದ ರಾಜಕನ್ಯೆಯಂತೆಯೂ ಕಂಡುಬರುತ್ತಿತ್ತು.

ಬಳಿಕ, ಅವನ ಹೃದಯದಲ್ಲಿಯ ಇನ್ನೊಂದು ಪ್ರವಾಹದಗುಂಟ ಸಾಗಿದೆ. ಹೀಗೆ ಸಾಗಿದಾಗ ನಾನಲ್ಲಿ, ಹೊಡೆದು ಬಡೆದು ತನ್ನ ಸಂಪತ್ತನ್ನೆಲ್ಲ ಕಸಿದುಕೊಂಡು ಹೋಗಿದ್ದರೂ ನಗುನಗುತ್ತಲೇ ಇದ್ದ ಒಬ್ಬನನ್ನು ಕಂಡೆ. ಹಾಗೇ ಮುಂದೆ ಸಾಗಿದಾಗ ಅವನನ್ನು ಹೊಡೆದು ಬಡಿದು ಅವನ ಸಂಪತ್ತನ್ನು ಕಸಿದುಕೊಂಡ ದರೋಡೆಖೋರನನ್ನು ಕಂಡೆ; ಅವನ ಮುಖ ಕಂಬನಿದುಂಬಿತ್ತು.

ಆ ಮೇಲೆ, ಈ ಎರಡೂ ಪ್ರವಾಹಗಳ ನಿನದವು ನನ್ನ ಹೃದಯದಲ್ಲೇ ಕೇಳಿಸತೊಡಗಿತು. ನಾನು ಆನಂದಭರಿತನಾದೆ.

ಪಾಂಟಿಯಸ್ ಪಿಲಾಟಸ್ ಹಾಗೂ ಇನ್ನಿತರ ಹಿರಿಯರು ಅವನನ್ನು ಕೈಸೆರೆ ಗೊಳಿಸುವ ಮುನ್ನಾದಿನವೇ ಜೀಸಸ್‌ನನ್ನು ನಾನು ಭೆಟ್ಟಿಯಾದೆ. ನಾನವನಿಗೆ ಅನೇಕ ಪ್ರಶ್ನೆಗಳನ್ನು ಕೇಳಿದೆ. ಅವನು ಉದಾರಧೀಯಿಂದ ನನ್ನ ಎಲ್ಲ ಪ್ರಶ್ನೆಗಳಿಗೂ ಉತ್ತರಿಸಿದ. ನಾನವನನ್ನು ಬಿಟ್ಟು ಹೊರ ಹೊರಟಾಗ, ನಮ್ಮೀ ಜಗದ ಪ್ರಭುವೂ, ಗುರುವೂ ಅವನೇ ಎಂದು ಖಚಿತವಾಗಿ ತಿಳಿಯಿತು.

ಆ ಮಹಾ 'ದೇವದಾರು' ವೃಕ್ಷವೀಗ ಬಿದ್ದು ಹೋಗಿದೆ. ಆದರೆ ಆದರ ಸೌಗಂಧ ಇನ್ನೂ ಬದುಕಿದೆ, ಅನಂತ ಕಾಲದವರೆಗೂ ಅದು ಜಗತ್ತಿನ ನಾಲ್ಕು ದಿಕ್ಕುಗಳಲ್ಲಿ ಶೋಧ ನಡೆಸಿರುತ್ತದೆ.

## ೪೦. ಬಿರೂಟಿದ ಜಾರ್ಜಸ್

ನಮ್ಮ ಆವಾರದಾಚೆಗಿನ ಪಾಯಿನ್ ತೋಟದಲ್ಲಿ ಅವನೂ ಅವನ ಗೆಳೆಯರೂ ಕೂಡಿದ್ದರು; ಅವನು ಅವರನ್ನು ಕುರಿತು ಮಾತನಾಡುತ್ತಿದ್ದ.

ನಾನು ಆವಾರದ ಬದಿ ನಿಂತು ಆಲಿಸುತ್ತಿದ್ದೆ. ಆವನಾರೆಂಬದು ನನಗೆ ಗೊತ್ತಿತ್ತು; ಏಕೆಂದರೆ ಅವನಿಲ್ಲಿ ಬರುವ ಮೊದಲೇ ಅವನ ಕೀರ್ತಿ ಇಲ್ಲೆಲ್ಲ ಹಬ್ಬಿಬಿಟ್ಟಿತ್ತು

ಅವನ ಮಾತು ಮುಗಿದ ಮೇಲೆ ನಾನು ಅವನ ಬಳಿಗೆ ಹೋದೆ. ನಾನೆಂದೆ: "ಪ್ರಭೂ, ಇವರೆಲ್ಲರೊಡನೆ ನಮ್ಮಲ್ಲಿ ಬನ್ನಿ. ನನಗೂ ನನ್ನ ಮನೆಗೂ ಶೋಭೆ ತನ್ನಿ."

ಅವನು ಮುಗುಳು ನಗೆ ನಕ್ಕು ನನ್ನೊಡನೆ ನುಡಿದ: "ಈ ದಿನ ಬೇಡ, ಮಿತ್ರಾ, ಈ ದಿನ ಬೇಡ."

ಅವನ ನುಡಿಗಳಲ್ಲಿ ಧನ್ಯತೆಯಿತ್ತು; ಅವನ ದನಿ, ಚಳಿಯಿರುಳಲ್ಲಿ ಹೊದೆಯುತ್ತಿದ್ದ ವಸ್ತ್ರದಂತೆ ಬೆಚ್ಚಗಿತ್ತು.

ಬಳಿಕ ಅವನು ತನ್ನ ಮಿತ್ರರನ್ನುದ್ದೇಶಿಸಿ ನುಡಿದ: "ನಮ್ಮನ್ನು ಪರಕೀಯರೆಂದೆಣಿಸಿದ ಈ ಮನುಷ್ಯನನ್ನು ನೋಡಿರಿ. ಈ ಮುನ್ನೆಂದೂ ಇವನು ನಮ್ಮನ್ನು ನೋಡಿರದಿದ್ದರೂ ಇವನು ನಮ್ಮನ್ನು ತಮ್ಮಲ್ಲಿಗೆ ಕರೆಯುತ್ತಿದ್ದಾನೆ."

"ನಿಜವಾಗಿಯೂ ನನ್ನ ರಾಜ್ಯದಲ್ಲಿ ಅಪರಿಚಿತರೆಂಬವರೇ ಇಲ್ಲ. ನಮ್ಮ ಜೀವನವು ಇವರೆಲ್ಲರ ಜೀವನವೇ ಆಗಿದ್ದು, ಇವರೆಲ್ಲರನ್ನರಿಯಲೆಂದೂ, ಆ ತಿಳಿವೆಳಕಿನಲ್ಲಿ ಇವರನ್ನೆಲ್ಲ ಪ್ರೀತಿಸಲೆಂದೂ ಅದು ನಮಗೆ ಕೊಡಲ್ಪಟ್ಟಿದೆ. ಇವರೆಲ್ಲರ ಪ್ರಕಟಿತ ಹಾಗೂ ಅಪ್ರಕಟಿತ ಕೃತಿಗಳೆಲ್ಲವೂ ನಮ್ಮ ಕೃತಿಗಳೇ.

''ನೀವು ಏಕಾತ್ಮರಾಗದೆ ಅನೇಕಾತ್ಮರಾಗಿರೆಂದು ನಾನು ವಿಧಿಸುತ್ತೇನೆ; ಮನೆಯಿದ್ದವರು, ಮನೆಯಿರದವರು, ನೇಗಿಲದವರು, ನೆಲದಲ್ಲಿ ಮಲಗುವ ಮೊದಲೇ ಕಾಳಾರಿಸುತ್ತಿದ್ದ ಗುಬ್ಬಿಗಳು, ಕೃತಜ್ಞತೆಯಿಂದ ಕೊಡುವ ದಾನಿ, ಹಾಗೂ, ತಿಳಿವಳಿಕೆ ಹೆಮ್ಮೆಗಳಿಂದ ಸ್ವೀಕರಿಸುವ ಪ್ರತಿಗ್ರಹಿ—ಹೀಗೆ ಅನೇಕಾತ್ಮರಾಗಿರಬೇಕು. ನೀವು ನೋಡುವದರಲ್ಲಿಯಷ್ಟೇ ಅಲ್ಲ, ಉಳಿದವರೆಲ್ಲರೂ ನೋಡುತ್ತಿರುವದರಲ್ಲಿಯೂ ದಿನದ ಚೆಲುವಿದೆ.

''ಇದಕ್ಕಾಗಿಯೇ, ನನ್ನನ್ನರಸುತ್ತಿದ್ದ ಅನೇಕರಿಂದ ನಿಮ್ಮನ್ನು ನಾನಾರಿಸಿಕೊಂಡಿದ್ದೇನೆ.''

ಬಳಿಕ ಅವನು ನನ್ನೆಡೆಗೆ ತಿರುಗಿ ಪುನಃ ನಕ್ಕು ನುಡಿದ: ''ನಿನಗಾಗಿಯೂ ನಾನಿದನ್ನೆಲ್ಲ ಆಡಿದ್ದೇನೆ. ನೀನೂ ಇವನ್ನೆಲ್ಲ ನೆನಪಿಡಬೇಕು.''

ನಾನು ಅವನನ್ನು ಬಿನ್ನವಿಸಿ ಮತ್ತೆ ನುಡಿದೆ: ''ಪ್ರಭೂ, ನನ್ನ ಮನೆಗೆ ಬರುವದಿಲ್ಲವೆ?''

ಅವನು ಉತ್ತರಿಸಿದ: ''ನಿನ್ನ ಹೃದಯ ನನಗೆ ಗೊತ್ತು. ನಿನ್ನ ವಿಶಾಲತರ ಮನೆಯನ್ನು ನಾನು ಕಂಡಿದ್ದೇನೆ.'' ತನ್ನ ಶಿಷ್ಯರೊಡನೆ ಮುಂದೆ ಸಾಗುತ್ತ ಅವನು ನುಡಿದ: ''ಒಳ್ಳೆಯದು. ಈ ಭೂಮಿಯ ಸಕಲ ಪಥಿಕರಿಗೂ ಆಶ್ರಯಗೊಡುವಷ್ಟು ನಿನ್ನ ಮನೆ ವಿಶಾಲತಮವಾಗಲಿ.

## ೪೧. ಮೇರಿ ಮ್ಯಾಗ್ಡಾಲೀನ

ಅವನ ಬಾಯಿ ದಾಡಿಮ ಫಲದ ಹೃದಯದಂತಿತ್ತು; ಅವನ ಕಂಗಳ ದೃಷ್ಟಿ ಆಳವಾಗಿತ್ತು ತನ್ನ ಸಾಮರ್ಥ್ಯದರಿವಿದ್ದ ಮನುಜನಂತೆ ಅವನು ಸೌಮ್ಯನಾಗಿದ್ದ. ಪೃಥ್ವಿಯ ಪ್ರಭುಗಳೆಲ್ಲರೂ ಅವನ ಸಾನ್ನಿಧ್ಯದಲ್ಲಿ ಭಯಗೊಂಡು ನಿಲ್ಲುತ್ತಿದ್ದುದನ್ನು ನಾನು ನನ್ನ ಕನಸುಗಳಲ್ಲಿ ಕಂಡಿದ್ದೇನೆ.

ಅವನ ಮುಖದ ಬಗ್ಗೆ ನಾನು ಹೇಳಬಹುದು; ಆದರೆ ಹೇಗೆ ಹೇಳಲಿ?

ಅದು ಕತ್ತಲಿಲ್ಲದ ಇರುಳಿನಂತಿತ್ತು; ಹಾಗೂ ಗದ್ದಲವಿರದ ಹಗಲಿನಂತಿತ್ತು. ಅದು ಖಿನ್ನಮುಖವಾಗಿತ್ತು; ಆನಂದತುಂದಿಲ ಮುಖವೂ ಆಗಿತ್ತು.

ಒಮ್ಮೆ ಅವನು ಆಕಾಶದೆಡೆಗೆ ಕೈಯೆತ್ತಿದಾಗ, ಅವನ ಬಿಡಿ ಬಿಡಿ ಬೆರಳುಗಳು ತೆಂಗಿನ ಗರಿಗಳಂತೆ ತೋರುತ್ತಿದ್ದುದು ಇನ್ನೂ ನನಗೆ ಚೆನ್ನಾಗಿ ನೆನಪಿದೆ.

ಸಂಜೆಯಲ್ಲಿ ಅವನು ಅಡಿಯಾಡುತ್ತಿದ್ದುದು ನನಗೆ ನೆನಪಿದೆ. ಅವನು ನಡೆಯುತ್ತಿದ್ದಿಲ್ಲ. ಹಾದಿಯ ಮೇಲಿನ ಹಾದಿಯೇ ಅವನಾಗಿದ್ದ; ಭೂಮಿಯನ್ನು ಮರುಜೀತರಿಸಲೆಂದು ಇಳಿದುಬರಲಿದ್ದ ಬುವಿ ಮೇಲಿನ ಮೋಡದಂತೆಯೂ ಅವನಿದ್ದ.

ಆದರೆ ನಾನವನೆದುರು ಬಂದಾಗ, ಅವನೆಡೆಗೆ ಮಾತನಾಡುತ್ತಿರುವಾಗ ಅವನು ಮಾನವನೇ ಆಗಿರುತ್ತಿದ್ದ; ನೋಡಲು ಅವನ ಮುಖವು ಸಾಮರ್ಥ್ಯಯುಕ್ತವಾಗಿತ್ತು. ಅವನು ನನಗೆಂದ: "ಏನು ಮಾಡಬೇಕೆಂದಿದ್ದೀ ಮಿರಿಯಮ್ ? "

ನಾನವನಿಗೆ ಮರುನುಡಿಯಲಿಲ್ಲ; ಆದರೆ ನನ್ನ ಪಕ್ಕಗಳೇ ನನ್ನ ಗುಟ್ಟನ್ನು ರಟ್ಟು ಮಾಡಿದವು. ನಾನು ಸಾಂತ್ವನಗೊಳಿಸಲ್ಪಟ್ಟೆ.

ಅವನ ಪ್ರಭೆಯನ್ನು ತಡೆಯಲಾರದಾಗಿದ್ದೆನೆಂದೇ ನಾನು ಹಿಂತಿರುಗಿ ಹೊರಹೊರಟುಬಿಟ್ಟೆನಲ್ಲದೆ ನಾಚಿಕೆಯಿಂದಲ್ಲ. ನಾನು ಕೇವಲ ಭೀರುವಾಗಿದ್ದೆ; ನನ್ನ ಹೃದಯವೀಣೆಯ ಮೇಲೆ ಅವನ ಬೆರಳಾಡುತ್ತಿರುವುದನ್ನು ಕಾಣುತ್ತ ನಾನು ಏಕಾಕಿಯಾಗುಳಿಯಬಯಸುತ್ತಿದ್ದೆ.

## ೪೨. ನಾಝರೆಥದ ಜೋಥ್ಯಾಮ್: ಒಬ್ಬ ರೋಮನ್ನನಿಗೆ-

ಮಿತ್ರಾ, ನೀನೂ ಉಳಿದ ರೋಮನ್‌ರಂತೆಯೇ, ಬಾಳಿನಲ್ಲಿ ಬದುಕುತ್ತಿರುವುದಕ್ಕಿಂತ ಭಾವನೆಯ ರಾಜ್ಯದಲ್ಲಿರಬೇಕೆನ್ನುತ್ತೀ; ನೀವು ಆತ್ಮದಿಂದ ಆಳಲ್ಪಡುವದಕ್ಕಿಂತ ನೀವೇ ನೆಲವನ್ನಾಳಬೇಕೆಂದಿದ್ದೀರಿ.

ನೀವು ರೋಮುದಲ್ಲೇ ಇದ್ದು ಜನಾಂಗಗಳ ಸದಿಚ್ಛೆ ಪಡೆದು ಸುಖಿಯಾಗಿರುವದಕ್ಕಿಂತ ಜನಾಂಗಗಳನ್ನು ಗೆದ್ದು, ಅವರ ಶಾಪ ಕಟ್ಟಿಕೊಳ್ಳುತ್ತೀರಿ. ಮುನ್ನಡೆವ ಸೈನ್ಯ, ಲಂಗರ ಹಾಕಿದ ಹಡಗ ಇವುಗಳ ಬಗ್ಗೆ ಮಾತ್ರ ಯೋಚನೆ ನಡೆಸಿರುತ್ತೀರಿ.

ಅಂದಬಳಿಕ ಏಕಾಕಿಯೂ, ಸರಳನೂ, ಸೈನ್ಯ, ಹಡಗುಪಡೆಯಿಲ್ಲದೆ ಇರುವವನೂ, ಹೃದಯದ ರಾಜ್ಯವನ್ನು, ಆತ್ಮಸ್ಥಾನಗಳ ಸಾಮ್ರಾಜ್ಯವನ್ನು ಪ್ರಸ್ಥಾಪಿಸಲು ಬಂದವನೂ ಆದ ನಾಝರೆಥದ ಜೀಸಸ್‌ನನ್ನು ನೀವು ಹೇಗೆ ತಿಳಿಯಬಲ್ಲಿರಿ ? ಯೋಧನಲ್ಲದ, ಆದರೆ ಮೇಲಿನಿಂದ ಮಹಾ ದಿವ್ಯಶಕ್ತಿ ಪಡೆದು ಬಂದ ಈ ಮನುಷ್ಯನನ್ನು ನೀವು ಹೇಗೆ ತಿಳಿಯಬಲ್ಲಿರಿ ?

ಅವನೇನೂ ದೇವರಲ್ಲ. ನಮಗೆಲ್ಲ ಅವನು ಮಾನವನಂತೆಯೆ ಇದ್ದ. ಆದರೆ ಅವನಲ್ಲಿದ್ದ ಭೂಗಂಧವು ಆಕಾಶದ ಅಗುರನ್ನು ಕಾಣಲೆದ್ದಿತ್ತು. ಆವನ ಮಾತುಗಳಲ್ಲಿ ನಮ್ಮ ತೊದಲು ಮಾತು ಅಜ್ಞಾತದ ಕಿವಿಮಾತನ್ನು ಅಪ್ಪಿಕೊಂಡಿತ್ತು. ಅವನ ದನಿಯಲ್ಲಿ ನೆಲೆಯಿರದ ಗೀತವನ್ನು ನಾವು ಕೇಳಿದ್ದೆವು.

ಜೀಸಸ್‌ನು ಮಾನವನೇ ಆಗಿದ್ದ; ದೇವರಾಗಿದ್ದಿಲ್ಲ— ಎಂಬುದೇ ನಮ್ಮ ಬೆರಗು ಆಶ್ಚರ್ಯಗಳಿಗೆ ಕಾರಣ.

ಆದರೆ ನಿಮಗೆ– ರೋಮನ್ನರಿಗೆ, ದೇವರನ್ನುಳಿದು ಅಚ್ಚರಿಯ ವಸುವಿಲ್ಲ; ಯಾವ ಮನುಷ್ಯನೂ ನಿಮ್ಮನ್ನು ಬೆರಗುಗೊಳಿಸಲಾರ. ಅಂತೇ ನೀವೀ ನಾಝರೀನನನ್ನು ತಿಳಿಯಲಾರಿರಿ.

ಅವನು ಮನಸಿನ ಯೌವನಕ್ಕೆ ಸಂಬಂಧಿಸಿದವ; ನೀವೋ ಅದರ ಮುದಿತನಕ್ಕೆ ಸಂಬಂಧಿಸಿದವರು. ಇಂದು ನೀವು ನಮ್ಮನ್ನಾಳುತ್ತೀರಿ; ಆದರೆ ಇನ್ನೊಂದು ದಿನಕ್ಕಾಗಿ ಕಾಯೋಣ.

ಯಾರಿಗೆ ಗೊತ್ತು? ಸೈನ್ಯ, ಹಡಗುಪಡೆ ಇಲ್ಲದ ಈ ಮನುಷ್ಯನೇ ನಾಳೆ ಆಳಬಹುದು.

ಆತ್ಮದ ಬೆಂಬತ್ತಿದ ನಾವು, ಆವನ ಹಿಂದೆ ಪ್ರವಾಸ ಮಾಡುತ್ತಿರುವಾಗ, ರಕ್ತವನ್ನೇ ಬೆವರಾಗಿಸುತ್ತೇವೆ. ಆದರೆ ರೋಮವು ಹಗಲಿನಲ್ಲೇ ಅಸ್ಥಿಪಂಜರವಾಗಿ ಬಿದ್ದೀತು. ನಾವು ಬಹಳ ಅನುಭೋಗಿಸಿದರೂ ಅದನ್ನೆಲ್ಲ ತಾಳಿಕೊಳ್ಳುವೆವು. ಮತ್ತೆ ಬದುಕುವೆವು. ಆದರೆ ರೋಮಕ್ಕೆ ಮಾತ್ರ ಪತನಹೊಂದಿ ಹುಡಿಗೂಡುವುದು ಅವಶ್ಯವಿದೆ.

ಆದರೂ, ರೋಮವು ಕೆಳಗಿಳಿದು ನಮ್ರವಾದಾಗ ಅವನ ನಾಮೋಚ್ಚಾರ ಮಾಡುವುದು; ಅವನು ಅದರ ದನಿ ಆಲಿಸುವನು. ಭೂಮಿಯು

ಮೇಲಿನ ಉಳಿದೆಲ್ಲ ಪಟ್ಟಣಗಳಂತೆ ಅದೂ ಒಂದು ಪಟ್ಟಣವಾಗಿ ನಿಲ್ಲುವಂತೆ ಅದರ ಎಲುವಿನಲ್ಲಿ ಅವನು ಜೀವನದುಸಿರನ್ನೂದುವನು.

ಆದರೆ ಇದನ್ನೆಲ್ಲ ಅವನು, ಸೇನೆಯಿಲ್ಲದಲೆ, ಯುದ್ಧನಾವೆಯಲ್ಲಿ ಹುಟ್ಟುಕಡೆಯುವ ಗುಲಾಮರಿಲ್ಲದಲೆ, ಗೈಯಬಲ್ಲನು. ಅವನು ಏಕಾಕಿಯಾಗಿಯೇ ಇರುವನು.

## ೪೩. ಜೆರಿಚೊದ ಎಫ್ರಾಯಿಮ್

ಅವನು ಮತ್ತೊಮ್ಮೆ ಜೆರಿಚೊಕ್ಕೆ ಬಂದಾಗ ನಾನವನನ್ನು ಕಂಡು ಅವನಿಗೆ ನುಡಿದೆ: “ ಪ್ರಭು, ನಾಳೆ ನನ್ನ ಮಗನ ಮದುವೆ. ನಾಳೆ ಮದುವೆಯೌತಣಕ್ಕೆ ತಾವು ದಯಮಾಡಿಸಿ ನಮ್ಮನ್ನು ಧನ್ಯಗೊಳಿಸಬೇಕು. ಗ್ಯಾಲಿಲಿಯ ಕಾನಾನ ಮದುವೆಗೆ ಹೋದಂತೆ ನಮ್ಮಲ್ಲಿಯೂ ಬರಬೇಕು. ”

ಅವನು ಉತ್ತರಿಸಿದ: “ ಹೌದು, ಒಮ್ಮೆ ನಾನು ಒಂದು ಮದುವೆ ಸಮಾರಂಭದಲ್ಲಿ ಅತಿಥಿಯಾಗಿದ್ದುದು ನಿಜ; ಆದರೆ ಹಾಗೆಯೇ ನಾನು ಇನ್ನೊಮ್ಮೆ ಅತಿಥಿಯಾಗಲಾರೆ. ಈಗ ನಾನೇ ಸ್ವತಃ ವರನಾಗಿದ್ದೇನೆ.”

ನಾನೆಂದೆ: “ ನಾನು ಪ್ರಾರ್ಥಿಸುವೆ, ಪ್ರಭೂ. ನನ್ನ ಮಗನ ಮದುವೆಯೌತಣಕ್ಕೆ ಬನ್ನಿ.”

ಅವನು ನನ್ನನ್ನು ಗಾಬರಿಗೊಳಿಸುವಂತೆ ನಕ್ಕು ನುಡಿದ: “ ನೀನೇಕೆ ನನ್ನನ್ನು ಪ್ರಾರ್ಥಿಸುತ್ತೀ ? ನಿನ್ನಲ್ಲಿ ಸಾಕಷ್ಟು ಮಧುವಿಲ್ಲವೇ ?”

ನಾನೆಂದೆ: “ ನನ್ನಲ್ಲಿಯ ಮಧುಪಾತ್ರೆಗಳೆಲ್ಲ ಯಥೇಚ್ಛವಾಗಿ ತುಂಬಿವೆ; ಆದರೂ ನಿಮ್ಮನ್ನು ಅಂಗಲಾಚಿ ಕೇಳಿಕೊಳ್ಳುತ್ತೇನೆ; ನನ್ನ ಮಗನ ಮದುವೆ ಸಮಾರಂಭಕ್ಕೆ ಬಂದುಬಿಡಿ.”

ಬಳಿಕ ಅವನೆಂದ: “ ಯಾರಿಗೆ ಗೊತ್ತು ? ನಾನು ಬರಬಹುದು; ನಿನ್ನ ಹೃದಯವು ನಿನ್ನ ದೇಗುಲದ ಗದ್ದಿಗೆಯಾಗಿದ್ದರೆ ಮಾತ್ರ ನಾನು ನಿಶ್ಚಯವಾಗಿಯೂ ಬರುವೆನು. ”

ಮರುದಿನ ನನ್ನ ಮಗನ ಮದುವೆ ನಡೆದು ಹೋಯಿತು: ಆದರೆ

ಜೀಸಸ್‌ನು ಮದುವೆ ಔತಣಕ್ಕೆ ಬರಲಿಲ್ಲ. ನಮ್ಮಲ್ಲಿ ಅನೇಕ ಅತಿಥಿಗಳು ಆಗಮಿಸಿದ್ದರೂ ನನಗೋ ಯಾರೂ ಬಂದಿಲ್ಲವೆಂಬಂತೆಯೇ ಎನಿಸಿತು.

ನಿಜವನ್ನೇ ಹೇಳಬೇಕೆಂದರೆ ಅತಿಥಿಗಳಿಗೆ ಸ್ವಾಗತಬಯಸಿದ ನಾನೇ ಸ್ವತಃ ಅಲ್ಲಿರಲಿಲ್ಲ.

ಬಹುಶಃ ನಾನು ಅವನನ್ನು ಆಮಂತ್ರಿಸುತ್ತಿರುವಾಗ ನನ್ನ ಹೃದಯವು ಗದ್ದಿಗೆಯಾಗದಿದ್ದಿರಬೇಕು. ಬಹುಶಃ ಆಗ ನಾನೊಂದು ಪವಾಡವನ್ನು ಅವನಿಂದ ಆಗಬಯಸಿರಬೇಕು.

## ೪೪. ಟಾಯರದ ವ್ಯಾಪಾರಿ ಬಾರ್ಕಾ

ನಾರ್ಝರೆಥದ ಜೀಸಸ್‌ನನ್ನು, ಈ ರೋಮನ್‌ರಾಗಲಿ, ಜ್ಯೂ ಜನರಾಗಲಿ ಸರಿಯಾಗಿ ತಿಳಿದುಕೊಂಡಿಲ್ಲವೆಂದು ನಾನು ನಂಬುತ್ತೇನೆ; ಅಥವಾ ಅವನ ಹೆಸರನ್ನು ಈಗ ಬೋಧಿಸುತ್ತಿದ್ದ ಅವನ ಶಿಷ್ಯರೂ ಅವನನ್ನು ತಿಳಿದಿದ್ದಿಲ್ಲ.

ರೋಮನ್ನರು ಅವನನ್ನು ಕೊಂದರು; ಅದೊಂದು ಮಹಾಪರಾಧ. ಗ್ಯಾಲಿಲಿಯನ್ನರು ಅವನನ್ನು ದೇವರೆಂದು ತಿಳಿದಿದ್ದಾರೆ; ಅದೂ ಒಂದು ತಪ್ಪೇ.

ಜೀಸಸ್‌ನು ಮಾನವೀ ಹೃದಯದವನೇ ಆಗಿದ್ದ.

ನನ್ನ ಹಡಗುಗಳಲ್ಲಿ ನಾನು ಸಪ್ತಸಮುದ್ರಗಳನ್ನೂ ದಾಟಿದ್ದೇನೆ. ರಾಜರೊಡನೆ, ರಾಜಪುತ್ರರೊಡನೆ, ದೂರದೂರದ ಬೇರೆ ಬೇರೆ ಪಟ್ಟಣಗಳ ಮಾರುಕಟ್ಟೆಯೊಳಗಿನ ಕಪಟಿ, ಕುತಂತ್ರಿಗಳೊಡನೆ ವ್ಯವಹಾರ ಮಾಡಿದ್ದೇನೆ. ಆದರೆ ಜೀಸಸ್‌ನಂತೆ ವ್ಯಾಪಾರಿಗಳನ್ನು ತಿಳಿದುಕೊಂಡ ಇನ್ನೊಬ್ಬನನ್ನು ನಾನು ಈವರೆಗೂ ಕಂಡಿಲ್ಲ.

ಅವನು ಈ ಉಪಕಥೆಯನ್ನು ಒಮ್ಮೆ ಹೇಳುತ್ತಿರುವುದನ್ನು ನಾನು ಕೇಳಿದೆ: "ಒಬ್ಬ ವ್ಯಾಪಾರಿ, ಪರದೇಶ ಪ್ರವಾಸ ಮಾಡಲೆಂದು ದೇಶ ಬಿಟ್ಟು ಹೊರಟ. ಅವನಿಗೆ ಇಬ್ಬರು ಸೇವಕರಿದ್ದರು. ಅವನು ಅವರಿಬ್ಬರಿಗೂ ಒಂದೊಂದು ಮುಷ್ಟಿ ಹೊನ್ನನ್ನು ಕೊಡುತ್ತ ಹೇಳಿದ; 'ನಾನು ಪರದೇಶಕ್ಕೆ ಹೊರಟಂತೆ ನೀವೂ ಹೋಗಬಹುದು; ಲಾಭ ಪಡೆಯು

ಬಹುದು; ಸರಿಯಾದ ಕೊಡು-ಕೊಳೆ ಮಾಡಿರಿ. ಕೊಡುವುದರಲ್ಲಿಯೂ ಕೊಳ್ಳುವುದರಲ್ಲಿಯೂ ನೀವು ಸಮೃದ್ಧಿಯನ್ನು ಹೊಂದುವಂತೆ ನೋಡಿಕೊಳ್ಳಿ.'

"ಬಳಿಕ ಒಂದು ವರ್ಷದ ಮೇಲೆ ಆ ವ್ಯಾಪಾರಿ ತನ್ನ ದೇಶಕ್ಕೆ ತಿರುಗಿ ಬಂದ.

''ತನ್ನ ಆ ಇಬ್ಬರೂ ಸೇವಕರಿಗೂ, ತಾನು ಕೊಟ್ಟ ಆ ಹೊನ್ನನ್ನು ಏನು ಮಾಡಿದಿರೆಂದು ಕೇಳಿದ.

ಮೊದಲನೆಯ ಸೇವಕ ನುಡಿದ: ''ನೋಡಿ, ಒಡೆಯಾ, ನಾನದರಿಂದ ಕೊಂಡೆ, ಮಾರಿದೆ, ಹಾಗೂ ಲಾಭಪಡೆದೆ.

''ವ್ಯಾಪಾರಿ ಅವನಿಗೆ ಹೇಳಿದ: ಆ ಲಾಭ ಮಾತ್ರ ನಿನ್ನದು. ನೀನು ಒಳ್ಳೆಯದನ್ನು ಮಾಡಿದೆ. ನನಗೂ ನಿನಗೂ ಕೂಡಿಯೇ ನೀನು ನಂಬಿಗೆ ಕಾಯ್ದು ಕೊಂಡೆ.

''ಬಳಿಕ ಇನ್ನೊಬ್ಬ ಸೇವಕ ಮುಂಬಂದು ನುಡಿದ: 'ಒಡೆಯಾ ನಿಮ್ಮ ಹೊನ್ನಿಗೆ ಹಾನಿಯೊದಗೀತೆಂದು ನಾನು ಹೆದರಿದೆ. ಅಂತೇ ಕೊಳ್ಳುವುದನ್ನೂ ಮಾರುವುದನ್ನೂ ಮಾಡಲಿಲ್ಲ. ನೋಡಿ ನಿಮ್ಮ ಹೊನ್ನೆಲ್ಲ ಇಲ್ಲಿಯೇ ಚೀಲದಲ್ಲಿದೆ.'

''ವ್ಯಾಪಾರಿ ಆ ಹೊನ್ನನ್ನು ತೆಗೆದುಕೊಂಡ; ಬಳಿಕ ಹೇಳಿದ: ನಿನ್ನ ಶ್ರದ್ಧೆಯೇ ಅಲ್ಪವಾಗಿದೆ. ವ್ಯವಹಾರವನ್ನು ಮಾಡದೆಯೇ ಇರುವದಕ್ಕಿಂತಲೂ ಮಾಡಿ ಹಾನಿಹೊಂದುವುದೇ ಎಷ್ಟೋ ಮೇಲು. ಏಕೆಂದರೆ ಗಾಳಿಯು ಬೀಜಗಳನ್ನು ಹಾರಿಸಿ ಒಯ್ದು ಫಲಕ್ಕಾಗಿ ಕಾಯುತ್ತಿರುವಂತೆ, ಸಕಲ ವ್ಯಾಪಾರಿಗಳೂ ಮಾಡಲಿಕ್ಕೇಬೇಕು. ನೀನು ಬೇರೆಯವರ ಸೇವೆ ಮಾಡಲಿಕ್ಕೆ ಹೆಚ್ಚು ತಕ್ಕವನಾಗಿರುತ್ತೀ.' ''

ಜೀಸಸ್‌ನು ಹೀಗೆ ಹೇಳಿದಾಗ, ಅವನು ವ್ಯಾಪಾರಿಯಲ್ಲದಿದ್ದರೂ, ವ್ಯಾಪಾರದ ಗುಟ್ಟನ್ನೇ ಬಯಲಿಗಿಟ್ಟ. ಇಷ್ಟೇ ಅಲ್ಲದೆ ಅವನು ಹೇಳುತ್ತಿದ್ದ ಉಪಕಥೆಗಳು, ನನ್ನ ಪ್ರವಾಸಗಳಿಗಿಂತಲೂ ದೂರದ ಹಾಗೂ ನನ್ನ ಮನೆ ನನ್ನ ವಸ್ತುಗಳಿಗಿಂತಲೂ ಸನಿಹದ ವಿಚಾರಧಾರೆಗಳನ್ನು ನನಗೆ ಪ್ರಚೋದಿಸುತ್ತಿದ್ದವು.

ಆದರೆ ಈ ತರುಣ ನಾರ್ಸೆರೀನ ದೇವರಾಗಿದ್ದಿಲ್ಲ. ಇಂಥ ಋಷಿಯನ್ನು ಅವನ ಅನುಯಾಯಿಗಳು ದೇವರನ್ನಾಗಿ ಮಾಡಲು ಹೊರಟಿರುವುದು ನಿಜವಾಗಿಯೂ ಶೋಚನೀಯ!

## ೪೫. ಸಿಡಾನದ ಉಚ್ಚ ಆಚಾರಿಣಿ: ಫ್ರ್ಯಮಿಯಾ

ನಿಮ್ಮ ವೀಣೆಗಳನೆತ್ತಿಕೊಳ್ಳಿ; ನಾನು ಹಾಡುವೆ
ಆ ಬೆಳ್ಳಿಯ, ಹೊನ್ನಿನ ತಂತಿಗಳ ಮಿಡಿಯಿರಿ;
ಏಕೆನೆ ನಾನಾ ನಿರ್ಭೀತ ಮಾನವನ ಕುರಿತು ಹಾಡುವೆ.
ಅವನೇ ಆ ಕೊಳ್ಳದ ರಕ್ಕಸ ಸರ್ಪವ ಕೊಂದು
ಬಳಿಕ ತಾನೇ ಕೊಂದ ಅದನ್ನು ಕಂಡು
ಕನಿಕರಪಡುತ್ತ ನಿಂದವನು ಅವನು.
ಎತ್ತಿಕೊಳ್ಳಿ ನಿಮ್ಮ ವೀಣೆಗಳ, ಹಾಡಿರೆನ್ನೊಡನೆ
ಎತ್ತರದ ಮೇಲಿನ ಉನ್ನತ ಓಕ್ ವೃಕ್ಷವನ್ನು ಕುರಿತು,
ಆಕಾಶ ಹೃದಯದ, ಸಾಗರ ಹಸ್ತದ ಮಾನವನ ಕುರಿತು,
ಮೃತ್ಯುವಿನ ಒಣಕಲು ತುಟಿಗಳನ್ನೂ ಮುತ್ತಿಟ್ಟು
ಜೀವನದ ಮೊಗದಲ್ಲಿ ಇಂದಿಗೂ ಸ್ಪಂದಿಸುತ್ತಿರುವವನ ಕುರಿತು.
ಕೊಳ್ಳಿ ನಿಮ್ಮ ವೀಣೆಗಳ, ನಾವೆಲ್ಲ ಕೂಡಿ ಹಾಡುವಾ
ಪಶುವಿಗೆ ಗುರಿಯಿಟ್ಟು, ತನ್ನ ಕಾಣದ ಬಾಣಗಳ ಬಿಟ್ಟು
ಹೊಡೆದು ಅದರ ಕೋಡು-ದಾಡೆ-ಗಳನ್ನು
ಭೂಮಿಗಿಳಿಸಿದ ಆ
ಗುಡ್ಡದ ಮೇಲಿನ ನಿರ್ಭೀತ ವ್ಯಾಧನನ್ನು ಕುರಿತು.
ನಿಮ್ಮ ವೀಣೆಗಳ ಕೊಂಡು ಹಾಡಿ ನನ್ನೊಡನೆ
ಪರ್ವತಾಗ್ರದ ಪಟ್ಟಣಗಳನ್ನೂ, ಉಸುಕಿನಲ್ಲಿ ಸುತ್ತಿಕೊಂಡು ಬಿದ್ದಂಥ
ಸರ್ಪದಂತಿರುವ ಬಯಲು ಪಟ್ಟಣಗಳನ್ನೂ
ಗೆದ್ದ ಧೀರ ಯುವಕನನ್ನು ಕುರಿತು.

ಅಲ್ಪರೊಡನಲ್ಲ, ನಮ್ಮ ಮಾಂಸಕ್ಕಾಗಿ, ಹಸಿದ ನೆತ್ತರಕ್ಕಾಗಿ,
ನೀರಡಿಸಿದ
ದೇವರೊಡನೆ ಕಾದಿದವನ ಕುರಿತು.

ಚೊಚ್ಚಿಲು ಬಂಗಾರದ ಗಿಡುಗನಂತೆ
ಗರುಡಗಳನ್ನು ಮಾತ್ರ ಬೆನ್ನಟ್ಟುವವನ;
ಏಕೆನೆ, ಅವನ ರೆಕ್ಕೆಗಳು ಹರವೂ ಗರುಪವೂ ಆಗಿದ್ದವಲ್ಲದೆ
ಕಡಿಮೆ ಗರಿಯುವರ ಗರಿಗೀಳದ ಮನದವೂ ಆಗಿದ್ದವು.

ಕೊಳ್ಳಿ ನಿಮ್ಮ ವೀಣೆಗಳ, ಹಾಡಿರೆನ್ನೊಡನೆ
ಸಾಗರದ ಮೇಣ್ ಬಂಡೆಗಳ ಮಧುರ ಹಾಡನ್ನು;
ದೇವರೆಲ್ಲರೂ ಸತ್ತಿಹರು,
ಬಿದ್ದಿರುವರವರಿನ್ನೂ ಸ್ತಬ್ಧರಾಗಿ
ಆ ಅಜ್ಞಾತ ಸಾಗರದ ಅಜ್ಞಾತ ದ್ವೀಪದಲ್ಲಿ.
ಅವರನ್ನು ಕೊಂದವನೆ ಕುಳಿತಿಹನಿಲ್ಲಿ ತನ್ನ ಸಿಂಹಾಸನದ ಮೇಲೆ.
ಅವನಿನ್ನೂ ಕೇವಲ ಯುವಕ.
ಋತುಮಾನವಿನ್ನೂ ಅವನಿಗೆ ತುಂಬುಗಡ್ಡಗಳನಿತ್ತಿಲ್ಲ.
ಅವನ ಹೊಲದಲ್ಲಿ ಬೇಸಿಗೆಯಿನ್ನೂ ಎಳೆಬಿಸಿಲಾಗಿದೆ.

ನಿಮ್ಮ ವೀಣೆಗಳಕೊಳ್ಳಿ, ಹಾಡಿರೆನ್ನೊಡನೆ
ಒಣಗಿದ ಕೊಂಬೆಗಳನ್ನೂ ಮೋಟುಮರಗಳನ್ನೂ
ಉರುಳಿಸುತ್ತ ಹಾಗೂ
ಜೀವಂತ ಬೇರಿಗೆ ನೆಲದಾಳದಲ್ಲಿಳಿದು ಇನ್ನು ಆಳವಾಗಿ
ಬೇರು ಬಿಡಲು ಅನುವು ಗೊಡುತ್ತ
ಅರಣ್ಯದಲ್ಲಿ ಬೀಸುತ್ತಿರುವ ಬಿರುಗಾಳಿಯ ಕುರಿತು.
ತೆಗೆದುಕೊಳ್ಳಿ ನಿಮ್ಮ ವೀಣೆಗಳ, ಹಾಡಿರೆನ್ನೊಡನೆ
ಈ ನಮ್ಮ ಪ್ರಿಯತಮನ ಅಮರ ಹಾಡ,
ಇಲ್ಲಿಲ್ಲ, ಗೆಳತಿಯರಿರಾ, ನಿಮ್ಮ ಕೈಗಳನು ತಡೆಯಿರಿ.
ವೀಣೆಗಳ ಬದಿಗೆ ಇಡಿರಿ.
ಹಾಡಲಾರೆವು ನಾವು ಈಗವನ ಕುರಿತು.

ನಮ್ಮೊ ಹಾಡಿನ ಮಂದ ಕಿವಿಮಾತು ಅವನ ಬಿರುಗಾಳಿಯನ್ನು
ಮುಟ್ಟಲಾರದು
ಅಥವಾ ಅವನ ಮೌನದ ಭವ್ಯತೆಯನ್ನು ಇರಿಯಲಾರದು.
ನಿಮ್ಮ ವೀಣೆಗಳನಲ್ಲಿಡಿ, ಬನ್ನಿಲ್ಲಿ ಎನ್ನಬಳಿ ಸುತ್ತು ಮುತ್ತು.
ನಾನವನ ನುಡಿಗಳನು ಮರುನುಡಿವೆ ನಿಮಗೆ.
ಅವನ ಕೃತಿಗಳ ಬಗೆಗೂ ಹೇಳಿ ಬಿಡುವೆ
ಏಕೆಂದರವನ ದನಿಯ ಪ್ರತಿಧ್ವನಿಯು, ನಮ್ಮಾಕಾಂಕ್ಷೆಗಿಂತಲೂ
ಆಳವಾಗಿಹುದು.

## ೪೬. ಲಿಪಿಕಾರ ಬೆಂಜಾಮಿನ್

ಜೀಸಸ್‌ನು ರೋಮ ಮತ್ತು ಜುಡಿಯಾಗಳ ವೈರಿಯೆಂದು ಹೇಳಲಾಗುತ್ತಿತ್ತು.

ಆದರೆ ಜೀಸಸ್‌ನು ಯಾವದೇ ಮಾನವನ ಹಾಗೂ ಯಾವದೇ ಜನಾಗಂದ ವೈರಿಯಾಗಿರಲಿಲ್ಲವೆಂದು ನಾನು ಹೇಳುತ್ತೇನೆ.

"ಆಕಾಶದಲ್ಲಿಯ ಹಕ್ಕಿಗಳು, ಹಾಗೂ ಪರ್ವತ ಶಿಖರಗಳು, ತಮ್ಮ ಕಾಳ ಬಿಲದಲ್ಲಿದ್ದ ಸರ್ಪಗಳ ಬಗ್ಗೆ, ಲಕ್ಷ್ಯಗೊಡುವದಿಲ್ಲ.

"ಮೃತರು ಮೃತರನ್ನು ಹುಗಿಯುತ್ತಿರಲಿ, ನೀವು ಮಾತ್ರ ಜೀವಂತರ ಮಧ್ಯೆ ಇದ್ದು ಉನ್ನತಾಂತರಾಳದಲ್ಲಿ ವಿಹರಿಸಿರಿ." ಎಂದು ಅವನು ಹೇಳುತ್ತಿದ್ದುದನ್ನು ನಾನು ಕೇಳಿದ್ದೇನೆ.

ನಾನವನ ಶಿಷ್ಯನಾಗಿದ್ದಿಲ್ಲ. ಅವನ ಮುಖದರ್ಶನಕ್ಕೆಂದು ಹೋಗುತ್ತಿರುವ ಅನೇಕ ಜನ ಜಂಗುಳಿಯಲ್ಲಿ ನಾನೂ ಒಬ್ಬನಾಗಿದ್ದೆ.

ಮಗುಗಳು ತಮ್ಮ ಆಟಿಕೆಗಳೊಡನೆ ಆಡುತ್ತಿರುವುದನ್ನೂ, ದೊಡ್ಡ ಆಟಿಗೆ ಬೇಕೆಂದು ತಮ್ಮತಮ್ಮೊಳಗೆ ಬಡಿದಾಡುತ್ತಿರುವದನ್ನೂ ನೋಡುತ್ತಿರುವ ತಂದೆಯಂತೆ ಅವನು ರೋಮವನ್ನೂ, ರೋಮದ ಗುಲಾಮರಾದ ನಮ್ಮನ್ನೂ ನೋಡುತ್ತಿದ್ದ. ಹಾಗೂ ತನ್ನ ಉನ್ನತತಾಣದಲ್ಲಿ ನಿಂತು ಇದನ್ನೆಲ್ಲ ಕಂಡು ನಗುತ್ತಿದ್ದ.

ರಾಜ್ಯಕ್ಕಿಂತಲೂ, ಜನಾಂಗಕ್ಕಿಂತಲೂ ಅವನು ದೊಡ್ಡವನಾಗಿದ್ದ; ಕ್ರಾಂತಿಗಿಂತಲೂ ಮಹತ್ತಮನಾಗಿದ್ದ.

ಅವನು ಒಂಟಿಯೂ, ಏಕಾಕಿಯೂ ಆಗಿದ್ದ; ಹಾಗೂ ಅವನು ಜಾಗ್ರತಿಯೇ ಆಗಿದ್ದ.

ನಾವು ಸುರಿಸದ ಸಕಲ ಕಂಬನಿಗಳನ್ನೂ ಅವನು ಸುರಿಸಿದ್ದ; ನಮ್ಮ ಸಕಲ ಪ್ರತಿಭಟನೆಗಳನ್ನು ಕಂಡು ನಗುತ್ತಿದ್ದ.

ಇನ್ನೂ ಜನಿಸದ ಸಕಲರೊಡನೆ ಜನಿಸುವ, ಹಾಗೂ ಅವರಿಗೆ, ಅವರ ಕಂಗಳಿಂದಲ್ಲ, ತನ್ನ ದರ್ಶನಗಳಿಂದ ಕಾಣುವ ದೃಷ್ಟಿಯನ್ನೀಯುವ ಶಕ್ತಿ, ಅವನದಿತ್ತೆಂಬದು ನಮಗೆ ಗೊತ್ತಿತ್ತು.

ಈ ಭೂಮಿಯ ಮೇಲಿನ ನವಸಾಮ್ರಾಜ್ಯದ ಪ್ರಾರಂಭವೇ ಅವನಾಗಿದ್ದ, ಹಾಗೂ ಆ ಸಾಮ್ರಾಜ್ಯವೇ ಚಿರಸ್ಥಾಯಿಯಾಗುವಂಥದು.

ಇಂಥ ಆತ್ಮಸಾಮ್ರಾಜ್ಯಗಳನ್ನು ಕಟ್ಟಿದ ಅರಸರ ಪುತ್ರ-ಪೌತ್ರನೇ ಅವನಾಗಿದ್ದ.

ಈ ಆತ್ಮಸಾಮ್ರಾಟರೇ ಮಾತ್ರ ನಮ್ಮೀ ಜಗತನ್ನು ಆಳುತ್ತ ಬಂದಿದ್ದಾರೆ.

## ೪೭. ಝೂಚಿಯಸ್

ನುಡಿದುದನ್ನು ಕೇಳಿ ಅದನ್ನು ನೀವು ನಂಬುತ್ತೀರಿ. ನುಡಿಯದುದನ್ನೂ ನಂಬಿರಿ; ಏಕೆಂದರೆ ಮಾನವರಲ್ಲಿಯ ಮೌನವೇ, ಅವರ ನುಡಿಗಳಿಗಿಂತ ಸತ್ಯಕ್ಕೆ ಹೆಚ್ಚು ಸನಿಹದ್ದಾಗಿರುತ್ತದೆ.

ಜೀಸಸ್‌ನು ಅವನಾ ಹೇಯ ಮರಣದಿಂದ ಪಾರಾಗಬಹುದಿತ್ತು, ತನ್ನ ಅನುಯಾಯಿಗಳನ್ನೂ ಆ ಘೋರ ಮರಣದಂಡನೆಯಿಂದ ಉಳಿಸಬಹುದಾಗಿತ್ತು, ಅಲ್ಲವೆ ? ಎಂದು ನೀವು ಕೇಳುತ್ತೀರಿ.

ನಾನು ಹೇಳುವೆ: ಬಯಸಿದ್ದರೆ ನಿಶ್ಚಯವಾಗಿಯೂ ಅವನು ಅದರಿಂದ ಪಾರಾಗಬಹುದಿತ್ತು. ಆದರೆ ಅವನು ಸುರಕ್ಷಿತತೆಯನ್ನು ಬಯಸಲಿಲ್ಲ,

ಹಾಗೂ ತನ್ನ ಹಿಂಡನ್ನು ಈ ಇರುಳ ತೋಳಗಳಿಂದ ರಕ್ಷಿಸುವ ಬಗ್ಗೆಯೂ ಲಕ್ಷ್ಯಗೊಟ್ಟಿದ್ದಿಲ್ಲ.

ಅವನಿಗೆ ತನ್ನ ಹಣೆಬರೆಹ ಗೊತ್ತಿತ್ತು; ತನ್ನನ್ನು ಏಕೋಪ್ರಕಾರ ಪ್ರೀತಿಸುವವರ ಭವಿತವ್ಯವೂ ಗೊತ್ತಿತ್ತು. ನಮ್ಮಲ್ಲಿಯ ಪ್ರತಿಯೊಬ್ಬರಿಗೂ ನಾಳೇನು ಬರಬಹುದೆಂಬ ಬಗ್ಗೆ ಅವನು ಮೊದಲೇ ಕಣಿಹೇಳಿ ಬಿಟ್ಟಿದ್ದ. ಅವನು ಮೃತ್ಯುವನ್ನು ಬಯಸಲಿಲ್ಲ; ಆದರೆ, ಕಾಳನ್ನು ಮಣ್ಣಿನಿಂದ ಮುಚ್ಚುವ ಒಕ್ಕಲಿಗನು, ಚಳಿಗಾಲವನ್ನೂ ಸ್ವೀಕರಿಸಿ ಬಳಿಕ ವಸಂತದ ಹಾಗೂ ಸುಗ್ಗಿಯ ದಾರಿ ಕಾಯುವಂತೆ, ಹಾಗೂ ಉಪ್ಪಾರನು ದೊಡ್ಡ ಕಲ್ಲನ್ನೇ ತಳಪಾಯಕ್ಕೆ ಹಾಕುವಂತೆ, ಅವನು ಮರಣವನ್ನೆ ಸ್ವೀಕರಿಸಿದ.

ನಾವೆಲ್ಲರೂ, ಗ್ಯಾಲಿಲಿಯ ಮತ್ತು ಲೆಬನಾನದ ಇಳುಕಲಿನ ನಾಗರಿಕರಾಗಿದ್ದೆವು. ನಮ್ಮ ಪ್ರಭು ನಮ್ಮನ್ನು ನಮ್ಮ ದೇಶಕ್ಕೆ ಮರಳಿ ಕರೆದೊಯ್ಯಬಹುದಾಗಿತ್ತು; ಹಾಗೂ ಅಲ್ಲಿಯೇ, ಮುದಿತನ ಬಂದು ಮರಣದ ಕಿವಿಮಾತು ಹೇಳುವವರೆಗೆ ನಮ್ಮ ತೋಟಗಳಲ್ಲಿ ತನ್ನ ಪ್ರಾಯವನ್ನು ಅವನು ಕಳೆಯಬಹುದಾಗಿತ್ತು.

ಎಲ್ಲಿ ಉಳಿದವರು ತಮ್ಮ ಪ್ರವಾದಿಗಳ ವಚಗಳನ್ನೋದುತ್ತ, ಆ ಬಳಿಕ ತಮ್ಮ ನಿಜವಾದ ಹೃದಯವನ್ನು ಬಿಚ್ಚಿಡುತ್ತ ಬಂದಿರುವರೋ ಅಂಥ ನಮ್ಮ ಹಳ್ಳಿಯ ಗುಡಿಗಳಲ್ಲಿ ಅವನು ತಿರುಗಿ ಬರಬೇಕೆಂದಿದ್ದರೆ ಅವನ ಹಾದಿಗೆ ಯಾರು ಅಡ್ಡ ಬರಬಹುದಿತ್ತು ?

"ನಾನೀಗ ಮೂಡಗಾಳಿಯೊಡನೆ ಪಡುವಣಕ್ಕೆ ನಡೆಯುತ್ತೇನೆ" ಎಂದವನು ಹೇಳಿದ್ದಿಲ್ಲವೇ ? ಹಾಗೂ ಹೀಗೆ ಹೇಳುತ್ತ ನಗೆ ಮೊಗದಿಂದ ನಮ್ಮನ್ನು ಬೀಳ್ಕೊಟ್ಟು ನಡೆದಿರಲಿಲ್ಲವೇ ?

ಹೌದು, "ನಿಮ್ಮ ಮನೆಗೆ ತಿರುಗಿ ಹೊರಡಿರಿ. ನನಗಾಗಿ ಜಗತ್ತೀಗ ಸಿದ್ಧವಾಗಿಲ್ಲ. ಸಾವಿರ ವರ್ಷದ ಮೇಲೆ ನಾನು ಮತ್ತೆ ಮರಳಿ ಬರುವೆ. ಆ ನನ್ನ ಬರವನ್ನು ನಿರೀಕ್ಷಿಸಿರೆಂದು ನಿಮ್ಮ ಸಂತಾನಕ್ಕೆ ಹೇಳಿರಿ" ಎಂದವನು ಹೇಳಿದ್ದಿಲ್ಲವೇ ?

ಬಯಸಿದ್ದರೆ ಅವನು ಇದನ್ನೂ ಮಾಡಿ ತೋರಿಸಬಹುದಿತ್ತು.

ಆದರೆ ಆ ಅದೃಶ್ಯ ದೇಗುಲವನ್ನು ಕಟ್ಟಲು, ತಾನೇ ತನ್ನನ್ನು ತಳ ಪಾಯದ ಕಲ್ಲನ್ನಾಗಿ ಇಟ್ಟುಕೊಳ್ಳಬೇಕೆಂಬುದೂ, ನಮ್ಮನ್ನೆಲ್ಲ ಅದರ ಸುತ್ತುಮುತ್ತು ಖಡಿಗಳನ್ನಾಗಿ ಹಾಕಬೇಕೆಂಬುದೂ ಅವನಿಗೆ ತಿಳಿದಿತ್ತು.

ತನ್ನ ಆಕಾಶವೃಕ್ಷದ ರಸವು ಬೇರಿನಿಂದಲೇ ಮೇಲೇರಿ ಬರ ಬೇಕೆಂಬುದೂ ಅವನಿಗೆ ಗೊತ್ತಿತ್ತು; ಅದಕ್ಕೇ ಅವನು ತನ್ನ ರಕ್ತವನ್ನು ಆ ಬೇರಿಗೆ ಹನಿಸಿದ, ಅವನಿಗೆ ಅದೊಂದು ತ್ಯಾಗವಾಗಿರಲಿಲ್ಲ, ಲಾಭವಾಗಿತ್ತು.

ಮರಣವೇ ಪ್ರಕಾಶಕ. ಜೀಸಸ್‌ನ ಮರಣವು ಅವನ ಜೀವನವನ್ನು ಪ್ರಕಾಶಕ್ಕೆ ತಂದಿತು.

ನಿಮ್ಮಿಂದ ಹಾಗೂ ತನ್ನ ವೈರಿಗಳಿಂದ ಅವನು ಪಾರಾಗಿ ಹೋಗಿದ್ದರೆ ನೀವೇ ಈ ಜಗತ್ತಿನ ಸಾಮ್ರಾಟರಾಗಬಹುದಿತ್ತು. ಅದಕ್ಕೆಂದೇ ಅವನು ಪಾರಾಗಿ ಹೋಗಲಿಲ್ಲ.

ಸರ್ವಸ್ವವನ್ನು ಬಯಸುವವನೇ ಸರ್ವಸ್ವವನ್ನು ಕೊಡಲೂ ಬೇಕು.

ಹೌದು, ಜೀಸಸ್‌ನು ತನ್ನ ವೈರಿಗಳಿಂದ ಪಾರಾಗಿ ಮುದುಕನಾಗುವ ವರೆಗೂ ಬದುಕಿ ಉಳಿಯಬಹುದಿತ್ತು. ಆದರೆ ಋತುಗತಿ ಅವನಿಗೆ ತಿಳಿದಿತ್ತು, ಅವನು ತನ್ನ ಗೀತವನ್ನು ಹಾಡಬಹುದಿತ್ತು.

ಅನಂತ ಕಾಲವನ್ನು ಮೀರಬೇಕೆಂದು ಸಾಯುಧಜಗವನ್ನು ಎದುರಿಸಿ ಕ್ಷಣಿಕ ವಿಜಯಕ್ಕೆ ಮನಸು ಮಾಡದ ಮಾನವನ ಬಗೆಯೇನು?

ಜೀಸಸ್‌ನನ್ನು ನಿಜವಾಗಿಯೂ ಯಾರು ಕೊಂದರು, ರೋಮನ್ನರೋ ಜೆರೂಸಲೇಮದ ಆಚಾರ್ಯರೋ? ಎಂದೀಗ ನೀವು ಕೇಳಬಹುದು.

ಅವನನ್ನು ಕೊಂದವರು ರೋಮನ್ನರೂ ಅಲ್ಲ, ಆಚಾರ್ಯರೂ ಅಲ್ಲ. ಸಮಗ್ರ ಲೋಕವೇ ಅವನನ್ನು ಆ ಗುಡ್ಡದ ಮೇಲೆ ಮರ್ಯಾದೆ ಮಾಡಲು ಬಂದು ನಿಂತಿತ್ತು.

## ೪೮. ಜೋನಾಥನ್

ಒಂದು ದಿನ ನಾನೂ ನನ್ನ ಪ್ರಿಯತಮೆಯೂ ಆ ಸೀ ಸೀರಿನ ಸರೋವರದ ನೀರಿನ ಮೇಲೆ ಸಂಚರಿಸುತ್ತಿದ್ದೆವು. ಲೆಬನಾನದ ಗುಡ್ಡಗಳು ನಮ್ಮ ಸುತ್ತುಮುತ್ತಿದ್ದವು.

ನಾವು ಆ ಅಳುತ್ತಿದ್ದ ವಿಲೋವೃಕ್ಷಗಳ ಬಳಿ ಬಂದೆವು. ಅವುಗಳ ನೆರಳು ನಮ್ಮ ಸುತ್ತುಮುತ್ತು ದಟ್ಟವಾಗಿ ಬಿದ್ದಿತ್ತು.

ನಾನು ಹುಟ್ಟುಹಾಕಿ ನಾವೆ ನಡೆಸುತ್ತಿರುವಾಗ ನನ್ನ ಪ್ರಿಯತಮೆ ತನ್ನ ವೀಣೆಯನ್ನು ತೆಗೆದು ಹೀಗೆ ಹಾಡಿದಳು :

ರವಿಯದೂ, ನೀರಿನದೂ, ನೀರಜವನುಳಿದು ಉಳಿದ ಹೂಗಳಿಗೇನು
ಗೊತ್ತು ?
ಪದುಮ ಹೃದಯವನುಳಿದು, ಉಳಿದ ಹೃದಯಂಗಳಿಗೆ ಈ ಭೂ-
ವ್ಯೋಮಗಳದೇನು ಗೊತ್ತು ?
ಅನಾದಿಯಿಂದಲೂ ಬಂದ, ಅನಂತದವರೆಗೂ ಇರುವ ಪ್ರೇಮದ
ಮಧ್ಯೆ ತೇಲುತ್ತಿದ್ದ ನನ್ನ ನಿನ್ನಂತೆ
ಆಳ-ಎತ್ತರಗಳ ಮಧ್ಯೆ ತೇಲುತ್ತಿರುವ ಈ ಹೊಂದಾವರೆಗಳನ್ನು
ನೋಡಲ್ಲಿ ನನ್ನ ನಲ್ಲ
ನನ್ನೊಲವೆ, ನಿನ್ನ ಹುಟ್ಟನು ಅದ್ದು,
ನಾ ನನ್ನ ವೀಣೆತಂತಿಗಳ ಮಿಡಿವೆ
ನಾವೀ ವಿಲೋವೃಕ್ಷಗಳನನುಸರಿಸುವ, ಈ ನೀರಜಗಳನ್ನೂ
ಬಿಡದಿರುವ
ಈ ನಾರ್ಝರಿಥದಲ್ಲೊಬ್ಬ ಕವಿಯಿರುವ. ಅವನ ಹೃದಯವೊ
ಕಮಲ ಸುಮ ಸಮ
ಹೆಣ್ಣು ಆತ್ಮವನವನು ಕಂಡಿರುವ
ನೀರಿನಿಂದೇಳುವ ಅವಳ ನೀರಡಿಕೆಯೂ ಅವನಿಗೆ ಗೊತ್ತು
ತುಟಿಯೆಲ್ಲ ತೃಪ್ತವಾಗಿದ್ದರೂ ರವಿಗಾಗಿ ಹಸಿದ ಅವಳ ಹಸಿವೆಯು
ಅವನು ಬಲ್ಲ

ಅವನು ಗ್ಯಾಲಿಲಿಯಲ್ಲಿರುವನೆಂದು ಅವರೆನ್ನುವರು
ಅವನು ನಮ್ಮೊಡನೆಯೇ ಇರುವನೆಂದು ನಾನು ಹೇಳುವೆ
ನೀನವನ ಮೊಗವ ಕಾಣಲಾರೆಯಾ, ನನ್ನೊಲವೆ ?
ಅಲ್ಲಿ, ವಿಲೋವೃಕ್ಷದ ಟೊಂಗೆ ಹಾಗೂ ಅದರ ನೆರಳು ಕೂಡುವಲ್ಲಿ
ನಿನಗೆ ಕಾಣಿಸುವದಿಲ್ಲವೇ
ನಮ್ಮಂತೆ ಅವನೂ ವಿಹರಿಸುತ್ತಿರುವುದು.
ಪ್ರಿಯತಮಾ, ಜೀವನದ ಹರೆಯುವನು ತಿಳಿಯುವುದು ಒಳಿತು
ಹಾಡಿನಾನಂದವನು ತಿಳಿಯುವುದೂ ಒಳಿತು
ಎಲ್ಲಿ ಈ ಕಮಲಗಳು ಸೂರ್ಯನನು ಕಂಡು ಕುಲುಕುಲ ನಗುತ್ತಿರುವವೋ,
ಎಲ್ಲಿ ಈ ವಿಲೋವೃಕ್ಷವು ನೀರಿನಲ್ಲಿ ಅದ್ದಿ ಏಳುತ್ತಿರುವುದೋ,
ಎಲ್ಲಿ **ಅವನ** ದನಿ ನನ್ನ ವೀಣೆಯ ತಂತಿಗಳ ಮೇಲಿರುವುದೋ,
ಇಂಥಲ್ಲಿ, ನಿನ್ನ ಕೈಯಲಿ ಹುಟ್ಟು, ನನ್ನ ಕೈಯಲಿ ವೀಣೆ,
ಸದಾ ಸರ್ವದಾ ಹೀಗೆಯೇ ಇರುವಂತಾದರೆ ...ಆಹಾಹಾ !
ನಿನ್ನ ಹುಟ್ಟನು ಅದ್ದು ಓ ನನ್ನ ಪ್ರಿಯತಮಾ.
ನಾನನ್ನ ತಂತಿಗಳ ಮಿಡಿವೆ ಮಿಡಿವೆ
ನಾರ್ಝರೆಥದಲ್ಲೊಬ್ಬ ಕವಿಯಿರುವ
ಅವನು ನಮ್ಮಿಬ್ಬರನ್ನೂ ಬಲ್ಲ, ಪ್ರೀತಿಸಲು ಬಲ್ಲ.
ಅದ್ದು ನಿನ್ನಯ ಹುಟ್ಟ ಓ ನನ್ನ ಪ್ರಿಯತಮಾ
ನನ್ನ ತಂತಿಗಳ ನಾ ಮಿಡಿಮಿಡಿಯುತಿರಲಿ !

## ೪೯. ಬೆಥ್ಸೈಡಾದ ಹನ್ನಾ : ೭೩ನೇ ವರ್ಷ

ನಮ್ಮ ತಂದೆಯ ತಂಗಿ ತನ್ನ ಯೌವನದಲ್ಲಿಯೇ ನಮ್ಮನ್ನು ಬಿಟ್ಟು ತನ್ನ ತಂದೆಯ ಮೊದಲಿನ ದ್ರಾಕ್ಷಾತೋಟದ ಬಳಿಯಿದ್ದ ಗುಡಿಸಲಲ್ಲಿ ಬೇರೆಯಾಗಿ ವಾಸಿಸತೊಡಗಿದಳು.

ಆಕೆ ಅಲ್ಲಿ ಏಕಾಕಿಯಾಗಿದ್ದಳು. ಸುತ್ತಲಿನ ಹಳ್ಳಿಗಾಡಿನ ಜನರು ತಮ್ಮ ಆದಿ-ವ್ಯಾಧಿಗಳಲ್ಲಿ ಆಕೆಯ ಬಳಿಗೆ ಹೋಗುತ್ತಿದ್ದರು. ಆಕೆ ಗಿಡ

ಮೂಲಿಕೆಗಳಿಂದ, ಒಣಗಿದ ಹೂವು-ಬೇರುಗಳಿಂದ ಔಷಧಿ ಕೊಟ್ಟು ಗುಣ ಪಡಿಸುತ್ತಿದ್ದಳು.

ಆಕೆಯನ್ನವರು ದಾರ್ಶನಿಕೆ ಎಂದು ಬಗೆಯುತ್ತಿದ್ದರು; ಬೇರೆ ಹಲವರು ಆಕೆಯನ್ನು ಮಂತ್ರವಾದಿನಿ, ಮಾಟಗಾರ್ತಿ ಎಂದೂ ಎನ್ನುತ್ತಿದ್ದರು.

ಒಂದು ದಿನ ನಮ್ಮ ತಂದೆ ನನಗೆ ಹೇಳಿದ: "ಇಗೋ ಈ ಗೋದಿ ಹಿಟ್ಟಿನ ರೊಟ್ಟಿಗಳನ್ನೂ, ಈ ಮಧುವಿನ ಹೂಜೆಯನ್ನೂ, ಈ ಒಣ ದ್ರಾಕ್ಷೆಗಳ ಬುಟ್ಟಿಯನ್ನೂ ನನ್ನ ತಂಗಿಗೆ ಮುಟ್ಟಿಸಿ ಬಾ."

ಅವೆಲ್ಲವನ್ನೂ ಒಂದು ಕುದುರೆ ಮರಿಯ ಮೇಲೆ ಹೇರಿಕೊಂಡು ನಾನು ಆಕೆಯ ಆ ದ್ರಾಕ್ಷಾ ತೋಟದ ಗುಡಿಸಲಿಗೆ ಹೋದೆ. ನನ್ನನ್ನು ಕಂಡು ಆಕೆ ಸಂತೋಷಪಟ್ಟಳು.

ಬಳಿಕ ಸಂಜೆಯ ಇಳಿಹೊತ್ತಿನಲ್ಲಿ ನಾನೂ ನನ್ನ ತಂದೆಯ ತಂಗಿಯೂ ಕೂಡಿ ಕುಳಿತಾಗ ದಾರಿ ಕಡೆಯಿಂದ ಒಬ್ಬವ ಬಂದು ಆಕೆಗೆ ಅಭಿವಂದನಗಳನ್ನು ಸಲ್ಲಿಸುತ್ತ "ನಿನಗೆ ವಂದನೆಗಳು; ರಾತ್ರಿಯ ಹರಕೆಗಳು ನಿನಗಾಗಲಿ" ಎಂದ.

ಕೂಡಲೆ ಆಕೆ ಹೆದರಿದವರಂತೆ ಎದ್ದು ಅವನೆಡೆಗೆ ಹೋಗಿ ನಿಂತು "ಸಕಲ ಒಳ್ಳೇ ಆತ್ಮಗಳ ಪ್ರಭುವೇ, ಸಕಲ ದುಷ್ಟಾತ್ಮಗಳನ್ನು ಗೆಲಿದವನೇ ನಿನಗೆ ವಂದನೆಗಳು." ಎಂದಳು.

ಅವನು ಆಕೆಯನ್ನು ಕರುಣಾದೃಷ್ಟಿಯಿಂದ ನೋಡಿ ಬಳಿಕ ತನ್ನ ಹಾದಿ ಹಿಡಿದು ಹೊರಟು ನಡೆದ.

ಇದನ್ನೆಲ್ಲ ಕಂಡು ನಾನು ನನ್ನೊಳಗೇ ನಕ್ಕೆ. ನನ್ನ ತಂದೆಯ ತಂಗಿಗೆ ಹುಚ್ಚು ಹಿಡಿದಿದೆಯೆಂದೆಣಿಸಿದೆ. ಆದರೆ ಈಗ ನನಗೆ ತಿಳಿಯಿತು, ಆಕೆ ಹುಚ್ಚಿಯಲ್ಲ; ನನಗೇ ಆಗದು ತಿಳಿಯಲಿಲ್ಲ.

ನಾನು ಒಳಗೇ ಮುಚ್ಚಿ ನಕ್ಕಿದ್ದರೂ ಆಕೆಯದನ್ನು ತಿಳಿದಿದ್ದಳು.

ಆಕೆ ಸಿಟ್ಟುಗೇಳದೆಯೆ ನನಗೆಂದಳು: "ಕೇಳು, ಮಗಳೇ ಲಕ್ಷ್ಯಗೊಟ್ಟು ಕೇಳು: ನನ್ನ ಮಾತುಗಳನ್ನು ನೆನಪಿನಲ್ಲಿಡು. ರವಿ–ಪೃಥಿವಿಗಳ ನಡುವೆ ಹಾರಾಡುತ್ತಿರುವ ಹಕ್ಕಿಯ ನೆರಳಿನಂತೆ ಈಗಿಲ್ಲಿ ಬಂದು ಹೋದವನು ಸೀಝರರನ್ನೂ, ಸೀಝರರ ಸಾಮ್ರಾಜ್ಯಗಳನ್ನೂ ಗೆಲ್ಲಬಲ್ಲವನು. ಚಾಲ್ಡಿ

ಯಾದ ಮಕುಟಾಂಕಿತ ಗೂಳಿಯೊಡನೆ, ಹಾಗೂ ಇಜಿಪ್ತದ ಮಾನವ ಮುಖದ ಸಿಂಹದೊಡನೆ ಹೋರಾಡಬಲ್ಲವನು, ಅವರನ್ನೆಲ್ಲ ಮೆಟ್ಟಿ ನಿಲ್ಲಬಲ್ಲವನು ಹಾಗೂ ಜಗತ್ತನ್ನೇ ಆಳಬಲ್ಲವನು.

"ಆದರೆ ಅವನು ಅಡಿಯಾಡುತ್ತಿದ್ದ ಈ ನಾಡೂ ಜೆರೂಸಲೇಮುವೂ ಶೂನ್ಯಕ್ಕಿಳಿಯುವದು; ಈಗ ಸೊಕ್ಕಿನಿಂದ ಗುಡ್ಡದ ತಲೆಯ ಮೇಲೆ ಕುಳಿತಿರುವ ಇವು ಪ್ರಳಯ ಗಾಳಿಯ ಧೂಳು—ಹೊಗೆಗಳಲ್ಲಿ ಹಾರಿಹೋಗುವವು."

ಆಕೆ ಹೀಗೆ ಹೇಳಿದೊಡನೆ ನನ್ನ ನಗೆ ಸ್ತಬ್ಧತೆಗೆ ತಿರುಗಿ ನಾನು ಮೌನವಾದೆ; ಬಳಿಕ ನುಡಿದೆ: "ಯಾರು ಈ ಮನುಷ್ಯ? ಯಾವ ದೇಶದವ, ಯಾವ ಜನಾಂಗದವ ? ಹಾಗೂ ಮಹಾ ಮಹಾ ಅರಸರನ್ನೂ ಅವರ ರಾಜ್ಯಗಳನ್ನೂ ಹೇಗೆ ಗೆಲ್ಲುವ ? "

ಆಕೆಯೆಂದಳು : "ಅವನು ಇಲ್ಲಿಯೇ ಈ ನಾಡಿನಲ್ಲಿಯೇ ಜನಿಸಿದ. ಬಹಳ ಕಾಲದ ಮೊದಲೇ ನಮ್ಮ ಆಕಾಂಕ್ಷೆಯೊಳಗೆ ನಾವು ಅವನ ಬರವನ್ನು ಊಹಿಸಿದ್ದೆವು. ಅವನು ಸಕಲ ಜನಾಂಗಕ್ಕೂ ಸಂಬಂಧಿಸಿದವ, ಆದರೂ ಯಾವದಕ್ಕೂ ಸಂಬಂಧಿಸಿಲ್ಲ. ಅವನು ತನ್ನ ಮುಖದಿಂದ ಹೊರಡುವ ಶಬ್ದಗಳಿಂದ, ತನ್ನಾತ್ಮದಿಂದುಗ್ಗುವ ಜ್ವಾಲೆಯಿಂದ ಸಕಲವನ್ನೂ ಗೆಲ್ಲಬಲ್ಲವ."

ಬಳಿಕ ಒಮ್ಮೆಲೆ ಆಕೆ ಎದ್ದು, ಶಿಖರದ ಮೇಲಿನ ಕಲ್ಲುಬಂಡೆಯಂತೆ ನಿಂತುಕೊಂಡು ನುಡಿದಳು : ಈ ನುಡಿಗಳನ್ನು ಕೂಡ ಆಡುವುದಕ್ಕಾಗಿ ಪ್ರಭುವಿನ ದೇವದೂತ ನನ್ನನ್ನು ಕ್ಷಮಿಸಲಿ; ಅವನು ಕೊಲ್ಲಲ್ಪಡುವನು, ಅವನ ಹರೆಯವು ಹೆಣದ ಬಟ್ಟೆಯಿಂದ ಹೊದಿಸಲ್ಪಡುವದು, ಭೂಮಿತಾಯಿಯ ಮೂಕ ಹೃದಯದ ಬಳಿ ಅವನು ಮೌನದಿಂದ ಇಡಲ್ಪಡುವನು. ಹಾಗೂ ಜ್ಯುಡಿಯಾದ ಹೆಣ್ಣುಗಳು ಅವನಿಗಾಗಿ ಅಳುವರು."

ಆಮೇಲೆ ಆಕೆ ಆಕಾಶದ ಕಡೆಗೆ ಕೈಯೆತ್ತಿ ಮತ್ತೆ ನುಡಿದಳು : "ಆದರೆ ಅವನು ದೇಹದಿಂದ ಮಾತ್ರ ಕೊಲ್ಲಲ್ಪಡುವನು.

"ಆತ್ಮಿಕವಾಗಿ ಅವನು ಮೇಲೆದ್ದು ಮುಂಬಂದು ತನ್ನ (ಜನಜಂಗುಳಿಯನ್ನು) ಸತ್ಪ್ರಸಾದವನ್ನು ಸೂರ್ಯೋದಯದ ನಾಡಿನಿಂದ ಸೂರ್ಯಾಸ್ತದ ನಾಡಿನವರೆಗೂ (ನಡೆಸಿ) ಹಂಚಿಬಿಡುವನು.

“ ಅವನ ಕೀರ್ತಿಯೇ—ಹೆಸರೇ—ಮಾನವಕುಲದಲ್ಲಿ ಮೊದಲಿನ ದಾಗುವುದು. ”

ಈ ಮಾತುಗಳನ್ನಾಡಿದಾಗ ಆಕೆ ಮುಪ್ಪಿನ ದಾರ್ಶನಿಕೆಯಾಗಿದ್ದಳು; ನಾನೋ, ಗೋಡೆಯೊಳಗಿರದ ಕಲ್ಲಿನಂತೆ, ಹರಗದ ಹೊಲದಂತೆ, ಕೇವಲ ಚಿನ್ನಾಟದ ಹುಡಿಗೆಯಾಗಿದ್ದೆ.

ಆದರೆ ಅಂದು ಆಕೆ ತನ್ನ ಮನಸಿನ ಕನ್ನಡಿಯಲ್ಲಿ ಕಂಡು ನುಡಿದುದು ಈಗ ನನ್ನ ಕಾಲದಲ್ಲಿ ನಿಜವಾಗಿ ನಡೆದು ಹೋಗಿದೆ.

ನಾಝರೆಥದ ಜೀಸಸ್‌ನು ಸತ್ತವನೆದ್ದು ಬಂದು ಸ್ತ್ರೀ ಪುರುಷರನ್ನೆಲ್ಲ ಪಡುವಣದ ಜನದೆಡೆಗೆ ನಡೆಸಿದ. ಅವನನ್ನು ನ್ಯಾಯ ನಿರ್ಣಯಕ್ಕಾಗಿ ಒತ್ತಾಯಿಸಿದ ಪಟ್ಟಣವಿಂದು ಹಾಳಾಗಿ ಹೋಗಿದೆ. ಅವನ ವಿಚಾರಣೆ ನಡೆಸಿ ಮರಣದಂಡನೆಯಿತ್ತ ನ್ಯಾಯಮಂದಿರದಲ್ಲಿ ಗೂಗೆ ಶೋಕಗೀತ ವನ್ನುಲಿಯುತ್ತದೆ, ಇರುಳು ಅಳುತ್ತ ತನ್ನ ಹೃದಯದ ಮಂಜನ್ನು ಅಲ್ಲಿ ಬಿದ್ದ ಕಲ್ಲ ಮೇಲೆ ಹರವುತ್ತದೆ.

ನಾನೀಗ ಮುದುಕಿಯಾಗಿದ್ದೇನೆ, ಕಾಲವು ನನ್ನ ಬೆನ್ನನ್ನು ಬಾಗಿಸಿದೆ. ನನ್ನ ಜನ ಇನ್ನಿಲ್ಲ, ನನ್ನ ಜನಾಂಗವೂ ನಾಶವಾಗಿ ಹೋಗಿದೆ.

ಆ ದಿನದ ನಂತರ ಮತ್ತೆ ಅವನನ್ನು ನಾನು ಒಮ್ಮೆ ಮಾತ್ರ ಕಂಡೆ. ಒಮ್ಮೆ ಮಾತ್ರ ಅವನ ದನಿ ಕೇಳಿದೆ. ಅದು ಆ ಗುಡ್ಡದ ತುದಿಯಲ್ಲಿ, ಅವನು ತನ್ನ ಮಿತ್ರರನ್ನೂ ಅನುಯಾಯಿಗಳನ್ನೂ ಕುರಿತು ಮಾತನಾಡುತ್ತಿದ್ದಾಗ ಕಂಡೆ. ಈಗ ನಾನು ಮುದುಕಿ, ಏಕಾಕಿ, ಆದರೂ ಅವನು ನನ್ನ ಕನಸಿನಲ್ಲಿ ಬರುತ್ತಾನೆ.

ಗರಿಯಿದ್ದ ಶ್ವೇತ ದೇವದೂತನಂತೆ ಅವನು ಬರುತ್ತಾನೆ; ತನ್ನ ವೈಭವ ದಿವ್ಯದಿಂದ ನನ್ನ ಭೀಕರ ಕತ್ತಲೆಯನ್ನು ಹಾರಿಸಿಬಿಡುತ್ತಾನೆ; ಇನ್ನೂ ದೂರದೂರದ ಕನಸಿಗೆ ನನ್ನನ್ನು ಕೊಂಡೊಯ್ಯುತ್ತಾನೆ.

ಇನ್ನೂ ನಾನು ಹರಗದ ಹೊಲವೇ ಆಗಿದ್ದೇನೆ; ಉದುರಿದ ಹಣ್ಣಾಗಿ ದ್ದೇನೆ. ನನ್ನ ಹೆಚ್ಚಿನ ಆಸ್ತಿಯೆಂದರೆ ಸೂರ್ಯನ ಹೊಂಬಿಸಿಲು, ಈ ಮಾನವನ ನೆನವಿನ ಸುಸಿಲು.

ನನ್ನ ಸೋದರತ್ತೆ ಮೊದಲೇ ಭವಿಷ್ಯ ಹೇಳಿದಂತೆ ನಮ್ಮ ಜನದಲ್ಲಿ ಇನ್ನಿಂಥ ರಾಜ, ಇಂಥ ಪ್ರವಾದಿ, ಇಂಥ ಆಚಾರ್ಯ ಜನಿಸಿ ಬರಲಾರ.

ಈ ಹರಿವ ನದಿಗಳಂತೆ ನಾವು ಹರಿದುಹೋಗುವೆವು. ಹಾಗೂ ನಾವು ಶೇಷವಾಗುವೆವು.

ಆದರೆ, ನಡುಹೊಳೆಯಲ್ಲಿ ಇವನನ್ನು ಕಂಡವರು, ನಡುಹೊಳೆಯಲ್ಲಿ ಇವನನ್ನು ಕಂಡುದಕ್ಕಾಗಿಯೇ ಸ್ಮೃತಿಪಥದಲ್ಲಿ ಉಳಿಯುವರು.

## ೫೦. ಜೆರೂಸಲೇಮದಲ್ಲಿಯ ವಕೀಲ ಮೆನಾಸ್ಸೆ

ಹೌದು, ಅವನ ಭಾಷಣಗಳನ್ನು ನಾನು ಕೇಳುತ್ತಿದ್ದೆ. ನುಡಿಗಳು ಅವನ ತುಟಿಗಳಲ್ಲಿ ಸದಾ ಕುಣಿಯುತ್ತಿದ್ದವು.

ಆದರೆ ನಾನವನನ್ನು ನಾಯಕನೆನ್ನುವದಕ್ಕಿಂತಲೂ ಮಾನವನೆಂದು ಮೆಚ್ಚುತ್ತಿದ್ದೆ. ನನಗೆ ಸೇರುವುದರಾಚೆಗಿನದೇನನ್ನೋ ಅವನು ಬೋಧಿಸುತ್ತಿದ್ದ, ಅದು ನನ್ನ ಒರೆಗಲ್ಲಿಗೆ ಮೀರಿದುದಾಗಿತ್ತು. ಹಾಗೂ ನನಗೆ ಬೋಧಿಸುವ ಮಾನವನಾವನೂ ಇರಲಿಲ್ಲ.

ಅವನ ದನಿ, ಅವನ ಹಾವಭಾವಗಳಿಗೆ ನಾನು ಮಾರುಹೋಗಿದ್ದೇನಲ್ಲದೆ ಅವನ ಭಾಷಣಗಳ ವಿಷಯಕ್ಕಲ್ಲ. ಅವನು ನನ್ನನ್ನು ಮೋಹಗೊಳಿಸಿದ್ದ, ಆದರೆ ನನಗೆ ಖಚಿತ ಮಾಡಿಕೊಡಲಿಲ್ಲ; ಏಕೆಂದರೆ ಅವನು ಅತಿ ಅಸ್ಪಷ್ಟ, ಅತಿ ದೂರ, ಅತಿ ಗಹನದವನಾಗಿದ್ದ ನನ್ನ ಮನಸಿಗೆ.

ಅವನಂತಿರುವ ಅನೇಕರದು ನನಗೆ ಗೊತ್ತಿತ್ತು. ಅವರು ಎಂದೂ ಏಕಪ್ರಕಾರವಾಗಿಯೂ ದೃಢವಾಗಿಯೂ ಇರುತ್ತಿದ್ದಿಲ್ಲ. ತತ್ವಗಳಿಂದಲ್ಲ, ಕೇವಲ ಭಾಷಣ ಬಂಧುರತೆಯಿಂದ ಅವರು ನಿಮ್ಮ ಕಿವಿಗಳನ್ನು ನಿಮ್ಮ ಹರಿದಾಡುವ ವಿಚಾರಧಾರೆಗಳನ್ನು ಸೆರೆಗೊಳಿಸುತ್ತಿದ್ದರಲ್ಲದೆ ಎಂದೆಂದೂ ನಿಮ್ಮ ಹೃದಯಾಂತರಾಳವನ್ನಲ್ಲ.

ಅವನ ವೈರಿಗಳು ಅವನನ್ನು ಎದುರಿಸಿದ್ದೂ, ಅವನ ಮೇಲೆ ತಮ್ಮ ನಿರ್ಣಯ ಹೇರಿದ್ದೂ ಎಂತಹ ಕನಿಕರದ ಮಾತು! ಅದು ಅವಶ್ಯವಿದ್ದಿಲ್ಲ.

ಅವನ ವಿರೋಧವೇ ಅವನ ಎತ್ತರವನ್ನು ಉನ್ನತಗೊಳಿಸಿ ಅವನ ಸಮ್ಮತಿಯನ್ನು ಶಕ್ತಿಯನ್ನಾಗಿಸಿತೆಂದು ನಾನು ನಂಬುವೆ.

ಏಕೆಂದರೆ, ನೀವು ಒಬ್ಬನನ್ನು ಎದುರಿಸುವುದರಿಂದಲೇ ಅವನಿಗೆ ಧೈರ್ಯವಿತ್ತಂತಾಗುವುದೂ ಹಾಗೂ ಅವನ ನಡೆಯನ್ನು ತಡೆಯುವದರಿಂದಲೇ ಅವನಿಗೆ ಪಕ್ಕವಿತ್ತಂತಾಗುವುದೂ ವಿಲಕ್ಷಣವಲ್ಲವೇ ?

ಅವನ ವೈರಿಗಳದು ನನಗೆ ಗೊತ್ತಿಲ್ಲ; ಆದರೂ, ಈ ನಿರುಪದ್ರವಿ ಮನುಷ್ಯನಿಗಾಗಿದ್ದ ಅವರ ಹೆದರಿಕೆಯೇ ಅವನಿಗೆ ಶಕ್ತಿಯನ್ನಿತ್ತು ಅವನನ್ನು ಗಂಡಾಂತರಕಾರಿಯನ್ನಾಗಿಸಿತೆಂಬುದು ನನಗೆ ನಿಶ್ಚಯವಾಗಿದೆ.

## ೫೧. ಸೀರ್ಯುರಿಯಾದ ಜೆಫ್ಥಾ

ನಿಮ್ಮಲ್ಲಿ ಹಗಲೆಲ್ಲಾ ತುಂಬಿ, ಇರುಳೆಲ್ಲ ಸುಳಿದಾಡುವ ಈ ಮನುಷ್ಯ ನನಗೆ ಪ್ರತಿರೋಧಿಯಾಗಿದ್ದಾನೆ ಆದರೂ ನೀವು ಅವನ ಹೇಳಿಕೆಗಳಿಂದ ನನ್ನ ಕಿವಿಗಳನ್ನೂ, ಅವನ ಕೃತಿಗಳಿಂದ ನನ್ನ ಮನವನ್ನೂ ದಣಿಸುತ್ತೀರಿ.

ಅವನ ನುಡಿಗಳಿಂದ ಹಾಗೂ ಅವನ ಎಲ್ಲ ಕೃತಿಗಳಿಂದ ನನಗೆ ಸಾಕಾಗಿ ಹೋಗಿದೆ. ಅವನ ಹೆಸರೆತ್ತುವುದೂ ನನಗೆ ಸೇರುವುದಿಲ್ಲ. ಅವನ ಹಳ್ಳಿಗಾಡಿನ ಹೆಸರೂ ಸೇರುವದಿಲ್ಲ. ಅವನೆಂದರೆ ನನಗೇನೂ ಅಲ್ಲ.

ಕೇವಲ ನೆರಳಿನಂತಿರುವ ಆ ಮನುಷ್ಯನನ್ನು ಏಕೆ ನೀವು ಪ್ರವಾದಿ ಎಂದು ಹೇಳುತ್ತೀರಿ ? ಆ ಮಳಲುದಿನ್ನೆಗೆ ಶಿಖರವೆನ್ನುತ್ತೀರಿ ? ಅಥವಾ ಹೆಜ್ಜೆ ಜಾಡಿನಲ್ಲಿ ನಿಂತ ಮಳೆನೀರಿಗೆ ಸರೋವರವೆನ್ನುತ್ತೀರಿ?

ಕೊಳ್ಳದಲ್ಲಿಯ ಗುಹೆಯೊಳಗಿನ ಪ್ರತಿಧ್ವನಿಯನ್ನೂ ಅಥವಾ ಸೂರ್ಯಾಸ್ತಸಮಯದ ಸುದೀರ್ಘ ನೆರಳನ್ನೂ ನಾನು ತಿರಸ್ಕರಿಸುವದಿಲ್ಲ; ಆದರೆ ನಿಮ್ಮ ತಲೆಯಲ್ಲಿ ಗುಂಯ್‌ಗುಡುತ್ತಿರುವ ವಂಚಕ ವಿಚಾರಗಳನ್ನು ಆಲಿಸುವದಿಲ್ಲ, ಅಥವಾ ನಿಮ್ಮ ಕಣ್ಣಲ್ಲಿ ಕಾಣುತ್ತಿರುವ ಪಡಿನೆಳಲನ್ನು ಅಭ್ಯಸಿಸುವದಿಲ್ಲ.

**ಹಿಲೀಲನು** ಆಡದ ಯಾವ ಮಾತನ್ನು ಜೀಸಸ್‌ನು ಆಡಿದ್ದಾನೆ ? **ಗ್ಯಾಮಲೀಲನು** ಪ್ರಚುರಪಡಿಸದ ಯಾವ ಜಾಣ್ಮೆಯನ್ನು ಇವನು ಪ್ರಚುರ

ಪಡಿಸಿದ್ದಾನೆ? **ಫಿಲೋನ** ದನಿಯು ಮುಂದೆ ಇವನ ಗುಣುಗುಟ್ಟಾಡುವಿಕೆಯೇ? ಇವನಿಗಿಂತ ಮೊದಲೇ ಕಟಿಯದಿದ್ದ ಯಾವ ತಾಳವನ್ನು ಇವನು ಕಟಿದಿದ್ದಾನೆ?

ನಿಶ್ಶಬ್ದ ಕೊಳ್ಳದೊಳಗಿನ ಗುಹೆಗಳಲ್ಲಿಯು ಪ್ರತಿಧ್ವನಿಯನ್ನು ನಾನು ಆಲಿಸಿ ಕೇಳುತ್ತೇನೆ; ಸೂರ್ಯಾಸ್ತ ಸಮಯದ ಸುದೀರ್ಘ ನೆರಳನ್ನು ಕಣ್ಣಿಟ್ಟು ನೋಡುತ್ತೇನೆ; ಆದರೆ ಮತ್ತೊಂದು ಹೃದಯದ ದನಿಯನ್ನು ಇವನ ಹೃದಯವು ಪ್ರತಿಧ್ವನಿಸುವುದೂ, ಹಾಗೂ ತಮ್ಮನ್ನೇ ಪ್ರವಾದಿಯೆಂದು ಕರೆದುಕೊಳ್ಳುತ್ತಿದ್ದ ಇಂಥವರ ನೆರಳೂ ನನಗೆ ಬೇಡವೇ ಬೇಡ.

**ಇಸಾಹಸು** ಆಡಿದ ಮೇಲೆ, ಯಾವ ಮನುಷ್ಯ ಇನ್ನೇನಾಡುವನು? **ಡೇವಿಡ್‌ನ** ನಂತರ ಹಾಡಲು ಯಾವನಿಗೆ ಎದೆಯಿದೆ? **ಸಾಲೋಮನ್‌ನು** ತನ್ನ ಪಿತೃಗಳಿಗಾಗಿ ಕೂಡಿಸಿದ ನಂತರ, ಜಾಣ್ಮೆ ಇನ್ನೂ ಈಗ ಜನಿಸುವುದಿದೆಯೇ?

ಅಂದಬಳಿಕ, ಖಡ್ಗರಸನೆಯು ಹಾಗೂ ಜ್ವಾಲಾಧರಗಳ ನಮ್ಮ ಪ್ರವಾದಿಗಳ ಗತಿಯೇನು?

ಈ ಗ್ಯಾಲಿಲೀಯವನು ಗೂಡಿಸಲೆಂದವರು ಒಣಹುಲ್ಲನ್ನು ಬಿಟ್ಟು ಹೋಗಿರುವರೇ? ಅಥವಾ ಈ ಉತ್ತರದೇಶದ ಭಿಕಾರಿಗೆ, ಬಿದ್ದ ಹಣ್ಣನ್ನು ಬಿಟ್ಟಿರುವರೇ? ನಮ್ಮ ಪೂರ್ವಜರಿಂದ ಬೇಯಿಸಲ್ಪಟ್ಟ ರೊಟ್ಟಿಗಳನ್ನು ಮುರಿಯುವದರ ಹೊರತು, ಹಾಗೂ ಅವರು ತಮ್ಮ ಪುಣ್ಯಪಾದಗಳಿಂದ ಹಳೆ ದ್ರಾಕ್ಷೆಗಳನ್ನು ಹಿಳಿದು ಗೈದ ಮಧುವನ್ನು ಸುರಿಯುವದರ ಹೊರತು, ಅವನ ಮಾಡುವುದಿನ್ನೇನಿದೆ?

ನಾನು ಕುಂಬಾರನ ಹಸ್ತಕ್ಕೆ ಮಾನ ಕೊಡುವೆನಲ್ಲದೆ ಗಡಿಗೆಯನ್ನು ಕೊಳ್ಳುವ ಮಾನವನಿಗಲ್ಲ.

ಮಗ್ಗದಲ್ಲಿ ಕೂತು ನೇಯುವ ನೇಕಾರನಿಗೆ ಮಾನ ಕೊಡುವೆನಲ್ಲದೆ ಅರಿವೆ ಧರಿಸುವ ಕಗ್ಗನಿಗಲ್ಲ.

ನಾಝರೆಥದ ಈ ಜೀಸಸ್ ಏನಿದ್ದ? ಏನಿರುವ?

ತನ್ನ ಮನಃಸಾಕ್ಷಿಯಂತೆ ಬದುಕಲು ಭಯಪಟ್ಟ ಮಾನವನಿವ.

ಅಂತೆಯೇ ಅಲಕ್ಷ್ಯದಲ್ಲಿವನು ಬಾಡಿಹೋದ; ಅದೇ ಅವನ ಕೊನೆಯಾಯಿತು.

ಅವನ ಕೃತಿ ನುಡಿಗಳನ್ನುಚ್ಚರಿಸಿ ನನ್ನ ಕಿವಿಗಳನ್ನು ಕೊರೆಯಬೇಡಿರೆಂದು ಬೇಡಿಕೊಳ್ಳುವೆ. ಪ್ರಾಚೀನ ಪ್ರವಾದಿಗಳಿಂದ ನನ್ನ ಹೃದಯತುಂಬಿಹೋಗಿದೆ; ಅದೇ ನನಗೆ ಸಾಕು.

## ೫೨. ಪ್ರಿಯ ಶಿಷ್ಯ ಜಾನ [ಅವನ ಮುಪ್ಪಿನಲ್ಲಿ]

ಜೀಸಸ್‌ನ ಬಗ್ಗೆ ನುಡಿಯಲು ನೀವು ನನಗೆ ಹೇಳಬಹುದು. ಆದರೆ ನಾನು ಆ ಜಾಗತಿಕ ಅನುರಾಗ ಗೀತವನ್ನು ಈ ಪೊಳ್ಳು ಕೊಳಲಿನಲ್ಲೆಂತು ನಿನದಿಸಲಿ ?

ಜೀಸಸ್‌ನಿಗೆ ದಿನದ ಪ್ರತಿಯೊಂದರಲ್ಲಿಯೂ ದೇವರ ಅಸ್ತಿತ್ವದ ಜಾಗ್ರತಿಯಿತ್ತು. ಮೋಡಗಳಲ್ಲಿಯೂ, ನೆಲದ ಮೇಲಿನ ಅವುಗಳ ನೆಳಲಿನಲ್ಲಿಯೂ ಅವನು ದೇವದೇವನನ್ನು ಕಾಣುತ್ತಿದ್ದ. ಪ್ರಶಾಂತ ಕೊಳದಲ್ಲಿ ದೇವದೇವನ ಮುಖದ ಪಡಿನೆಳಲನ್ನೂ, ಉಸುಕಿನಲ್ಲಿ ಅವನ ಪಾದಗಳ ಅಸ್ಪಷ್ಟ ಗುರುತನ್ನೂ ಅವನು ನೋಡಿದ್ದ; ಆಗಾಗ ಅವನು, ದೇವನ ಪವಿತ್ರಾಕ್ಷಿಗಳನ್ನು ಈಕ್ಷಿಸಲೆಂದು, ತನ್ನ ಕಂಗಳನ್ನು ಮುಚ್ಚಿಕೊಳ್ಳುತ್ತಿದ್ದ.

ಇರುಳು ದೇವದನಿಯಲ್ಲಿ ಅವನೊಡನೆ ನುಡಿಯುತ್ತಿತ್ತು. ತನ್ನನ್ನು ಕೂಗಿ ಕರೆಯುತ್ತಿರುವ ದೇವದೂತನ ದನಿಯನ್ನು ಅವನು ಕೇಳಿದ್ದ. ಅವನು ನಿದ್ದೆಯಲ್ಲಿ ಸ್ತಬ್ಧನಾದಾಗ ಕೂಡ ಕನಸಿಲ್ಲಿ ಸ್ವರ್ಗೀಯ ಕಿವಿಮಾತುಗಳನ್ನು ಕೇಳುತ್ತಿದ್ದ.

ಹಗಲೆಲ್ಲ ಅವನು ನಮ್ಮೊಡನೆ ಸುಖದಿಂದಿರುತ್ತಿದ್ದ; ಅವನು ನಮ್ಮನ್ನು ಬಂಧುಗಳೆಂದು ಕರೆಯುತ್ತಿದ್ದ.

ನೋಡಿ, ಪ್ರಪ್ರಥಮ ಶಬ್ದವಾದ ಅವನೇ, ನಿನ್ನೆ ನುಡಿದ ಉಲಿಗಳಂತಿದ್ದ ನಮ್ಮನ್ನು ಬಂಧುಗಳೆಂದು ಕರೆದ.

ನಾನು ಏಕೆ ಅವನನ್ನು 'ಪ್ರಪ್ರಥಮ ಶಬ್ದ'ವೆಂದು ಕರೆದೆನೆಂದು ನೀವು ಕೇಳಬಹುದು.

ನಾನದನ್ನು ವಿವರಿಸುವೆ, ಕೇಳಿ:

ಎಲ್ಲಕ್ಕೂ ಮೊದಲು ದೇವನು 'ಸ್ಥಳ'ದಲ್ಲಿ ಚಲಿಸಿದ; ಅವನ ಈ ಅನಂತ ಚಲನೆಯಿಂದ ಭೂಮಿಯುದ್ಭವಿಸಿತು. ಋತುಗಳೂ ಮೈದಾಳಿದವು.

ದೇವನು ಇನ್ನೂ ಚಲಿಸಿದ; ಜೀವನ ಹರಿದು ಬಂತು. ಬಾಳ ಬಯಕೆಯು ಎತ್ತರ ಆಳಗಳನ್ನು ಶೋಧಿಸಿತು, ತನಗಿಂತಲೂ ಮಿಗಿಲಾಯಿತು.

ಆಗ ದೇವನು ನುಡಿದ ಅವನ ನುಡಿಗಳು 'ನರ'ವಾದವು. ದೇವಾತ್ಮದಿಂಮೊಗೆದ ಆತ್ಮವೇ 'ನರ'ನಾದ.

ದೇವರು ಹೀಗೆ ಮಾತಾಡಿದಾಗ 'ಕ್ರೈಸ್ತ' ಎಂಬದೇ ಅವನ ಮೊದಲ ಮಾತಾಗಿತ್ತು; ಹಾಗೂ ಅದು ಪೂರ್ಣವಿತ್ತು. ನಾಝರೆಥದ ಜೀಸಸ್ ಈ ಭೂಮಿಗೆ ಬಂದಾಗ, ಆ ಮೊದಲ ಮಾತೇ ಆಡಲ್ಪಟ್ಟಿತು. ಹಾಗೂ ಅದರ ದನಿಯೇ ರಕ್ತ–ಮಾಂಸವಾಗಿ ಮೈವೆತ್ತಿತು.

ಉಪವನದೊಳಗಿನ ಒಂದು ಸೇಬುಗಿಡವು ಉಳಿದವುಗಳಿಗಿಂತ ಒಂದು ದಿನ ಮೊದಲೇ ಚಿಗಿತು ಹೂತು ಕಾಯಿ ಬಿಡುವಂತೆ ದೇವನು ಮಾನವನಿಗುಸುರಿದ ಮೊದಲ ಶಬ್ದವೇ ಅಭಿಷಿಕ್ತ ಜೀಸಸ್‌ನಾಗಿದ್ದ. ದೇವದೋಟದಲ್ಲಿ ಆ ದಿನವೇ ಒಂದು ಮನ್ವಂತರವಾಗಿತ್ತು

ನಾವೆಲ್ಲರೂ–ಗಂಡಿರಲಿ, ಹೆಣ್ಣಿರಲಿ,–ಆ ಪರಮೋನ್ನತನ ಸಂತಾನವಾಗಿದ್ದೇವೆ; ಆದರೆ ಆ ಅಭಿಷಿಕ್ತನೊಬ್ಬನು ಮಾತ್ರ ಅವನ ಪ್ರಥಮ ಸಂತಾನವಾಗಿದ್ದು, ಅವನೇ ನಾಝರೆಥದ ಜೀಸಸ್‌ನಲ್ಲಿ ಮೈವೆತ್ತು ನಮ್ಮ ಮಧ್ಯೆ ಅಡಿಯಾಡಿದ್ದಾನೆ, ನಮ್ಮನ್ನು ಈಕ್ಷಿಸಿದ್ದಾನೆ.

ಇದನ್ನೆಲ್ಲ ನಾನು ನಿಮಗೆ ಹೇಳುತ್ತಿರುವುದು, ನೀವು ಕೇವಲ ಮನಸಿನಲ್ಲಿಯಲ್ಲ, ಆತ್ಮದಲ್ಲಿ ತಿಳಿದುಕೊಳ್ಳಲೆಂದು. ಮನಸು ಕೇವಲ ತೂಗುವುದು, ಅಳೆಯುವುದು; ಆದರೆ ಆತ್ಮವು ಮಾತ್ರ ಜೀವನದ ಹೃದಯವನ್ನೇ ಮುಟ್ಟಿ ತಟ್ಟಿ ಆ ಗೌಪ್ಯವನ್ನು ಅಪ್ಪುವುದು, ಹಾಗೂ ಆ ಆತ್ಮ ಬೀಜವೇ ಅಮರವಾದುದು.

ಗಾಳಿ ಬೀಸಬಹುದು, ಬಳಿಕ ನಿಲ್ಲಲೂ ಬಹುದು; ಸಾಗರವು ಉಕ್ಕೇರಬಹುದು. ಬಳಿಕ ದಣಿಯಲೂ ಬಹುದು; ಆದರೆ ಜೀವನದ ಹೃದಯವು ಒಂದು ಶಾಂತ ಮತ್ತು ಪಾವನ ಗೋಲವಾಗಿದ್ದು ಅದರಲ್ಲಿ ಬೆಳಗುತ್ತಿದ್ದ ಚಿಕ್ಕೆ ನಿರಂತರವಾಗಿರುವದು.

## ೫೩. ಪಾಂಪೇಯಿಯ ಮ್ಯಾನಸ್: ಒಬ್ಬ ಗ್ರೀಕನಿಗೆ—

ತಮ್ಮ ನೆರೆಹೊರೆಯವರಾದ ಫೊನೀಶಿಯನ್ ಹಾಗೂ ಅರಬರಂತೆ ಇವರೂ ಜನರೂ ತಮ್ಮ ದೇವರನ್ನು, ಚಣಹೊತ್ತು ಗಾಳಿಯಲ್ಲಿ ವಿಶ್ರಾಂತಿ ಪಡೆಯಲು ಬಿಡಲಾರರು.

ತಮ್ಮ ದೈವತದ ಬಗ್ಗೆ ಅವರು ಅತಿ ಚಿಂತಿತರೂ, ಒಬ್ಬರೊಬ್ಬರ ಪ್ರಾರ್ಥನೆ, ಪೂಜೆ, ಯಜ್ಞಗಳಲ್ಲಿ ಅವರು ಅತಿ ನಿರೀಕ್ಷಿತರೂ ಆಗಿಪ್ಪಾರೆ.

ರೋಮನ್ನರಾದ ನಾವು ನಮ್ಮ ದೇವರ ಬಗ್ಗೆ ಸಂಗನುರವರಿ ಕಲ್ಲಿನ ಗುಡಿಗಟ್ಟುತ್ತಿರುವಾಗ ಈ ಜನರು ತಮ್ಮ ದೇವರ ಸ್ವಭಾವದ ಬಗ್ಗೆ ವಾದ ವಿವಾದ ನಡೆಸಿರುತ್ತಾರೆ. ನಾವು ಆನಂದತುಂದಿಲರಾದಾಗ, ಜ್ಯುಪಿಟರ, ಜುನೋ, ಮಾರ್ಸ್, ಹಾಗೂ ವೀನಸ್ ದೇವರ ವೇದಿಕೆಗಳ ಸುತ್ತುನುತ್ತು ಹಾಡಿ ಹಾಡಿ ಕುಣಿಯುತ್ತಿರುತ್ತೇವೆ; ಆದರೆ ಈ ಜನರು ತಮ್ಮ ಪರವಶತೆಯಲ್ಲಿ ಹೆಣದರಿವೆಯಿಂದ ಮೈಮುಚ್ಚಿಕೊಂಡು ಹಣೆಗೆ ಬೂಟ ಬಡಿದುಕೊಂಡು ಕೂಡುತ್ತಾರೆ; ತಮ್ಮ ಹುಟ್ಟಿದ ಹಬ್ಬದ ದಿನದಲ್ಲಿಯೂ ಕೂಡ ಪ್ರಲಾಪ ನಡೆಸಿರುತ್ತಾರೆ.

ದೇವರು ಆನಂದಾತ್ಮನೆಂದು ತೋರಿಸಿಕೊಟ್ಟ ಜೀಸಸ್‌ನನ್ನು ಕೂಡ ಇವರು ಗೋಳು ಗೊಳಿಸಿದರು, ಮರಣಕ್ಕೀಡು ಮಾಡಿದರು.

ಈ ಜನರು ತಮ್ಮ ನಲಿವಿನ ದೇವನೊಡನೆ ನಲಿಯಲಾರರು; ಇವರಿಗೆ ತಮ್ಮ ನೋವಿನ ದೇವನದು ಮಾತ್ರ ಗೊತ್ತು.

ಜೀಸಸ್‌ನ ಮಿತ್ರರು, ಶಿಷ್ಯರು, ಯಾರಿಗೆ ಅವನ ಉಲ್ಲಾಸವು ತಿಳಿದಿತ್ತೋ, ಯಾರು ಅವನ ನಗೆಯನ್ನು ಕೇಳಿದ್ದರೋ, ಇವರು ಕೂಡ ಅವನ ದುಃಖದ ಪ್ರತಿಮೆ ಮಾಡಿ ಆ ಪ್ರತಿಮೆಯನ್ನೇ ಪೂಜಿಸುತ್ತಾರೆ.

ಇಂಥ ಪೂಜೆಯಿಂದ ಇವರು ತಮ್ಮ ದೈವತದೆಡೆಗೆ ಹೋಗಿ ನಿಲುಕದೆ ಆ ದೈವತವನ್ನೇ ತಮ್ಮೊಡನೆ ಇಳಿಸಿಕೊಂಡು ಬಿಡುತ್ತಾರೆ.

ಹೇಗಿದ್ದರೂ, ಸಾಕ್ರೆಟಿಸ್‌ನಂತೆ ಇದ್ದ ಈ ತತ್ವಜ್ಞಾನಿ ಜೀಸಸ್‌ನಿಗ ತನ್ನ ಜನಾಂಗದ ಮೇಲೆ, ಬಹುಶಃ ಉಳಿದ ಜನಾಂಗಗಳ ಮೇಲೆ ಕೂಡ, ಅಧಿಕಾರ ಪ್ರಭಾವವಿರಬೇಕಿತ್ತು.

ಏಕೆಂದರೆ ನಾವೆಲ್ಲರೂ, ದುಃಖಿತ ಹಾಗೂ ಅಲ್ಪಸಂಶಯಿತ ಪ್ರಾಣಿಗಳು. "ದೇವರೊಡನೆ ನಾವು ಆನಂದತುಂದಿಲರಾಗೋಣ" ಎಂದು ಒಬ್ಬ ಮನುಷ್ಯ ನುಡಿದಾಗ ನಾವವನ ನುಡಿಗಳಿಗೆ ಕಿವಿಗೊಡದಿರಲಾರೆವು. ಹೀಗಿದ್ದು ಈ ಮನುಷ್ಯನ ನೋವೇ ಒಂದು ಪ್ರಕ್ರಿಯೆ, ಒಂದು ಸಂಸ್ಕಾರವಾಗಿ ಪರಿಣಮಿಸಿದ್ದು ಆಶ್ಚರ್ಯಕರವಾಗಿದೆ.

ಈ ಜನರು, ಅಡವಿಯಲ್ಲಿ ಕೊಲೆಗೀಡಾದ ಇನ್ನೊಬ್ಬ ಎಡೊನಿಸ್‌ನನ್ನು ಶೋಧಿಸಿ ತೆಗೆದು, ಅವನ ಕೊಲೆಯನ್ನೂ ಆಚರಿಸಬಹುದು. ಅವನ ನಗೆಗೆ ಇವರು ಮನಗೊಡದಿರುವುದು ಕನಿಕರಪಡುವಂಥದು.

ಒಬ್ಬ ರೋಮನ್ನನು ಗ್ರೀಕನಿಗೆ ಎಂತೋ ಅಂತೆ ನಾವೂ ಒಪ್ಪಿಕೊಳ್ಳೋಣ. ಅಥೆನ್ಸದ ಬೀದಿಯಲ್ಲಿಯ ಸಾಕ್ರೆಟಿಸನ ನಗೆಯು ನಮಗೆ ನಮ್ಮಷ್ಟಕ್ಕೆ ಕೂಡ ಕೇಳಿಸುತ್ತದೆಯೇ? ಡಿಯಾನಿಸಸ್‌ದ ಥಿಯೇಟರದಲ್ಲಿ ಕೂಡ, ನಾವು ಎಂದಾದರೂ ಆ ವಿಷಪೂರಿತ ಬಟ್ಟಲವನ್ನು ಮರೆಯಬಲ್ಲೆವೇ?

ನಮ್ಮ ಸಕಲ ಮಹಾಪುರುಷರ ಶೋಚನೀಯ ಕೊನೆಯನ್ನು ನೆನೆಸಿಕೊಳ್ಳುವ ರಸನಿಮಿಷಾನುಭವಕ್ಕೆ ಹಾಗೂ ಬೀದಿ ಮೂಲೆಗಳಲ್ಲಿ ನಿಂತು ತಮ್ಮ ತಮ್ಮ ತೊಂದರೆಗಳನ್ನು ಕುರಿತು ಚರ್ಚಿಸುವುದಕ್ಕೆ ನಮ್ಮ ಪೂರ್ವಜರಂತೆಯೇ ನಾವೂ ನಿಲ್ಲಬಲ್ಲೆವೆ?

## ೫೪. ಪಾಂಟಿಯಸ್ ಪಾಯ್‌ಲೆಟಸ್

ಅವನನ್ನು ನನ್ನೆದುರು ತರುವುದಕ್ಕೂ ಮೊದಲು, ಅವನ ಬಗ್ಗೆ ನನ್ನ ಪತ್ನಿಯು ಅನೇಕ ಸಲ ನುಡಿದಿದ್ದಳು; ಆದರೆ ಅದು ನನನ್ನೆ ಸಂಬಂಧಿಸಿದ್ದಿಲ್ಲ.

ನನ್ನ ಪತ್ನಿ ಓರ್ವ ಕನಸಿಗಳಾಗಿದ್ದಳು; ಆಕೆಯ ಸರಿಸಮದ ರೋಮನ್ ಸ್ತ್ರೀಯರಂತೆ ಆಕೆಯೂ ಪೌರ್ವಾತ್ಯ ಸಂಸ್ಕೃತಿ, ಕರ್ಮಠತೆಗಳಿಗೆ ಮಾರುಹೋಗಿದ್ದಳು. ಈ ರೀತಿಸೀತಿಗಳು ಸಾಮ್ರಾಜ್ಯಕ್ಕೆ ಗಂಡಾಂತರಕಾರಿಯಾಗಿದ್ದವು. ನಮ್ಮ ಸ್ತ್ರೀಯರ ಹೃದಯಪ್ರವೇಶದ ಹಾದಿಯನ್ನು ಕಂಡುಕೊಂಡಾಗಲೇ ಅವರು ವಿನಾಶಕಾರಿಗಳಾಗಿ ಪರಿಣಮಿಸಿದರು.

ಆರೇಬಿಯಾದ ಹಿಕ್ಸಾಸರು ತಮ್ಮ ಮರುಭೂಮಿಯ ದೇವರನ್ನು ಇಜಿಪ್ತಕ್ಕೆ ತಂದಾಗಲೇ ಅದರ ನಾಶವಾಯಿತು ಸಿರಿಂಜಾ ಹದ್ದಿನಿಂದ ಆಸ್ಪೇಟಳೂ ಆಕೆಯ ಸಪ್ತ ಸೇವಿಕೆಯರೂ ಗ್ರೀಸಕ್ಕೆ ಬಂದಾಗಲೇ ಅದು ಭಾರವಾಗಿ ಭೂಮಿಗಿಳಿದು ಹುಡಿಗೂಡಿ ಹೋಯಿತು.

ಜೀಸಸ್‌ನ ಬಗೆಗೋ, ಅವನೋರ್ವ ಅಪರಾಧಿಯೆಂದೂ, ತನ್ನ ದೇಶದ ಹಾಗೂ ರೋಮದ ವೈರಿಯೆಂದೂ ನನ್ನೆದುರು ತಂದು ನಿಲ್ಲಿಸುವ ಮೊದಲು ನಾನೆಂದೂ ಅವನನ್ನು ನೋಡಿರಲ್ಲಿಲ್ಲ.

ಅವನ ಮೈ ಕೈಗಳನ್ನು ಹಗ್ಗಗಳಿಂದ ಬಂಧಿಸಿ ಅವನನ್ನು ನ್ಯಾಯಾಲಯದಲ್ಲಿ ತರಲಾಗಿತ್ತು.

ನಾನು ವೇದಿಕೆಯ ಮೇಲೆ ಕುಳಿತಿದ್ದೆ; ಅವನು ನನ್ನೆಡೆಗೆ ಸುದೀರ್ಘ ಹಾಗೂ ಸುನಿಶ್ಚಿತ ಹೆಜ್ಜೆ ಹಾಕುತ್ತ ನಡೆದು ಬಂದ. ಬಳಿಕ ಅವನು ಸ್ಥೈರ್ಯ ದಿಂದ ನಿಂತುಕೊಂಡು. ಮುಖವನ್ನು ಮೇಲೆತ್ತಿದ.

ಆ ಕ್ಷಣಕ್ಕೆ ನನಗೇನಾಯಿತೋ ನನಗೇ ತಿಳಿಯದಾಯಿತು, ಆದರೆ ನಾನು ನನ್ನ ಆಸನವನ್ನು ಬಿಟ್ಟೆದ್ದು, ಅವನೆಡೆಗೆ ಹೋಗಿ ಅವನ ಪಾದವಟ ಬೀಳಬೇಕೆಂದು, ನನ್ನ ಇಚ್ಛೆ ಇಲ್ಲದಿದ್ದರೂ, ನನಗೆ ಆಸೆಯಾಯಿತು.

ರೋಮಕ್ಕಿಂತಲೂ ಮಹತ್ತ್ವದ ಮಾನವನಾದ ಸೀಝರನೇ ಆ ಮಂದಿರವನ್ನು ಪ್ರವೇಶಿಸಿದನೋ ಎಂಬಂತೆ ನನಗೆ ಭಾಸವಾಯಿತು.

ಆದರೆ ಆ ಭಾಸ ಕ್ಷಣಿಕ ಮಾತ್ರ. ಆ ಮೇಲೆ, ರಾಜದ್ರೋಹಕ್ಕಾಗಿ ತನ್ನ ಜನರಿಂದಲೇ ತಂದು ನಿಲ್ಲಿಸಲ್ಪಟ್ಟ ಒಬ್ಬ ಸಾಮಾನ್ಯ ಮಾನವನಂತೆ ಅವನು ಕಂಡ. ಹಾಗೂ ನಾನು ಅವನ ಆಡಳಿತಾಧಿಕಾರಿ, ನ್ಯಾಯಾಧಿಕಾರಿ ಯಾಗಿದ್ದೆ.

ನಾನವನನ್ನು ಪ್ರಶ್ನಿಸಿದೆ; ಆದರವನು ಉತ್ತರಗುಡಲಿಲ್ಲ. ಅವನು ಕೇವಲ ನನ್ನೆಡೆಗೆ ನೋಡಿದ ಮಾತ್ರ. ಅವನೇ ನನ್ನ ಆಡಳಿತಾಧಿಕಾರಿ, ನನ್ನ ನ್ಯಾಯಾಧಿಕಾರಿ ಎಂಬಂತೆ ಅವನಾ ದೃಷ್ಟಿಯಲ್ಲಿ ಕನಿಕರವಿತ್ತು.

ಬಳಿಕ ಹೊರಗಿನಿಂದ ಜನಜಂಗುಳಿಯ ಕೂಗೆದ್ದಿತು. ಆದರೂ ಅವನು ಶಾಂತನಾಗಿಯೇ ಇದ್ದ, ಹಾಗೂ ಅವನು ಕಂಗಳಲ್ಲಿ ಕನಿಕರದುಂಬಿಕೊಂಡು ನನ್ನನ್ನೇ ನೋಡುತ್ತಿದ್ದ.

ನಾನು ಆ ಭವನದ ಸೋಪಾನವೇರಿ ಹೊರಬಂದೆ; ನನ್ನನ್ನು ಕಂಡೊಡನೆ ಜನಜಂಗುಳಿಯ ಕೂಗು ನಿಂತು ಹೋಯಿತು. ನಾನೆಂದೆ: "ಇವನ ಬಗ್ಗೆ ನಿಮಗೇನು ಹೇಳಬೇಕಾಗಿದೆ?"

ಅವರು ಏಕಕಂಠದಿಂದ ಕೂಗಿಕೊಂಡರು: "ನಾವಿವನನ್ನು ಶೂಲಕ್ಕೇರಿಸಬೇಕು. ಅವನು ನಮ್ಮ ವೈರಿಯಾಗಿದ್ದಾನೆ. ರೋಮದ ವೈರಿಯೂ ಆಗಿದ್ದಾನೆ."

ಬೇರೆ ಕೆಲವರು ಕೂಗಿಕೊಂಡರು: "ಇವನು ನಮ್ಮ ದೇಗುಲಗಳನ್ನು ಹಾಳು ಮಾಡುವೆನೆಂದು ಹೇಳಲಿಲ್ಲವೇ? ರಾಜ್ಯಾಧಿಕಾರವನ್ನು ಬಯಸಿದವನು ಇವನೇ ಅಲ್ಲವೇ? ಸೀಝರನನ್ನುಳಿದು ಬೇರೆ ಅರಸು ನಮಗೆ ಬೇಡ."

ಬಳಿಕ ನಾನು ಅವರನ್ನುಳಿದು ಪುನಃ ನ್ಯಾಯಾಲಯದೊಳಕ್ಕೆ ಬಂದೆ. ಅವನಿನ್ನೂ ಅಲ್ಲಿ ಹಾಗೆಯೇ ಏಕಾಕಿಯಾಗಿ ತಲೆಯೆತ್ತಿ ನಿಂತುಕೊಂಡಿದ್ದನ್ನು ಕಂಡೆ.

ಒಬ್ಬ ಗ್ರೀಕ ತತ್ವಜ್ಞಾನಿಯು "ಏಕಾಕಿಯೇ ಸಮರ್ಥತಮ ಮಾನವ" ಎಂದು ಹೇಳಿದ್ದನ್ನು ನಾನು ಓದಿದ್ದು ನನ್ನ ನೆನಪಿಗೆ ಬಂತು. ಆ ಕ್ಷಣದಲ್ಲಿ ಆ ನಾಝರೀನನು ತನ್ನ ಜನಾಂಗಕ್ಕಿಂತಲೂ ಮಹತ್ತಮನಾಗಿದ್ದ.

ಅವನ ಬಗ್ಗೆ ನನಗೆ ದಯೆ ಎನಿಸಲಿಲ್ಲ; ಅವನು ನನ್ನ ದಯೆಯ ಆಚೆನವನಾಗಿದ್ದ.

ನಾನವನಿಗೆ ಕೇಳಿದೆ: "ನೀನೇ ಜ್ಯೂ ಜನರ ಜನಪನೊ?"

ಅವನು ಒಂದೂ ಮಾತನ್ನೇ ಆಡಲಿಲ್ಲ.

ಮತ್ತೆ ನಾನು ಕೇಳಿದೆ: 'ನಾನೇ ಜ್ಯೂ ಜನರ ಜನಪ'ನೆಂದು ನೀನು ಹೇಳುತ್ತಿದ್ದಿಲ್ಲವೇ?

ಅವನು ನನ್ನೆಡೆಗೆ ನೋಡಿದ.

ಬಳಿಕ ಶಾಂತಸ್ವರದಿಂದ ನುಡಿದ: "ನಾನು ಜನಪ ಎಂದು ನೀನೇ ನಿನ್ನಷ್ಟಕ್ಕೆ ಘೋಷಿಸಿದಿ. ಒಂದುವೇಳೆ ಈ ಕೊನೆಗೆಂದೇ ನಾನು ಜನಿಸಿರಬಹುದು, ಈ ಕಾರಣಕ್ಕಾಗಿಯೇ, ಸತ್ಯದ ಬಗ್ಗೆ ನಾನು ಸಾಕ್ಷ್ಯ ನುಡಿಯಲು ಬಂದಿರಬಹುದು."

ಇಂಥ ಹೊತ್ತಿನಲ್ಲಿಯೂ ಸತ್ಯದ ಬಗ್ಗೆ ಆಡುತ್ತಿರುವ ಇವನನ್ನು ನೋಡಿರಿ!

ಅಶಾಂತನಾಗಿ ನಾನು ಅವನಿಗೆ, ಒಂದು ರೀತಿಯಲ್ಲಿ ನಾನೇ ನನಗೆ, ಕೇಳಿದೆ: "ಸತ್ಯವೆಂದರೇನು? ಹಾಗೂ ಕರ್ಮಚಾರಿಯ ಹಸ್ತವು ಈಗಾಗಲೇ ಎರಗಿದ ನಿರಪರಾಧಿಗೆ ಯಾವದು ಸತ್ಯ?"

ಜೀಸಸ್‌ನು ಧೀರತೆಯಿಂದ ನುಡಿದ: "ಸತ್ಯ ಹಾಗೂ ಆತ್ಮಗಳನ್ನುಳಿದು ಯಾರೂ ಜಗತ್ತನ್ನಾಳಲಾರರು."

ನಾನವನಿಗೆಂದೆ: "ನೀನೇ ಆ ಆತ್ಮನೋ?"

ಅವನು ಉತ್ತರಿಸಿದ: "ಬರಿ ನಾನಷ್ಟೇ ಏಕೆ, ನೀನೂ ಕೂಡ ಆತ್ಮನೇ; ಆದರೆ ಅದು ನಿನಗೆ ತಿಳಿದಿಲ್ಲ."

ರಾಜ್ಯದ ಸಲುವಾಗಿ ನಾನು, ತಮ್ಮ ಪುರಾತನ ಕರ್ಮಠತೆಯ ಅಸೂಯೆಯ ಸಲುವಾಗಿ ಈ ಜನರು ಒಬ್ಬ ನಿರಪರಾಧಿ ಮನುಷ್ಯನನ್ನು ಮರಣ ದಂಡನೆಗೆ ಗುರಿಮಾಡಲು ನಿಂತಿರುವಾಗ ಸತ್ಯವೆಲ್ಲಿದೆ ಹಾಗೂ ಆತ್ಮವೆಲ್ಲಿದೆ?

ಸ್ವಪರಿಪೂರ್ಣತೆಯತ್ತ ಸಾಗಿರುವ ಸತ್ಯದ ಎದುರು ಯಾವನೇ ಮಾನವ, ಯಾವದೇ ಜನಾಂಗ, ಯಾವದೇ ಸಾಮ್ರಾಜ್ಯ ತಡೆದು ನಿಲ್ಲಲಾರದು.

ನಾನು ಮತ್ತೆ ಅವನಿಗೆ ಕೇಳಿದೆ: "ನೀನೇ ಜ್ಯೂ ಜನರ ಜನಪನೋ?"

ಅವನು ಉತ್ತರಿಸಿದ: "ನಿನ್ನಷ್ಟಕ್ಕೆ ನೀನೇ ಈ ಮಾತು ಹೇಳುತ್ತಿದ್ದೀ. ಈ ಕ್ಷಣಕ್ಕೆ ಮೊದಲು ನಾನು ಜಗತ್ತನ್ನೇ ಗೆದ್ದಿರುತ್ತೇನೆ."

ಅವನು ಆಡಿದ ಮಾತುಗಳಲ್ಲೆಲ್ಲ ಇದೊಂದೇ ಮಾತು ಮಾತ್ರ—ರೋಮವೊಂದೇ ಮಾತ್ರ ಜಗತ್ತನ್ನು ಗೆದ್ದಿತ್ತೆಂಬಂತೆಯೇ— ಅನುಚಿತವಾಗಿತ್ತು.

ಆದರೀಗ ಮತ್ತೆ ಜನಜಂಗುಳಿಯ ಕೂಗು ಎದ್ದಿತು. ಮೊದಲಿಗಿಂತಲೂ ಹೆಚ್ಚು ಗದ್ದಲವಾಯಿತು.

ನಾನು ನನ್ನ ಆಸನ ಬಿಟ್ಟೇಳಿಯುತ್ತ ಅವನಿಗೆಂದೆ: "ನನ್ನನ್ನನುಸರಿಸಿ ಬಾ."

ಮತ್ತೆ ನಾನು ಆ ಅರಮನೆಯ ಮೆಟ್ಟಿಲುಗಳ ಮೇಲೆ ಬಂದುನಿಂತೆ; ಅವನು ನನ್ನ ಬದಿಯಲ್ಲಿ ಬಂದುನಿಂತ.

ಜನರು ಅವನನ್ನು ಕಂಡೊಡನೆಯೆ ಗುಡುಗಿನ ಗದ್ದರಣೆಯಂತೆ ಗದ್ದರಿಸಿದರು. ಅವರಾಗಲಭೆಯಲ್ಲಿ "ಅವನನ್ನು ಶೂಲಕ್ಕೇರಿಸಿರಿ, ಅವನನ್ನು ಶೂಲಕ್ಕೇರಿಸಿರಿ" ಎಂಬುದನ್ನುಳಿದು ನನಗೇನೂ ಕೇಳಿಬರಲಿಲ್ಲ.

ಬಳಿಕ ನಾನು ಅವನನ್ನು ತಂದು ನನಗೊಪ್ಪಿಸಿದ ಪಾದ್ರಿಗಳ ಕೈಯಲ್ಲಿಯೇ ಅವನನ್ನು ತಿರುಗಿ ಒಪ್ಪಿಸಿ ಅವರಿಗೆಂದೆ: "ಈ ನ್ಯಾಯವಂತ ಮನುಷ್ಯನಿಗೆ ನಿಮ್ಮ ಬಯಕೆಯೆಂತೋ ಅಂತೆ ಗೈಯಿರಿ. ಇದೇ ನಿಮ್ಮ ಬಯಕೆಯಾಗಿದ್ದಲ್ಲಿ ನಿಮ್ಮೊಡನೆ ಅವನ ರಕ್ಷಣೆಗಾಗಿ ರೋಮದ ಸೈನಿಕರನ್ನು ಕರೆದೊಯ್ಯಿರಿ."

ಬಳಿಕ ಅವರು ಅವನನ್ನು ಸ್ವಾಧೀನಪಡಿಸಿಕೊಂಡರು. ಶೂಲದ ಮೇಲೆ ಅವನ ಶಿರದ ಮೇಲ್ಭಾಗದಲ್ಲಿ "ನಾಝರೆಥದ ಜೀಸಸ್, ಜ್ಯೂ ಜನರ ಜನಪ" ಎಂದು ಬರೆಯಲು ವಿಧಿಸಿದೆ. ಅದರ ಬದಲು ನಾನು "ನಾಝರೆಥದ ಜೀಸಸ್, ಒಬ್ಬ ಜನಪ" ಎಂದೆನ್ನಬೇಕಾಗಿತ್ತು.

ಬಳಿಕ ಜೀಸಸ್ ಬತ್ತಲೆಗೊಳಿಸಲ್ಪಟ್ಟ, ತಿವಿಯಲ್ಪಟ್ಟ, ಹಾಗೂ ಶೂಲಕ್ಕೇರಿಸಲ್ಪಟ್ಟ.

ಅವನನ್ನುಳಿಸಿಕೊಳ್ಳುವುದು ನನ್ನ ಕೈಯಲ್ಲಿತ್ತು; ಆದರೆ ಅವನನ್ನುಳಿಸಿಕೊಂಡಿದ್ದರೆ ಕ್ರಾಂತಿಗೆ ಕಾರಣವಾಗುತ್ತಿತ್ತು. ಗೆದ್ದ ಜನಾಂಗದ ಧಾರ್ಮಿಕ ಸಂಶಯಗಳ ಬಗ್ಗೆ ಅಸಹನೆಯನ್ನು ತಾಳದಿರುವದು ರೋಮನ್ ಪ್ರಾಂತದ ಗವ್ಹರ್ನರನಿಗೆ ಯಾವಾಗಲೂ ಜಾಣತನದ್ದಾಗಿರುವುದು.

ಆ ಮನುಷ್ಯ ಒಬ್ಬ ಕ್ಷೋಭಕಾರಿಗಿಂತಲೂ ಹೆಚ್ಚಿನವನಾಗಿದ್ದನೆಂದು ಇಂದೂ ನಾನು ನಂಬುತ್ತೇನೆ. ನಾನು ಆ ನಿರ್ಣಯವಿತ್ತುದುದು ನನ್ನ ಮನಸ್ಸಿನಂತಲ್ಲ; ಆದರದು ರೋಮದ ಸಲುವಾಗಿ ಇತ್ತು.

ಮುಂದೆ ಕೆಲವೇ ದಿನಗಳಲ್ಲಿ ನಾವು ಸಿರಿಯಾ ಬಿಟ್ಟು ಹೊರಟು ಹೋದೆವು. ಆ ದಿನದಿಂದಲೂ ನನ್ನ ಪತ್ನಿ ದುಃಖೀ ಸ್ತ್ರೀಯಾಗಿಬಿಟ್ಟಿದ್ದಳು. ಹಲಕೆಲವು ಸಲ, ನಮ್ಮ ಈ ತೋಟದಲ್ಲಿ ಕೂಡ ನಾನು ಆಕೆಯ ಮುಖದಲ್ಲಿ ದುಃಖಾಂತ ಚಿಹ್ನೆಗಳನ್ನು ನೋಡುತ್ತಿರುತ್ತೇನೆ.

ಆಕೆ ರೋಮನ್ ಸ್ತ್ರೀಯರ ಸಂಗಡ ಜೀಸಸ್‌ನನ್ನು ಕುರಿತು ಬಹಳ ಮಾತಾಡುತ್ತಾಳೆಂದು ನನಗೆ ಹೇಳಲ್ಪಟ್ಟಿತ್ತು.

ನಾನು ಮರಣದಂಡನೆ ನಿಧಿಸಿದ ಮನುಷ್ಯನೇ, ಆ ಛಾಯಾಲೋಕ ದಿಂದ ತಿರುಗಿ ಬಂದು ನನ್ನ ಸ್ವತಃದ ಮನೆಯೊಳಗೇ ಪ್ರವೇಶಿಸಿದ ಈ ಸಂಗತಿಯನ್ನು ನೋಡಿರಿ.

ನನ್ನೊಳಗೇ ನಾನು ಮತ್ತೆಮತ್ತೆ "ಸತ್ಯವಾವುದು? ಅಸತ್ಯವಾವುದು?" ಎಂದು ಪ್ರಶ್ನಿಸಿಕೊಳ್ಳುತ್ತಿರುವೆ.

ಇರುಳಿನ ನಿಶ್ಯಬ್ದ ಗಳಿಗೆಗಳಲ್ಲಿ ಆ ಸಿರಿಯನ್ನನು ನಮ್ಮನ್ನು ಗೆಲ್ಲುತ್ತಿರ ಬಹುದೇ ?

ಅದೆಂದೂ ಹಾಗಿರಲಾರದು, ಹಾಗಿರಬಾರದು.

ಏಕೆಂದರೆ, ನಮ್ಮ ಸ್ತ್ರೀಯರ ದುಃಸ್ವಪ್ನಗಳ ವಿಮಸ್ಥ ರೋಮವು ಬಾಳಿಬದುಕುವುದು ಅವಶ್ಯದ ಮಾತಾಗಿದೆ.

## ಎಫಿಸಸ್‌ದಲ್ಲಿ ಬಾರ್ಥೊಲೊಮಿವ್

ಗುಲಾಮರನ್ನೂ ಜಾತಿಭ್ರಷ್ಟರನ್ನೂ ಕುರಿತು ವ್ಯಾಖ್ಯಾನಮಾಡಿ ಚಿನ್ನಹಮಾಡಿ, ಅವರನ್ನು ಅವರ ಒಡೆಯರ ವಿರುದ್ಧ ಹುರಿಗೊಳಿಸುತ್ತಿದ್ದ ನೆಂದು ಜೀಸಸ್‌ನನ್ನು ಕುರಿತು ಅವನ ವಿರೋಧಿಗಳು ಹೇಳುತ್ತಾರೆ.

ಅವನೂ ಅಧಮನೇ ಆಗಿದ್ದುದರಿಂದಲೇ ತನ್ನಂತಹ ಅಧಮರನ್ನೇ ಅವನು ಆಹ್ವಾನಿಸಿದ; ಆದರೂ ಅವನು ತನ್ನಾ ಮೂಲವನ್ನು ಮುಚ್ಚಿಕೊಳ್ಳ ಲಾರದೆ ಹೋದ ಎಂದೂ ಅವರು ಹೇಳುತ್ತಾರೆ.

ಆದರೆ ನಾವು ಜೀಸಸ್‌ನ ಅನುಯಾಯಿಗಳನ್ನೂ, ಜೀಸಸ್‌ನ ನಾಯ ಕತ್ವವನ್ನೂ ಕುರಿತು ಯೋಚಿಸೋಣ.

ಮೊತ್ತ ಮೊದಲು, ಅವನು ತನ್ನ ಸಂಗಡಿಗರೆಂದು ಕೆಲವೇ ಜನರನ್ನು ಉತ್ತರನಾಡಿನಿಂದ ಆರಿಸಿಕೊಂಡಿದ್ದ; ಅವರು ಸತಂತ್ರರಾಗಿದ್ದರು. ಅವರು ಮೈಯಿಂದ ಗಟ್ಟಿಗರೂ, ಆತ್ಮದಿಂದ ಧಿಟ್ಟರೂ ಆಗಿದ್ದರಲ್ಲದೆ ಈ ಕಳೆದ ಎರಡಿಪ್ಪತ್ತು ವರ್ಷಗಳಲ್ಲಿ, ಸ್ವೇಚ್ಛೆಯಿಂದ ಹಾಗೂ ತಿರಸ್ಕಾರದಿಂದ ಮರಣ ವನ್ನೆದುರಿಸುವ ಧೈರ್ಯವಿತ್ತವರಿಗೆ.

ಇಂಥ ಜನರನ್ನು, ಗುಲಾಮರು, ಜಾತಿಭ್ರಷ್ಟರು ಎಂದು ನೀವು ಹೇಳುತ್ತೀರಾ?

ಲೆಬನಾನ, ಆರ್ಮೇನಿಯಾಗಳ ಅಭಿಮಾನೀ ರಾಜಪುತ್ರರು ತಮ್ಮ ಸ್ಥಾನಮಾನಗಳನ್ನು ಮರೆತಿದ್ದರೆಂದೇ ಜೀಸಸ್‌ನನ್ನು ದೇವರ ಪ್ರವಾದಿ ಎಂದು ಸ್ವೀಕರಿಸಿದರೆಂದು ತಿಳಿಯುವಿರಾ?

ಅಥವಾ ಆ್ಯಂಟಿಯೊಕ್, ಬಿಝಾಂಟಿಯುಮ್, ಅಥೆನ್ಸ್ ಹಾಗೂ ರೋಮಿನ ಉಚ್ಚಕುಲದ ಸ್ತ್ರೀಪುರುಷರು ಈ ಗುಲಾಮರ ನಾಯಕನ ದನಿಗೆ ಬೆದರಿ ನಿಲ್ಲುತ್ತಿದ್ದರೆಂದು ಬಗೆಯುವಿರಾ?

ಅಲ್ಲ, ನಾಝರೀನನು, ಒಡೆಯನ ವಿರುದ್ಧವೆದ್ದ ಸೇವಕನನ್ನೂ ಅಥವಾ ಸೇವಕರ ವಿರುದ್ಧವೆದ್ದ ಒಡೆಯನನ್ನೂ ಬೆಂಬಲಿಸುತ್ತಿದ್ದಿಲ್ಲ. ಮಾನವನ ವಿರುದ್ಧವೆದ್ದ ಯಾವನೇ ಮನುಷ್ಯನನ್ನೂ ಅವನು ಬೆಂಬಲಿಸುತ್ತಿದ್ದಿಲ್ಲ.

ಅವನು ಮಾನವಾತೀತ ಮಾನವನಾಗಿದ್ದ. ಅವನ ನರನರಗಳಲ್ಲಿಯ ಪ್ರವಾಹವು ಪ್ರೇಮ ಹಾಗೂ ಶಕ್ತಿಗಳನ್ನು ನಿನದಿಸುತ್ತಿತ್ತು.

ರಕ್ಷಕನಾಗಿರುವುದೇ ಘನತೆಯೆಂದೊಪ್ಪಿದಲ್ಲಿ, ಅವನು ಸಕಲ ಮಾನವರಿಗಿಂತಲೂ ಹೆಚ್ಚಿನ ಘನತೆಯವನಾಗಿದ್ದ. ವಿಚಾರದಲ್ಲಿ, ಉಚ್ಚಾರದಲ್ಲಿ, ಆಚಾರದಲ್ಲಿ, ಸ್ವಾತಂತ್ರ್ಯವಿದೆಯೆಂದೊಪ್ಪಿದಲ್ಲಿ ಅವನೇ ಸರ್ವರಿಗಿಂತಲೂ ಸರ್ವಸ್ವತಂತ್ರನಾಗಿದ್ದ. ಪ್ರೇಮಕ್ಕೊಳಕೊಳ್ಳುವ ಹೆಮ್ಮೆ, ಹಾಗೂ ಸದಾ ಸೌಮ್ಯತೆ, ಸುಪ್ರಸನ್ನತೆಯಲ್ಲಿದ್ದ ನಿರ್ಲಿಪ್ತತೆಗಳೇ, ಉಚ್ಚಕುಲದ ಹೆಗ್ಗುರುತಾಗಿದ್ದರೆ ಅವನು ಸಕಲರಿಗಿಂತಲೂ ಸರ್ವೋಚ್ಚ ಕುಲದವನಾಗಿದ್ದ.

ಶಕ್ತನೂ, ತ್ವರಿತ ಗತಿಯವನೂ ಮಾತ್ರವೇ ಪಂಥವನ್ನೂ, ಕವಿಪಟ್ಟವನ್ನೂ ಗೆದೆಯಬಲ್ಲನೆಂಬುದನ್ನೂ, ಹಾಗೂ ಜೀಸಸ್‌ನು, ತನ್ನ ಪ್ರೇಮಿಗಳಿಂದಷ್ಟೇ ಕಿರೀಟ ಧಾರಣ ಮಾಡಿಸಿಕೊಳ್ಳದೇ, ತನ್ನ ವೈರಿಗಳಿಂದಲೂ, ಅವರಿಗೆ ಗೊತ್ತಿಲ್ಲದಂತೆಯೇ ಮಾಡಿಸಿಕೊಳ್ಳುತ್ತಿದ್ದನೆಂಬುದನ್ನೂ ಮರೆಯದಿರಿ.

ಇಂದಿಗೂ ಕೂಡ, ಆರ್ಟೆಮಿಸ್‌ದ ದೇಗುಲಗಳ ಗರ್ಭಾಲಯಗಳಲ್ಲಿ ಅಲ್ಲಿಯ ಪಾದ್ರಿಣಿಯರಿಂದ, ಪ್ರತಿದಿನ ಅವನು ಕಿರೀಟಧಾರಣೆ ಮಾಡಿಸಿಕೊಳ್ಳುತ್ತಿದ್ದಾನೆ.

## ೫೩. ಮ್ಯಾಥ್ಯೂ

ಒಂದು ದಿನ ಸಂಜೆ, ಡೇವಿಡ್ ಗೋಪುರದ ಬಳಿಯಿರುವ ಸೆರೆಮನೆಯ ಬದಿಯಿಂದ ಜೀಸಸ್ ಹಾದುಹೋಗುತ್ತಿದ್ದ. ನಾವೂ ಅವನ ಹಿಂದೆ ಹಿಂದೆಯೇ ಹೊರಟಿದ್ದೆವು.

ಒಮ್ಮಿಲೆ ಅವನು ತಡೆದು ನಿಂತು, ಆ ಸೆರೆಮನೆ ಗೋಡೆಯ ಕಲ್ಲು ಗಳಿಗೆ ತನ್ನ ಗಲ್ಲವನ್ನು ಹಚ್ಚಿದ; ಮತ್ತು ಹೀಗೆ ನುಡಿದ :

"ಪೂರ್ವಕಾಲದ ನನ್ನ ಬಂಧುಗಳೇ, ನನ್ನ ಹೃದಯವು ಸಲಾಕೆ ಯಾಚೆಯಿರುವ ನಿಮ್ಮ ಹೃದಯಗಳೊಡನೆ ತುಡಿಯುತ್ತಲಿದೆ. ನೀವೂ ನನ್ನ ಸ್ವಾತಂತ್ರ್ಯದೊಳಗೆ, ಸ್ವತಂತ್ರರಾಗಿ, ನನ್ನೊಡನೆಯೂ ನನ್ನ ಸಂಗಡಿಗ ರೊಡನೆಯೂ ನಡೆದು ಬರುವಂತಾಗಬಹುದು.

"ನೀವು ಸಿಕ್ಕು ಬಿದ್ದಿದ್ದೀರಿ, ಆದರೆ ಒಂಟಿಯಾಗಿಲ್ಲ. ಓಣಿಯಲ್ಲಿ ತಿರುಗಾಡುವವರಲ್ಲಿಯೂ ಅನೇಕ ಕೈದಿಗಳಿದ್ದಾರೆ. ಅವರ ರೆಕ್ಕೆಗಳು ಕತ್ತರಿ ಸಲ್ಪಟ್ಟಿಲ್ಲ; ಆದರೆ ಕೋಳಿಗಳಂತೆ ಅವರು ಫಡಫಡಿಸುತ್ತಾರಲ್ಲವೆ ಅವರು ಉಡ್ಡಾಣ ಮಾಡಲಾರರು.

"ನನ್ನ ಬರಲಿರುವ ದಿನದ ಬಂಧುಗಳೇ, ಬೇಗನೇ ನಾನೂ ನಿಮ್ಮ ಕೋಣೆಗೆ ಬಂದು ನಿಮ್ಮ ಹೊರೆಗೆ ಹೆಗಲು ಕೊಡುವೆ. ಏಕೆಂದರೆ ನಿರಪರಾಧಿ ಗಳೂ ಅಪರಾಧಿಗಳೂ ಬೇರ್ಪಡಿಸಲ್ಪಟ್ಟಿಲ್ಲ ಹಾಗೂ ಮುಂಗೈಯ ಜೋಡೆಲುವಿ ನಂತೆ ಅವರೆಂದೂ ಜೋಡು ಬಿಡದಿರರು.

"ನನ್ನದೇ ಆದ ನನ್ನೀ ದಿನದ ಬಂಧುಗಳೇ, ನೀವು ಅವರ ಕಾರಣ ಪ್ರವಾಹದ ವಿರುದ್ಧ ಈಸಿದ್ದೀರಿ ಹಾಗೂ ಬಂಧಿಸಲ್ಪಟ್ಟದ್ದೀರಿ. ನಾನೂ ಕೂಡ ಆ ಪ್ರವಾಹದ ವಿರುದ್ಧ ಈಸುತ್ತೇನೆಂದು ಅವರೆನ್ನುತ್ತಾರೆ. ಬಹುಶಃ ನಾನೂ ಕೂಡ ನಿಯಮಭಂಗಿಗಳ ಮಧ್ಯೆ ನಿಯಮಭಂಗಿಯಾಗಿ ಬೇಗನೇ ನಿಮ್ಮೊಳಗೆ ಬಂದು ಬಿಡಬಹುದು.

"ಇನ್ನೂ ಬರದಿರುವ ನನ್ನ ದಿನದ ಬಂಧುಗಳೇ, ಈ ಗೋಡೆಗಳು ಉರುಳಿ ಬೀಳಲಿವೆ, ಮತ್ತು ಬೆಳಕೇ ಯಾರ ಕೊಡತಿಯಾಗಿರುವುದೋ ಹಾಗೂ ಗಾಳಿಯೇ ಯಾರ ಉಳಿಯಾಗಿರುವುದೋ ಅವನಿಂದ ಬೇರೆ

ಆಕಾರಗಳೇ ಈ ಕಲ್ಲುಗಳಿಗೆ ಮೂಡಿ ಬರಲಿವೆ, ಮತ್ತು ನನ್ನ ಹೊಸ ದಿನದ ಸ್ವಾತಂತ್ರ್ಯದಲ್ಲಿ ನೀವೂ ಸ್ವತಂತ್ರರಾಗಿ ನಿಲ್ಲುತ್ತೀರಿ.''

ಜೀಸಸ್‌ನು ಹೀಗೆ ನುಡಿದು ಮುಂದೆ ನಡೆದ; ಡೇವಿಡ್ ಗೋಪುರವನ್ನು ದಾಟುವ ವರೆಗೂ ಆ ಸೆರೆಮನೆಯ ಗೋಡೆಯನ್ನು ತನ್ನ ಕೈಯಿಂದ ಅವನು ಸವರುತ್ತಲೇ ಬಂದ.

## ೫೭. ಆ್ಯಂಡ್ರ್ಯೂ

ಅವನಿಲ್ಲದ ಜೀವನದ ಕಹಿಗಿಂತಲೂ ಮೃತ್ಯುವಿನ ಕಹಿ ಕಡಿಮೆಯದು. ಅವನನ್ನು ಶಾಂತಿಗೊಳಿಸಿದಾಗಲೇ ದಿನಗಳು ನುಗ್ಗಿ ಬಂದವು, ಸ್ತಬ್ಧ ವಾದವು. ನನ್ನ ನೆನವಿನ ಪ್ರತಿಧ್ವನಿ ಮಾತ್ರ ಅವನ ನುಡಿಗಳನ್ನು ಮರುನುಡಿದೀತು; ಆದರೆ ಅವನ ದನಿಯನ್ನಲ್ಲ.

ಒಮ್ಮೆ ಅವನು ಹೀಗೆ ಎಂದುದನ್ನು ನಾನು ಕೇಳಿದ್ದೆ: "ನಿಮಗೆ ಉತ್ಕಟ ಬಯಕೆಯಾದಾಗ ಹೊಲಗಳೆಡೆಗೆ ಹೋಗಿ, ಸರೋಜಗಳ ಸನ್ನಿಧಿ ಯಲ್ಲಿ ಕುಳಿತುಕೊಳ್ಳಿ; ಆಗ ಬಿಸಿಲಿನಲ್ಲಿ ಅವುಗಳ ಗುಂಯ್‌ಗುಡುವಿಕೆಯನ್ನು ನೀವು ಕೇಳೀರಿ. ಅವು, ಆವರಣಕ್ಕಾಗಿ ಅರಿವೆ ನೈಯ್ಯುವದಿಲ್ಲ. ಆಶ್ರಯ ಕ್ಕಾಗಿ ಕಟ್ಟಿಗೆ ಕಲ್ಲುಗಳನ್ನು ಏರಿಸುವದಿಲ್ಲ, ಆದರೂ ಅವು ಹಾಡುತ್ತಲೇ ಇರುತ್ತವೆ.

"ಇರುಳಿನಲ್ಲಿ ಕಾರ್ಯಗೈಯುತ್ತಿರುವ **ಅವನು** ಅವುಗಳ ಬೇಕುಗಳನ್ನು ಪೂರೈಸುತ್ತಾನೆ ಹಾಗೂ ಅವನ ಕರುಣೆಯ ಮಂಜುವನಿ ಅವುಗಳ ಪಕಳಿ ಗಳ ಮೇಲೆ ಹೊಳೆಯುತ್ತಿರುತ್ತದೆ.

''ಹಾಗೆಯೇ ನೀವೂ ಕೂಡ, ಎಂದೂ ದಣಿಯದ ಹಾಗೂ ವಿಶ್ರಾಂತಿ ಗೊಳ್ಳದ **ಅವನ** ಯೋಗಕ್ಷೇಮಕ್ಕೆ ಒಳಪಟ್ಟವರಲ್ಲವೇ?''

ಇನ್ನೊಮ್ಮೆ ಅವನು ಹೀಗೆಂದುದನ್ನು ನಾನು ಕೇಳಿದ್ದೆ: ''ನಿಮ್ಮ ಆ ಮಹಾಪಿತನಿಂದ ಆಕಾಶದಲ್ಲಿಯ ಹಕ್ಕಿಗಳೂ ಎಣಿಸಲ್ಪಟ್ಟು ಪಟ್ಟಿಯಲ್ಲಿ ಬರೆಯಲ್ಪಟ್ಟಂತೆ, ನಿಮ್ಮ ತಲೆಯಲ್ಲಿಯ ಕೂದಲುಗಳೂ ಅವನಿಂದ ಎಣಿ ಸಲ್ಪಟ್ಟವೆ. ಅವನ ಸಂಕಲ್ಪವಿಲ್ಲದೆಯೇ ಒಂದು ಹಕ್ಕಿಯೂ ಬೇಡನ

ಬಲೆಯಲ್ಲಿ ಸಿಕ್ಕು ಬೀಳಲಾರದು, ಅಥವಾ ನಿಮ್ಮ ಒಂದೇ ಒಂದು ತಲೆ ಗೂದಲೂ ನರೆಯಲಾರದು ಮತ್ತು ಕಾಲನ ಪೊಳ್ಳಿನಲ್ಲಿ ಬೀಳಲಾರದು.''

ಮತ್ತೊಮ್ಮೆ ಅವನು ಹೀಗೆಂದಿದ್ದ: ''ನಿಮ್ಮ ಹೃದಯದಲ್ಲಿಯೇ ನೀವು ಹೀಗೆ ಗುಣುಗುಟ್ಟಿದ್ದನ್ನು ನಾನು ಕೇಳಿದ್ದೇನೆ. ಮೊದಲಿನಿಂದಲೂ ಅವನನ್ನು ಅರಿಯುವವರಿಗಿಂತ, ಅಬ್ರಾಹಮನ ಸಂತಾನವಾದ ನಮಗೆ. ನಮ್ಮ ದೇವರು ಹೆಚ್ಚು ದಯಾವಂತನಾಗಿರಬೇಕು.''

''ಆದರೆ ನಾನು ನಿಮಗೆ ಹೇಳುವೆ: ದ್ರಾಕ್ಷಿ ತೋಟದೊಡೆಯನು ಒಬ್ಬ ಕೂಲಿಯವನನ್ನು ಗೆಯ್ಮೆಗೆಂದು ಬೆಳಗಿನಲ್ಲಿಯೇ ಹಚ್ಚಿ, ಇನ್ನೊಬ್ಬನನ್ನು ಅದೇ ಗೆಯ್ಮೆಗೆ ಸಂಜೆಗೆ ಕರೆದು ಹಚ್ಚಿ, ಇಬ್ಬರಿಗೂ ಅಷ್ಟಷ್ಟೇ ಕೂಲಿಯನ್ನಿತ್ತರೆ ಅವನು ನ್ಯಾಯವನ್ನೇ ಮಾಡಿದಂತಾಗುವದು. ಅವನು ತನ್ನ ಜೇಬಿನಿಂದಲೇ, ಹಾಗೂ ತನ್ನ ಸಂಕಲ್ಪದಂತೆಯೇ ಆ ಕೂಲಿ ಕೊಟ್ಟವನಲ್ಲವೇ? ಹಾಗೆಯೇ ನಮ್ಮ ಆ ಮಹಾಪಿತನೂ ತನ್ನರಮನೆಯ ಬಾಗಿಲನ್ನು ಮಹಾಜನರು ತಟ್ಟಿದಾಗ ತೆರೆಯುವಂತೆ ನೀವು ತಟ್ಟಿದಾಗಲೂ ತೆರೆಯುವನು. ಏಕೆಂದರೆ, ಅವನ ಕರ್ಣಗಳು ಹಗಲೆಲ್ಲ ಕೇಳಿದ ಗೀತಗಳನ್ನು ಪ್ರೀತಿಸುವಂತೆ, ನವಗೀತದುಲಿಯನ್ನೂ ಅಷ್ಟೇ ಪ್ರೀತಿಸುವವು; ಅಷ್ಟೇ ಅಲ್ಲ; ಆ ನವಗೀತಕ್ಕೆ, ಅದು ಅವನ ಹೃದಯದ ತೀರ ಚಿಕ್ಕ ದನಿಯಾಗಿರುವುದರಿಂದ, ವಿಶೇಷ ಸ್ವಾಗತವಿರುವುದು.''

ಇನ್ನೊ ಒಮ್ಮೆ ಅವನು ಹೀಗೆ ಹೇಳಿದ್ದನ್ನು ನಾನು ಕೇಳಿದ್ದೆ: "ಇದನ್ನು ನೆನಪಿನಲ್ಲಿಡಿ; ಕಳ್ಳನು ಕೊರತೆಯಲ್ಲಿದ್ದ ಮನುಷ್ಯನಾಗಿದ್ದಾನೆ; ಸುಳ್ಳನು ಭಯದಲ್ಲಿದ್ದ ಮನುಷ್ಯನಾಗಿದ್ದಾನೆ; ನಿಮ್ಮ ಇರುಳು ಕಾವಲಿನವನಿಂದ ಹಿಡಿಯಲ್ಪಟ್ಟ ಹೊಂಚುಗಾರನು, ಸ್ವತಃ ತನ್ನ ಕತ್ತಲೆಯ ಕಾವಲುಗಾರನಿಂದ ಹಿಡಿಯಲ್ಪಟ್ಟಿದ್ದಾನೆ.

"ಇವರೆಲ್ಲರಿಗೂ ನೀವು ದಯೆದೋರಿಸಬೇಕೆಂದು ನನ್ನ ಬಯಕೆ.

''ಇವರು ನಿಮ್ಮಲ್ಲಿ ಬರಬಯಸುತ್ತಿದ್ದರೆ ನೀವವರಿಗೆ ಬಾಗಿಲು ತೆರೆದು ಒಳಗೆ ಬರಮಾಡಿಕೊಳ್ಳಿ. ಹಾಗೂ ಅವರಿಗೆ ಊಟಕ್ಕೇಳ ಹೇಳಿರಿ. ಈ ರೀತಿ ನೀವವರನ್ನು ಸ್ವಾಗತಿಸದಿದ್ದರೆ, ಅವರು ಗೈದ ಅಪರಾಧಗಳಿಂದ ನೀವೂ ಮುಕ್ತರಾಗಲಾರಿರಿ.''

ಒಂದುದಿನ, ಎಲ್ಲರಂತೆ ನಾನೂ ಅವನನ್ನು ಜೆರೂಸಲೇಮದ ಮಾರು ಕಟ್ಟೆಗೆಂದು ಹಿಂಬಾಲಿಸಿದೆ. ಆಗ ಅವನು ನಮಗೆ ಒಬ್ಬ ದುಂದುಗಾರ ಮಗನ್ನ ಕಥೆಯನ್ನೂ, ಒಂದೇ ಒಂದು ಮುತ್ತಿಗಾಗಿ ತನ್ನ ಸಕಲ ಸ್ವತ್ತುಗಳನ್ನೇ ಮಾರಿದ ವ್ಯಾಪಾರಿಯೊಬ್ಬನ ಕಥೆಯನ್ನೂ ಹೇಳಿದ.

ಅವನು ಆ ಕಥೆಗಳನ್ನು ಹೇಳುತ್ತಿರುವಾಗಲೇ, ಫಾರಿಸೀಗಳು ಆ ಜನ ಜಂಗುಳಿಯ ಮಧ್ಯದಲ್ಲಿ ಸೂಳೆಯೆಂದು ಹೇಳುತ್ತ ಒಬ್ಬ ಹೆಣ್ಣುಮಗಳನು ಕರೆತಂದರು. ಜೀಸಸ್‌ನನ್ನುದ್ದೇಶಿಸಿ ಅವರು ಹೇಳಿದರು: "ಈಕೆ ಲಗ್ನ ಪ್ರತಿಜ್ಞೆಗೆ ದ್ರೋಹ ಬಗೆದಿದ್ದಾಳೆ. ಹಾಗೂ ಈಕೆಯನ್ನು ಕಾಯಿದೆ ಬಂಧನ ಕ್ಕೊಳಪಡಿಸಲಾಗಿದೆ."

ಅವನು ಆಕೆಯೆಡೆಗೆ ನಿಟ್ಟಿಸಿ ನೋಡಿದ; ಆಕೆಯ ಹಣೆಯ ಮೇಲೆ ಕೈಯಿರಿಸಿ, ಅವಳ ಕಂಗಳನ್ನು ಆಳವಾಗಿ ದಿಟ್ಟಿಸಿದ.

ಬಳಿಕ ಆಕೆಯನ್ನು ತಂದು ನಿಲ್ಲಿಸಿದ ಜನರ ಕಡೆಗೆ ತಿರುಗಿ ಅವರನ್ನೂ ಸುದೀರ್ಘವಾಗಿ ಈಕ್ಷಿಸಿದ; ಹಾಗೂ ಕೆಳಗೆ ಬಾಗಿ ತನ್ನ ಬೆರಳಿನಿಂದ ಭೂಮಿಯ ಮೇಲೆ ಒರೆಯಲು ಪ್ರಾರಂಭಿಸಿದ.

ಅವನು ಪ್ರತಿಯೊಬ್ಬರ ಹೆಸರನ್ನೂ ಬರೆದ; ಹಾಗೂ ಆ ಆ ಹೆಸರಿನ ಮುಂದೆ ಅವರವರು ಗೈದ ಪಾಪಕೃತಿಗಳನ್ನೂ ಬರೆದಿದ್ದ.

ಅವನು ಹೀಗೆ ಬರೆಯುತ್ತಿದ್ದಾಗದೇ ಅವರೆಲ್ಲ ನಾಚಿಕೆಯಿಂದ ಬೀದಿಗೆ ಬಿದ್ದು ಪಲಾಯನ ಹೇಳಿದರು.

ಅವನ ಬರೆಯುವ ಕಾರ್ಯ ಮುಗಿದಾಗ ಆ ಹೆಣ್ಣುಮಗಳು ಹಾಗು ನಾವು ಮಾತ್ರ ಅವನೆದುರು ಅಲ್ಲಿದ್ದೆವು.

ಮತ್ತೆ ಅವನು ಅವಳ ಕಂಗಳನ್ನು ನಿಟ್ಟಿಸಿ ನೋಡಿದ, ಹಾಗೂ ನುಡಿದ: "ನೀನು ಸಾಕುಸಾಕಷ್ಟು ಪ್ರೇಮಿಸಿದ್ದೀಯೇ. ನಿನ್ನನ್ನಿಲ್ಲಿಗೆ ತಂದವರು ಅಲ್ಪ ಮಾತ್ರ ಪ್ರೇಮಿಸಿದ್ದಾರೆ. ಆದರೂ, ನನ್ನನ್ನು ಬಲಿಹಾಕ ಲೆಂದು ಅವರು ನಿನ್ನನ್ನು ಬಲಿಮಾಡಿ ತಂದಿದ್ದಾರೆ.

"ನೀನೀಗ ಶಾಂತಿಯಿಂದ ಹೊರಟುಹೋಗು.

"ನಿನ್ನ ನ್ಯಾಯನಿರ್ಣಯ ಮಾಡಲು ಅವರಾರೂ ಇಲ್ಲಿಲ್ಲ. ಪ್ರೇಮಿ

ಸುತ್ತಿದ್ದೂ ಜಾಣೆಯಾಗಬೇಕೆಂದು ನಿನ್ನಬಯಕೆಯಿದ್ದರೆ ಆಗ ನನ್ನ ಬಳಿಗೆ ಬಾ, ಏಕೆಂದರೆ ಈ ಮಾನವಪುತ್ರ ನಿನ್ನ ನ್ಯಾಯನಿರ್ಣಯ ಮಾಡುವದಿಲ್ಲ."

ತಾನೂ ಕೂಡ ಪಾಪಾತೀತನಲ್ಲವೆಂದು ತಿಳಿದೇ ಅವನು ಅವಳಿಗೆ ಹೀಗೆ ಹೇಳಿರಬಹುದೇ ಎಂದು ನನಗಾಗ ಅಚ್ಚರಿಯೆನಿಸಿತು.

ಆದರೆ ಆ ದಿನದಿಂದ ನಾನು ಆಳವಾಗಿ ಆಲೋಚಿಸಿ, ಕೇವಲ ಪವಿತ್ರ ಹೃದಯವೇ ಮಾತ್ರ ಮೃತ್ಯೋದಕಕ್ಕೊಯ್ಯುವ ನೀರಡಿಕೆಯನ್ನೂ ಕ್ಷಮಿಸ ಬಲ್ಲದೆಂಬದನ್ನು, ಈಗ ತಿಳಿದುಕೊಂಡೆ.

ಸ್ಥಿರವಾಗಿ ನಿಲ್ಲಬಲ್ಲವನೇ, ನಡುಗಿ ಬೀಳುತ್ತಿರುವವರನ್ನು ಕೈಕೊಟ್ಟು ಎತ್ತಿಹಿಡಿಯಬಲ್ಲನು.

ಅಂತೇ ನಾನು ಮತ್ತೆ ಮತ್ತೆ ಹೇಳುವೆ, ಅವನಿಲ್ಲದ ಜೀವನದ ಕಹಿ ಗಿಂತಲೂ ಮೃತ್ಯುವಿನ ಕಹಿ ಕಡಿಮೆಯದು.

## ೫೮. ಒಬ್ಬ ಸಿರಿವಂತ

ಅವನು ಸಿರಿವಂತರ ಬಗ್ಗೆ ಕಿಡುನುಡಿದ. ಒಂದು ದಿನ ನಾನವನಿಗೆ ಹೀಗೆ ಕೇಳಿದೆ: "ರಾಯರೇ, ಆತ್ಮಶಾಂತಿಯನ್ನು ಪಡೆಯಲು ನಾನೇನು ಮಾಡಲಿ?"

ನನ್ನ ಸ್ವತ್ತುಗಳನ್ನೆಲ್ಲ ಬಡವರಿಗೆ ದಾನಮಾಡಿ ತನ್ನನ್ನು ಹಿಂಬಾಲಿ ಸಲು ಅವನು ನನಗೆ ವಿಧಿಸಿದ.

ಆದರೆ ಅವನಿಗೆ ಸ್ವತ್ತೆಂಬುದೇ ಇರಲಿಲ್ಲ. ಅಂತೇ, ಸ್ವತ್ತುಗಳಲ್ಲಡಗಿದ ಭರವಸೆ, ಸ್ವಾತಂತ್ರ್ಯಗಳೂ, ಅಥವಾ ಸ್ಥಾನಮಾನ ಹಾಗೂ ಸ್ವಾಭಿಮಾನ ಗಳು ಅವನಿಗೆ ತಿಳಿದಿಲ್ಲ.

ನನ್ನ ಮನೆಯಲ್ಲಿ ಏಳಿಪ್ಪತ್ತು ಗುಲಾಮರೂ, ಉಗ್ರಾಣಗಳೂ ಇವೆ. ಕೆಲವರು ನನ್ನ ಉಪವನ ದ್ರಾಕ್ಷಾತೋಟಗಳಲ್ಲಿ ಕೆಲಸ ಮಾಡುತ್ತಿದ್ದರೆ, ಇನ್ನು ಕೆಲವರು ನನ್ನ ಹಡಗುಗಳನ್ನು ದೂರದ ದ್ವೀಪಗಳತ್ತ ನಡೆಸುತ್ತಿದ್ದಾರೆ.

ಅವನ ನುಡಿಗೆ ಕಿವಿಗೊಟ್ಟು ನನ್ನೆಲ್ಲ ಸ್ವತ್ತುಗಳನ್ನು ನಾನು ಬಡವರಿಗೆ ಕೊಟ್ಟುಬಿಟ್ಟಿದ್ದರೆ, ಈ ನನ್ನ ಗುಲಾಮರದು, ಸೇವಕರದು. ಅವರ ಹೆಂಡಿರು

ಮಕ್ಕಳದು ಗತಿಯೇನಾಗುತ್ತಿತ್ತು? ಅವರೂ ಕೂಡ, ಊರ ಬಾಗಿಲ ಮುಂದೋ, ದೇಗುಲಗಳ ಪೌಳಿಗಳಲ್ಲೋ ಬಿಕ್ಷುಕರಾಗಿ ಬಿಡಬಹುದಿತ್ತು.

ಇಲ್ಲ, ಆ ಒಳ್ಳೇ ಮನುಷ್ಯನಿಗೆ ಸ್ವತ್ತುಗಳ ಗುಟ್ಟೆನಾಳವು ತಿಳಿದಿಲ್ಲ. ಏಕೆಂದರೆ ಅವನೂ ಅವನ ಅನುಯಾಯಿಗಳೂ ಹೆರವರ ಉದಾರತೆಯಲ್ಲೇ ಬದುಕುತ್ತಿದ್ದು, ಸಕಲರೂ ತಮ್ಮಂತೆಯೇ ಬಾಳಬೇಕೆಂದು ಬಗೆದಿದ್ದಾರೆ.

ಇಲ್ಲಿಯೊಂದು ಪ್ರತಿಕ್ಷೇಪ, ಒಂದು ಒಗಟವಿದೆ ನೋಡಿ: ಸಿರಿವಂತ ತನ್ನ ಐಸಿರಿಯನ್ನೆಲ್ಲ ಬಡವರಿಗೆ ಬಿಟ್ಟುಕೊಟ್ಟು, ಅವರು ಅವನನ್ನು ಊಟಕ್ಕೆ ಸ್ವಾಗತಿಸುವ ಮೊದಲೇ, ಅವರಿಗೆ ಆ ಸಿರಿವಂತನ ಅನ್ನ ನೀರುಗಳು ನೀಡಲ್ಪಡಬೇಕೇ?

ತನ್ನ ಭೂಮಿಯು ಒಡೆಯ ತಾನೇ ಎಂದುಕೊಳ್ಳುವ ಮೊದಲೇ, ಶಿಖರಧಾರಿಯು ತಾನೇ ತನ್ನೊಕ್ಕಲುಗಳ ಯಜಮಾನನಾಗಲೇ ಬೇಕೇ?

ಚಳಿಗಾಲಕ್ಕೆಂದು ಅನ್ನ ಸಂಗ್ರಹಮಾಡುವ ಇರುವೆಯು, ಒಂದು ದಿನ ಹಾಡಿ ಹಾರಾಡಿ ಮರುದಿನವೇ ಹಸಿವಿನಿಂದ ಸಾಯುವ ಮಿಡಿತೆಗಿಂತ ಎಷ್ಟೋ ಮೇಲು.

ಕಳೆದ ಬಿಡುವಿನ ದಿನ, ಮಾರುವ ಕಟ್ಟೆಯಲ್ಲಿ ಅವನ ಒಬ್ಬ ಸಂಗಡಿಗ ಹೇಳಿದ: "ಸ್ವರ್ಗದಂಗಳದಲ್ಲಿ, ಎಲ್ಲಿ ಜೀಸಸ್‌ನು ತನ್ನ ಪಾದತ್ರಾಣಗಳನ್ನು ಬಿಡುವನೋ ಅಲ್ಲಿ, ತನ್ನ ತಲೆಯಿಡುವ ಯೋಗ್ಯತೆಯುವನೂ ಯಾವನೂ ಇಲ್ಲ."

ಆದರೆ ನಾನು ಕೇಳುವೆ, ಯಾರ ಮನೆಯಂಗಳದಲ್ಲಿ ಆ ಪ್ರಾಮಾಣಿಕ ಉಡಾಳನು ತನ್ನ ಪಾದತ್ರಾಣಗಳನ್ನು ಬಿಟ್ಟಿದ್ದಾನೆ? ಅವನಿಗೇ ಸ್ವತಃ ಒಂದು ಮನೆಯಿಲ್ಲ, ಒಂದು ಅಂಗಳವಿಲ್ಲ; ಹಾಗೂ ಹಗಲೆಲ್ಲ ಅವನು ಪಾದತ್ರಾಣಗಳಿಲ್ಲದೆಯೇ ನಡೆಯುತ್ತಿರುತ್ತಾನೆ.

## ೫೯. ಪ್ಯಾಟ್‌ಮೂಸ್‌ದಲ್ಲಿ ಜಾನ್

ಇನ್ನೊಮ್ಮೆ ನಾನವನ ಬಗ್ಗೆ ಮಾತನಾಡಬಯಸುವೆ.

ದೇವರು ನನಗೆ ದನಿಯನ್ನೂ, ಬಿಸಿ ಭಾಷಣವಿಲ್ಲದಿದ್ದರೂ—ಸುಡು ದುಟಿಗಳನ್ನೂ ಕೊಟ್ಟಿದ್ದಾನೆ.

ಸಂಪೂರ್ಣ ಶಬ್ದಕ್ಕೆ ನಾನು ತಕ್ಕವನಲ್ಲ, ಆದರೂ ನನ್ನ ಹೃದಯವನ್ನು ಅಧರಗಳ ಮೇಲೆ ಆಹ್ವಾನಿಸುವೆ.

ಜೀಸಸ್ ನನ್ನನ್ನು ಪ್ರೀತಿಸಿದ. ಏಕೆಂಬುದು ನನಗೆ ತಿಳಿದಿಲ್ಲ.

ನಾನವನನ್ನು ಪ್ರೀತಿಸಿದೆ. ಏಕೆಂದರೆ ಅವನು ನನ್ನಾತ್ಮವನ್ನು ನನ್ನ ನೀಳಕ್ಕಿಂತಲೂ ಹೆಚ್ಚಿನ ಎತ್ತರಕ್ಕೂ ಹಾಗೂ ನನ್ನ ನಿನದದಾಳದ ಆಚೆಗೂ ತ್ವರಿತಗೊಳಿಸಿದ್ದ.

ಪ್ರೇಮವೊಂದು ಪವಿತ್ರ ಗುಹ್ಯ.

ಪ್ರೇಮಿಸುವವರಿಗೆ ಅದು ಯಾವಾಗಲೂ ಶಬ್ದಾತೀತವಾಗಿರುತ್ತದೆ.

ಆದರೆ ಪ್ರೇಮಿಸದವರಿಗೆ ಅದೊಂದು ಕೇವಲ ಹೃದಯರಹಿತ ಹಾಸ್ಯವಾಗಬಹುದು.

ನಾವು ಹೊಲದಲ್ಲಿ ಗೈಯುತ್ತಿದ್ದಾಗ ನನ್ನನ್ನೂ ನಮ್ಮಣ್ಣನನ್ನೂ ಜೀಸಸ್‌ನು ಕರೆದನು.

ಆಗ ನಾನಿನ್ನೂ ಚಿಕ್ಕವ, ಕೇವಲ ಪ್ರಭಾತದ ದನಿ ಮಾತ್ರ ನನ್ನ ಕಿವಿಗಳನ್ನು ಮುಟ್ಟಿತ್ತು.

ಆದರೆ ಅವನ ದನಿ, ಅವನ ಕೂಗಿನ ಕಹಳೆಯೇ, ನನ್ನ ಪರಿಶ್ರಮದ ಅಂತ್ಯ ಹಾಗೂ ಅನುರಾಗದ ಪ್ರಾರಂಭವಾಗಿತ್ತು.

ಆಗ, ಬಿಸಿಲಲ್ಲಿ ನಡೆಯುವುದನ್ನೂ ಆ ಹೊತ್ತಿನ ಮನೋಹರತೆಯನ್ನು ಪೂಜಿಸುವುದನ್ನೂ ಬಿಟ್ಟು ನನಗೆ ಇನ್ನೊಂದಿದ್ದಿಲ್ಲ.

ಭವ್ಯವು ಭವ್ಯತೆ ತೋರಿಸಲು ಕರುಣೆಗೊಳ್ಳುವುದನ್ನೂ, ಮತ್ತು ಚೆಲುವು ಚೆಲುವನ್ನು ತೋರಿಸಲು ಅತಿ ಪ್ರಕಾಶಗೊಳ್ಳುವುದನ್ನೂ ನೀವು ಊಹಿಸಬಲ್ಲಿರಾ?

ತನ್ನ ತಲ್ಲೀನತೆಯಲ್ಲಿಯೇ ಲಜ್ಜಾನ್ವಿತವಾದ ದನಿಯನ್ನು ನಿಮ್ಮ ಕನಸುಗಳಲ್ಲಿ ನೀವು ಕೇಳಿದ್ದೀರಾ ?

ಅವನು ನನ್ನನ್ನು ಕರೆದ. ನಾನವನ ಬೆಂಬತ್ತಿದೆ.

ಅಂದಿನ ಸಂಜೆ, ನನ್ನ ಉಳಿದ ವಸ್ತುಗಳನ್ನು ತೆಗೆದುಕೊಳ್ಳಲೆಂದು ನನ್ನ ತಂದೆಯ ಮನೆಗೆ ಬಂದೆ.

ನಾನು ನನ್ನ ತಾಯಿಗೆ ಹೇಳಿದೆ : " ನಾಝರೆಥದ ಜೀಸಸ್‌ನು ತನ್ನ ಗುಂಪಿನಲ್ಲಿ ನಾನೂ ಬರಬೇಕೆಂದಿದ್ದಾನೆ."

" ನಿನ್ನಣ್ಣನಂತೆ ನೀನೂ ಅಪ್ಪನ ಹಾದಿ ಹಿಡಿದೇ ಹೋಗು, ಮಗು " ಎಂದು ಆಕೆಯೆಂದಳು.

ನಾನು ಅವನನ್ನು ಕೂಡಿಕೊಂಡೆ.

ಅವನ ಸೌಗಂಧವೇ ನನ್ನನ್ನು ಕರೆದಿತ್ತು, ನನ್ನನ್ನು ಆಜ್ಞಾಪಿಸಿತ್ತು; ಆದರೆ ಅದು ನನ್ನ ಮುಕ್ತಿಗಾಗಿ ಮಾತ್ರ ಇತ್ತು.

ಅನಾಮಂತ್ರಿತರಿಗೆ ಪ್ರೇಮದ ಗೃಹವೊಂದು ಬಿಸಿಲುಗುದುರೆ, ಅಣಕವೆನಿಸಿದರೂ, ಪ್ರೇಮವು ತನ್ನ ಅತಿಥಿಗಳಿಗೆ ದಯಾಘನ ಪ್ರಭುವಾಗಿದೆ.

† † † †

ಇನ್ನು ನಾನು ಜೀಸಸ್‌ನ ಪವಾಡಗಳ ಬಗ್ಗೆ ನಿಮಗೆ ವಿವರಿಸುವೆ.

ನಾವೆಲ್ಲರೂ ಕಾಲನ ಸಂಜ್ಞಾರೂಪ ಪವಾಡಗಳಾಗಿದ್ದೇವೆ. ನಮ್ಮ ಪ್ರಭು, ನಮ್ಮ ಗುರು ಆ ಕಾಲನ ಕೇಂದ್ರವಾಗಿದ್ದಾನೆ.

ಆದರೂ ಅವನ ಸಂಜ್ಞಾರೂಪಗಳು ಪ್ರಕಟವಾಗಬಾರದೆಂದೇ ಅವನ ಬಯಕೆಯಾಗಿತ್ತು.

"ಏಳು, ಮನೆಗೆ ಹೋಗು" ಎಂದವನು ಕುಂಟರಿಗೆ ಹೇಳುತ್ತಿದ್ದುದನ್ನು ನಾನು ಕೇಳಿದ್ದೇನೆ. ಆದರೆ ಆಚಾರ್ಯರಿಗೆ ನಾನು ನಿಮ್ಮನ್ನು ಪೂರ್ಣಗೈದಿದ್ದೇನೆ ಎಂದವನು ಹೇಳುತ್ತಿದ್ದಿಲ್ಲ.

ಆದರೆ ಜೀಸಸ್‌ನ ಮನಸ್ಸು ಕುಂಟರೊಡನಿದ್ದಿಲ್ಲ; ಆದರದು ಗಟ್ಟಿಗರೂ ನ್ಯಾಯವಂತರೂ ಆದವರೊಡನಿತ್ತು.

ಅವನ ಮನವು ಉಳಿದ ಮನಗಳನ್ನು ಶೋಧಿಸಿತ್ತು, ಸೆರೆಹಿಡಿದಿತ್ತು; ಹಾಗೂ ಅವನ ಪೂರ್ಣಾತ್ಮವು ಉಳಿದ ಆತ್ಮಗಳನ್ನು ದರ್ಶಿಸಿತ್ತು.

ಹೀಗೆ ಗೈಯುವಾಗ ಅವನ ಆತ್ಮವು ಈ ಮನಗಳನ್ನೂ, ಆತ್ಮಗಳನ್ನೂ ಮಾರ್ಪಡಿಸಿ ಬಿಡುತ್ತಿತ್ತು.

ಇದೊಂದು ಪವಾಡದಂತೆ ತೋರಬಹುದು. ಆದರದು ನಮ್ಮ ಪ್ರಭೂ, ನಮ್ಮ ಗುರುವಿಗೆ ಕೇವಲ ದೈನಂದಿನ ಉಸಿರಾಟದಂತೆ ಸಹಜವಾಗಿತ್ತು.

‡ ‡ ‡ ‡

ಈಗ ಇನ್ನುಳಿದ ವಿಷಯಗಳ ಬಗ್ಗೆ ಹೇಳುವೆ.

ಒಂದು ದಿನ ಅವನು ನಾನು ಇಬ್ಬರೇ, ಹೊಲಗಳಲ್ಲಿ ನಡೆದುಕೊಂಡು ಬರುತ್ತಿದ್ದೆವು. ನಮಗೆ ಬಹಳ ಹಸಿವೆಯಾಗಿತ್ತು. ಒಂದು ಕಾಡು ಸೇಬು ಗಿಡದ ಬಳಿ ನಾವು ಬಂದೆವು.

ಅದರ ಟೊಂಗೆಗಳಲ್ಲಿ ಕೇವಲ ಎರಡೇ ಸೇಬುಗಳು ತೂಗಾಡುತ್ತಿದ್ದವು.

ಅವನು ಆ ಗಿಡದ ಬೊಡ್ಡೆಯನ್ನು ತನ್ನ ಕೈಗಳಿಂದ ಹಿಡಿದು ಅಲುಗಾಡಿಸಿದ. ಆ ಎರಡು ಸೇಬುಗಳು ಕೆಳಕ್ಕೆ ಬಿದ್ದವು.

ಅವೆರಡನ್ನೂ ಅವನು ಆರಿಸಿಕೊಂಡು ಒಂದನ್ನು ನನಗೆ ಕೊಟ್ಟ. ಇನ್ನೊಂದನ್ನು ತನ್ನ ಕೈಯಲ್ಲಿ ಹಿಡಿದುಕೊಂಡ.

ಹಸಿವೆ ಬಹಳಾದುದರಿಂದ ನಾನು ಆ ಶೇಬುವನ್ನು ಗಪಗಪನೆ ಅವಸರದಿಂದ ತಿಂದುಬಿಟ್ಟೆ.

ಬಳಿಕ ಅವನೆಡೆಗೆ ನೋಡಿದೆ. ಅವನಿನ್ನೂ ಆ ಶೇಬುವನ್ನು ತನ್ನ ಕೈಯುಲ್ಲಿ ಹಿಡಿದುಕೊಂಡೇ ಇದ್ದ.

ಅವನು ಆ ಹಣ್ಣನ್ನೂ ಮುಂದೆ ಮಾಡಿ "ಇದನ್ನೂ ತಿಂದುಬಿಡು" ಎಂದು ನನಗೇ ಕೊಟ್ಟುಬಿಟ್ಟ.

ಅದನ್ನೂ ನಾನಿಸಿದುಕೊಂಡೆ. ನಾಚಿಕೆಯಿಲ್ಲದೆ ಹಸಿವಿನ ಭರದಲ್ಲಿ ಅದನ್ನೂ ತಿಂದುಬಿಟ್ಟೆ.

ಹಾಗೆಯೇ ನಾವು ಮುಂದೆ ಸಾಗಿದಾಗ ನಾನವನ ಮೋರೆನೋಡಿದೆ.

ಆಗ ನಾನೇನು ಕಂಡೆ ಎಂಬದನ್ನು ನಿಮಗೆ ಹೇಗೆ ಹೇಳಲಿ ?

ಆಕಾಶದಲ್ಲಿ ಜ್ಯೋತಿಗಳು ಜಗಮಗಿಸುತ್ತಿದ್ದ ರಾತ್ರಿಯಂತಿದ್ದ.

ನಮಗೆ ನಿಲುಕದ ಕನಸಿನಂತಿದ್ದ.

ತಮ್ಮ ಕುರಿಗಳೆಲ್ಲ ಮೇಯುತ್ತ, ಮೆಲಕಾಡಿಸುತ್ತ ಇರುವದನ್ನು ಕಂಡು ಕುರುಬರು ಶಾಂತರೂ ಸುಖಿಗಳೂ ಆಗಿರುವ ಕಾಲವಾದ ಮಧ್ಯಾಹ್ನ ದಂತಿದ್ದ

ಸಮಸ್ಥಿತಿಯಂತೆ, ಶಾಂತಿಯಂತೆ, ಮನೆಗೆ ಮರಳುವವನಂತೆ ಇದ್ದ.

ಅಲ್ಲದೆ ನಿದ್ದೆಯಂತಿದ್ದ, ಕನಸಿನಂತೆಯೂ ಇದ್ದ.

ಇವೆಲ್ಲವನ್ನೂ ನಾನವನ ಮುಖದಲ್ಲಿ ಕಂಡೆ.

ಅವನು ನನಗೆ ಎರಡೂ ಶೇಬುಗಳನ್ನು ಕೊಟ್ಟುಬಿಟ್ಟಿದ್ದ. ಅವನೂ ನನ್ನಂತೆಯೇ ಬಹಳ ಹಸಿದಿದ್ದನೆಂಬುದು ನನಗೆ ಗೊತ್ತಿತ್ತು.

ಆದರೆ, ಆ ಫಲದ್ವಯಗಳನ್ನೂ ನನಗೇ ಕೊಟ್ಟುಬಿಟ್ಟುದರಲ್ಲಿಯೇ, ಅವನು ತೃಪ್ತನಾಗಿದ್ದನೆಂಬುದು ಈಗ ನನಗೆ ತಿಳಿಯಿತು. ಆದರೆ ಅವನು ಸ್ವತಃ ಇನ್ನೊಂದು ಗಿಡದ ಬೇರೊಂದು ಹಣ್ಣನ್ನು ತಿಂದಿದ್ದ.

ಅವನ ಬಗ್ಗೆ ನಾನು ಇನ್ನೂ ಹೆಚ್ಚು ಹೇಳಬಹುದು; ಆದರೆ ಹೇಗೆ ಹೇಳಲಿ ?

ಪ್ರೇಮವು ಅಪರಂಪಾರವಾದಾಗ ಅದು ಮೂಕವೂ ಆಗಿಬಿಡುತ್ತದೆ.

ಹಾಗೂ ಸ್ಮರಣೆಯು ಅತಿ ಭಾರವಾದಾಗ ಅದು ಮೌನದಾಳವನ್ನೂ ಶೋಧಿಸುತ್ತದೆ.

## ೬೦. ಪೀಟರ

ಒಮ್ಮೆ ಕ್ಯಾಪರನಮ್‌ದಲ್ಲಿ ನಮ್ಮ ಪ್ರಭು, ನಮ್ಮೊಡೆಯ, ಹೀಗೆ ಮಾತಾಡಿದ :

"ನಿಮ್ಮ ನೆರೆಯವನು, ಗೋಡೆಯಾಚೆಗಿರುವ ನಿಮ್ಮ ಇನ್ನೊಂದು ಆತ್ಮವೇ ಆಗಿದ್ದಾನೆ; ಜ್ಞಾನೋದಯವಾದಾಗ ಸಕಲ ಗೋಡೆಗಳೂ ಉರುಳಿ ಬೀಳುವವು.

"ಯಾರಿಗೆ ಗೊತ್ತು, ನಿಮ್ಮ ನೆರೆಯವನು ಬೇರೆ ದೇಹ ಧರಿಸಿದ ನಿಮ್ಮ ಉತ್ತಮಾತ್ಮವೇ ಆಗಿರಬಹುದು? ನೀವು ಸ್ವತಃ ನಿಮ್ಮನ್ನು ಪ್ರೀತಿಸುವಂತೆ ಅವನನ್ನೂ ಪ್ರೀತಿಸಿರಿ.

"ಅವನೂ ಕೂಡ ನೀವರಿಯದ ಆ ಪರಮೋನ್ನತನ ಸೃಷ್ಟಿಯೇ ಆಗಿದ್ದಾನೆ.

"ನಿಮ್ಮ ಆಶಾಪಸಂತವು ಅಡಿಯಾಡುವ ಹಸಿರು ಹೊಲವೇ, ನಿಮ್ಮ ಬಯಕೆಯ ಹೇಮಂತವು ಕನಸು ಕಾಣುವ ಹಿಮಶಿಖರಗಳೇ ನಿಮ್ಮ ನೆರೆಯವನಾಗಿದ್ದಾನೆ.

"ನೀವರಿಯದಿದ್ದ ಆನಂದದಿಂದ ಹಾಗೂ ನೀವು ಭಾಗಗೊಳ್ಳಬಯಸದ ದುಃಖದಿಂದ ನಿಮ್ಮ ಮುಖಮುದ್ರೆಯನ್ನು ಹೆಚ್ಚು ಚೆಲುವುಗೊಳಿಸಿದುದನ್ನು ನೀವು ನೋಡಿಕೊಳ್ಳುವ ಕನ್ನಡಿಯೂ, ನಿಮ್ಮ ನೆರೆಯವನೇ ಆಗಿದ್ದಾನೆ.

"ನಾನು ನಿಮ್ಮನ್ನು ಪ್ರೀತಿಸುವಂತೆ ನೀವೂ ನಿಮ್ಮ ನೆರೆಹೊರೆಯವರನ್ನು ಪ್ರೀತಿಸಬೇಕೆಂದು ನಾನು ಬಯಸುತ್ತೇನೆ."

ಬಳಿಕ ನಾನವನಿಗೆ ಕೇಳಿದೆ: "ನನ್ನ ಆಸ್ತಿಗಳನ್ನು ಕಾಮಿಸುವ ಹಾಗೂ ನನ್ನನ್ನು ಪ್ರೀತಿಸದ ನೆರೆಯವನನ್ನೂ ನಾನು ಹೇಗೆ ಪ್ರೀತಿಸಬಹುದು? ನನ್ನ ಸ್ವತ್ತುಗಳನ್ನು ಕದಿಯುವವನನ್ನು ನಾನೆಂತು ಪ್ರೀತಿಸಬಹುದು?"

ಅವನು ಉತ್ತರಿಸಿದ: "ನೀನು ಕೊರಿಗಿ ಹೂಡಿ ಹೊಡೆಯುತ್ತಿರುವಾಗ ಹಾಗೂ ನಿನ್ನ ಆಳುಮಗನು ಶೆಡ್ಡಿಯಲ್ಲಿ ಕಾಳು ಬಿಡುತ್ತ ಬಿತ್ತುತ್ತಿರುವಾಗ, ಅಲ್ಲಿಯ ಕೆಲವು ಕಾಳುಗಳನ್ನು ಆರಿಸಲು ಬಂದಿರುವ ಗುಬ್ಬಿಗಳನ್ನು ಹಾರಿಸಿ ಬಿಡಲೆಂದು ನೀನು ತಡೆಯುವಿಯಾ, ಹಿಂದೆ ಹೊರಳಿ ನೋಡುವಿಯಾ? ನೀನು ಹಾಗೆ ಮಾಡಿದೆಯಾದರೆ, ನಿನ್ನ ಸುಗ್ಗಿಯ ಸಮೃದ್ಧಿಗೆ ನೀನು ತಕ್ಕವನೇ ಆಗಲಾರಿ."

ಹೀಗೆ ಜೀಸಸ್ ನುಡಿದೊಡನೆ ನಾನು ನಾಚಿಕೊಂಡೆ, ಸುಮ್ಮನಾಗಿಬಿಟ್ಟೆ. ಆದರೆ ನನಗೆ ಭಯವೆನಿಸಲಿಲ್ಲ. ಏಕೆಂದರೆ ಜೀಸಸ್ ನನ್ನೆಡೆಗೆ ನೋಡುತ್ತ ನಗುತ್ತಲಿದ್ದ.

## ೬೧. ಜೆರೂಸಲೇಮದಲ್ಲಿಯ ಒಬ್ಬ ಮೊಟ್ಟೆಗಾರ

ನಾನವನನ್ನು ಮೆಚ್ಚಿದ್ದಿಲ್ಲ, ಆದರೂ ನಾನವನನ್ನು ದ್ವೇಷಿಸಿದ್ದಿಲ್ಲ. ಅವನು ಹೇಳುವುದನ್ನು ನಾನು ಲಕ್ಷ್ಯಗೊಟ್ಟು ಆಲಿಸುತ್ತಿದ್ದೆ. ಆದರದು, ಅವನ ಮಾತುಗಳನ್ನು ಕೇಳಲೆಂದಲ್ಲ, ಅವನ ದನಿಯ ನಿನದವನ್ನು ಆಲಿಸಲೆಂದು; ಏಕೆಂದರೆ ಅವನ ದನಿ ನನಗೆ ಮೆಚ್ಚಿಕೆಯಾಗಿತ್ತು.

ಅವನು ಹೇಳಿದ್ದೆಲ್ಲ ನನ್ನ ಮನಸ್ಸಿಗೆ ತಿಳಿಯುತ್ತಿದ್ದಿಲ್ಲ. ಆದರೆ ಆ ದನಿ ಮಾತ್ರ ನನ್ನ ಕಿವಿಗಳಿಗೆ ಅರ್ಥವಾಗುತ್ತಿತ್ತು.

ಒಂದು ವೇಳೆ ಅವನ ಬೋಧದ ಬಗ್ಗೆ ಉಳಿದವರು ನನಗೆ ಹೇಳದೆ ಹೋಗಿದ್ದರೆ, ಅವನು ಜ್ಯುಡಿಯಾದ ಪರವಾಗಿದ್ದನೋ ವಿರೋಧಿಯಾಗಿದ್ದನೋ ಎಂಬುದು ಕೂಡ ನನಗೆ ಗೊತ್ತಾಗುತ್ತಿದ್ದಿಲ್ಲ.

## ೬೨. ನಾಝರೆಥದ ಸುಸಾನಾ : ಮೇರಿಯ ನೆರೆಯಾಕೆ

ಬಡಿಗರ ಜೊಸೆಫನ ಪತ್ನಿಯಾಗುವದಕ್ಕಿಂತಲೂ ಮೊದಲೇ, ಜೀಸಸ್‌ನ ತಾಯಿ ಮೇರಿಯದು ನನಗೆ ಗೊತ್ತಿತ್ತು; ಆಗ ನಾವಿಬ್ಬರೂ ಇನ್ನೂ ಕನ್ಯೆಯರಾಗಿದ್ದೆವು.

ಆ ದಿನಗಳಲ್ಲಿ, ಮೇರಿ ದರ್ಶನಗಳನ್ನು ಕಾಣುತ್ತಿದ್ದಳು, ದನಿಗಳನ್ನು ಕೇಳುತ್ತಿದ್ದಳು; ಹಾಗೂ ತನ್ನ ಕನಸಿನಲ್ಲಿ ಕಂಡ ಸ್ವರ್ಗೀಯ ಪುರುಷರ ಬಗ್ಗೆ ಮಾತನಾಡುತ್ತಿದ್ದಳು.

ಆಕೆಯ ಮೇಲೆ ನಾಝರೆಥದ ಜನರದೆಲ್ಲ ದೃಷ್ಟಿಯಿತ್ತು; ಆಕೆಯ ಹೋಗು-ಬರುವಿಕೆಗಳನ್ನು ಅವರು ಲಕ್ಷ್ಯಗೊಟ್ಟು ನಿರೀಕ್ಷಿಸುತ್ತಿದ್ದರು. ಅವರು ಆಕೆಯ ಬಗ್ಗೆ ಕರುಣಾದೃಷ್ಟಿಯುವರಾಗಿದ್ದರು; ಏಕೆಂದರೆ ಆಕೆಯ ಹೆಜ್ಜೆಗಳಲ್ಲಿ ನೀಳ ಅಂತರವಿತ್ತು. ಹುಬ್ಬುಗಳಲ್ಲಿ ಔನ್ನತ್ಯವಿತ್ತು

ಆದರೆ ಆಕೆ ಮೈದುಂಬಿದವರಂತಿರುತ್ತಿದ್ದಳೆಂದು ಕೆಲವರೆನ್ನುತ್ತಿದ್ದರು;

ಏಕೆಂದರೆ, ಅವಳ ಹೂದಿನಗಳಲ್ಲೇ ಸುಗ್ಗಿಯುಡಗಿತ್ತು. ಅವಳ ವಸಂತಕಾಲ ದಲ್ಲೇ ಮಾಗಿದ ಹಣ್ಣು ತನವಡಗಿತ್ತು.

ನಮ್ಮೊಡನೆಯೇ ಅವಳು ಹುಟ್ಟಿ ಬೆಳೆದು ಬಂದಿದ್ದಳು. ಆದರೂ ಆಕೆ ಉತ್ತರ ದೇಶದವರಂತೆ ಪರಕೀಯಳಾಗಿದ್ದಳು. ನಮ್ಮ ಮುಖಗಳಿಗೆ ಸಾಮ್ಯ ವಲ್ಲದ ಒಂದು ವಿಚಿತ್ರವು ಯಾವಾಗಲೂ ಅವಳ ಕಂಗಳಲ್ಲಿರುತ್ತಿತ್ತು.

ತನ್ನ ಬಂಧುಗಳೊಡನೆ ನಾಯಿಲದಿಂದ ಕಾಡಿಗೆ ಹೊರಟುನಡೆದ ಹಳೆಯ ಮಿರಿಯಮ್‌ಳಂತೆ ಅವಳು ಯಾವಾಗಲೂ ಉದ್ವೃತ್ತಳಾಗಿರು ತ್ತಿದ್ದಳು.

ಈಗ ಮೇರಿ. ಬಡಿಗ ಜೋಸೆಫನ ವಧುವೆಂದು ನಿಶ್ಚಿತವಾಯಿತು.

ಮೇರಿ ದೊಡ್ಡವಳಾದಾಗ ಜೀಸಸ್‌ನೊಡನೆ ಗುಡ್ಡಗಾಡುಗಳಲ್ಲೆಲ್ಲ ತಿರುಗಾಡಿ ಸಂಜೆಗೆ ಮನೆಗೆ ಮರುಳುತ್ತಿದ್ದಳು. ಆಗ ಆಕೆಯ ಕಂಗಳಲ್ಲಿ ನೋವು–ನಲಿವುಗಳೆರಡೂ ತುಂಬಿರುತ್ತಿದ್ದವು.

ಜೀಸಸ್ ಜನ್ಮಿಸಿದಾಗ ಮೇರಿ ತನ್ನ ತಾಯಿಗೆ "ನಾನು ಕೇವಲ ತರಿಯುದ ಗಿಡ; ಆದರೀ ಫಲವನ್ನು ನೋಡು" ಎಂದು ಅಂದಿದ್ದಳೆಂದು ನನಗೆ ತಿಳಿಯಿತು. ಸೂಲಗಿತ್ತಿ ಮಾರ್ಥಾ ಇದನ್ನು ಕೇಳಿದ್ದಳಂತೆ.

ಮೂರು ದಿನಗಳ ಮೇಲೆ ನಾನಾಕೆಯನ್ನು ಕಂಡೆ. ಆಕೆಯ ಕಂಗಳಲ್ಲಿ ಅಚ್ಚರಿಯಿತ್ತು. ಎದೆಗಳು ತುಂಬಿಬಂದಿದ್ದವು. ಮುತ್ತನ್ನಪ್ಪಿದ ಚಿಪ್ಪಿನಂತೆ ಆಕೆಯ ತೋಳುಗಳು ಆ ಚೊಚ್ಚಿಲ ಮಗುವನ್ನಪ್ಪಿದ್ದವು.

ನಾವೆಲ್ಲರೂ ಮೇರಿಯ ಆ ಕೂಸನ್ನು ಮೆಚ್ಚಿದೆವು; ಅವನ ಕಾಳಜಿ ಮಾಡಿದೆವು; ಏಕೆಂದರೆ ಅವನ ಪುಟ್ಟ ಪ್ರಾಣದಲ್ಲಿ ಸುಖೋಷ್ಣತೆಯಿತ್ತು, ಬದುಕಿನ ನಡೆಯು ಸ್ಫುರಣವಿತ್ತು.

ಋತುಗಳು ತಿರುಗಿದವು, ಈಗವನು ನಗೆದುಂಬಿದ ಹಾಗೂ ಸಿಕ್ಕಲ್ಲಿ ತಿರುಗುವ ಹುಡುಗನಾಗಿದ್ದ.

ಅವನೇನು ಗೈಯಬಹುದೆಂಬದು ನಮ್ಮೆಲ್ಲಾರಿಗೂ ಗೊತ್ತಿರಲಿಲ್ಲ; ಏಕೆಂದರೆ ಅವನು ಸದಾ ನಮ್ಮ ಜನಜಂಗುಳಿಯ ಹೊರಗೇ ಇರುತ್ತಿದ್ದ. ಆದರೆ, ಅವನು ಸಾಹಸಿಯೂ, ಅತಿ ಧಿಟ್ಟನೂ ಆದಾಗ್ಯೂ ಗದರಿಸಲ್ಪಡು ತ್ತಿರಲಿಲ್ಲ.

ಬೇರೆ ಹುಡುಗರು ಇವನೊಡನೆ ಆಡುತ್ತಿದ್ದರೆಂಬುದಕ್ಕಿಂತಲೂ ಇವನೇ ಅವರೊಡನೆ ಆಟವಾಡುತ್ತಿದ್ದ.

ಅವನು ಹನ್ನೆರಡು ವರ್ಷದವನಿದ್ದಾಗ ಒಬ್ಬ ಕುರುಡನನ್ನು ಕೈಹಿಡಿದು ಪೂಲು ದಾಟಿಸಿ ಕರೆದೊಯ್ದು ಸುರಕ್ಷಿತ ದಾರಿಗೆ ತಲುಪಿಸಿದ.

ಕೃತಜ್ಞತೆಯಿಂದ ಆ ಕುರುಡ ಅವನನ್ನು ಕೇಳಿದ: "ಮಗೂ, ನೀನಾರು?"

ಅವನು ಉತ್ತರಿಸಿದ: "ನಾನು ಚಿಕ್ಕ ಮಗುವಲ್ಲ; ನಾನು ಜೀಸಸ್."

ಕುರುಡ ನುಡಿದ: "ನಿಮ್ಮ ತಂದೆ ಯಾರು?"

ಅವನು ಉತ್ತರಿಸಿದ: "ದೇವರೇ ನನ್ನ ತಂದೆ."

ಕುರುಡ ನಗುನಗುತ್ತ ಮಾರ್ನುಡಿದ: "ಚೆನ್ನಾಗಿ ಹೇಳಿದೆ ಮಗು! ಆದರೆ ನಿನ್ನ ತಾಯಿ ಯಾರು?"

ಜೀಸಸ್ ಉತ್ತರಿಸಿದ: "ನಾನು ಚಿಕ್ಕ ಮಗುವಲ್ಲ. ಭೂಮಿಯೇ ನನ್ನ ತಾಯಿ."

ಬಳಿಕ ಕುರುಡ ನುಡಿದ: "ಓ ಹಾಗಾದರೆ ನಾನು ಭೂ-ದೇವ ಪುತ್ರನಿಂದ ಪೂಲು ದಾಟಿಸಲ್ಪಟ್ಟೆ."

ಜೀಸಸ್ ಉತ್ತರಿಸಿದ: "ಬೇಕಾದಲ್ಲಿಗೆ, ನೀನು ಬಯಸಿದಲ್ಲಿಗೆ ನಾನು ನಿನ್ನನ್ನು ಕರೆದೊಯ್ಯುವೆನು. ಹಾಗೂ, ನನ್ನ ಕಂಗಳು ನಿನ್ನ ಹೆಜ್ಜೆ ಗುಂಟ ಇದ್ದೇ ಇವೆ.

ನಮ್ಮ ತೋಟಗಳೊಳಗಿನ ಉತ್ತಮ ತಾಳೆಯ ಮರದಂತೆ ಅವನು ಬೆಳೆದು ಬಂದ.

ಅವನಿಗೆ ಹತ್ತೊಂಬತ್ತು ತುಂಬಿದಾಗ ಅವನು ಗಂಡೋಳಿಯಂತೆ ಮನೋಹರನಾಗಿದ್ದ; ಅವನ ಕಂಗಳು ಜೇನುದುಂಬಿದಂತಿದ್ದವು. ದಿನದ ಅಚ್ಚರಿದುಂಬಿದಂತಿದ್ದವು.

ಅವನ ಮುಖದಲ್ಲಿ— ಮರುಭೂಮಿಯ ಹಿಂಡು ತಂಗೊಳಕ್ಕಾಗಿ ಹಾತೊರೆಯುವಂತೆ— ತೃಷೆಯಿತ್ತು.

ಅವನು ಏಕಾಕಿಯಾಗಿ ಹೊಲಗಳಲ್ಲಿ ಅಡಿಯಾಡುತ್ತಿದ್ದ, ನಮ್ಮ

ಕಂಗಳು, ಅಷ್ಟೇ ಏಕೆ, ನಾಝರೇಥದ ಎಲ್ಲ ಹೆಂಗಳೆಯರ ಕಂಗಳು, ಅವನ ಬೆನ್ನ ಹಿಂದೇ ಇರುತ್ತಿದ್ದವು. ಆದರೂ ನಾವವನಿಗೆ ನಾಚುತ್ತಿದ್ದೆವು.

ಪ್ರೇಮಕ್ಕೆ ಸದಾ ಚೆಲುವಿನ ನಾಚಿಕೆಯಿರುತ್ತದೆ. ಆದರೂ ಪ್ರೇಮವು ಚೆಲುವನ್ನು ಬೆನ್ನಟ್ಟಿರುತ್ತದೆ.

ಆ ಬೆಳಕಿನ ಕಾಲವು ಅವನನ್ನು ಗ್ಯಾಲಿಲಿಯ ಗುಡಿಗಳಲ್ಲೂ, ತೋಟಗಳಲ್ಲೂ ಮಾತನಾಡಹಚ್ಚಿತು.

ಒಮ್ಮೊಮ್ಮೆ ಮೇರಿಯೂ ಅವನ ಮಾತುಗಳನ್ನು ಕೇಳಲೆಂದು, ತನ್ನೆದೆಯ ದನಿಯನ್ನೇ ತಾನು ಕೇಳಲೆಂದು ಹೋಗುತ್ತಿದ್ದಳು. ಆದರೆ, ಅವನೂ ಅವನನ್ನು ಪ್ರೀತಿಸುವ ಅವನ ಭಕ್ತವೃಂದವೂ ಜೆರೂಸಲೇಮಕ್ಕೆ ಹೊರಟಾಗ ಆಕೆ ಅಲ್ಲಿಗೆ ಹೋಗುತ್ತಿದ್ದಿಲ್ಲ.

ಏಕೆಂದರೆ ಉತ್ತರ ನಾಡಿನವರಾದ ನಾವು, ಹಗಲೆಲ್ಲ, ಗುಡಿಗೆ ಹಣ್ಣುಕಾಯಿ ಮಾಡಲು ಹೋದಾಗ ಕೂಡ, ಜೆರೂಸಲೇಮದ ಬೀದಿಗಳಲ್ಲಿ ಅಪಹಾಸ್ಯಕ್ಕೊಳಗಾಗುತ್ತಿದ್ದೆವು.

ಮೇರಿಯೂ ದಕ್ಷಿಣನಾಡಿಗೆ ಬಗ್ಗದಷ್ಟು ಸ್ವಾಭಿಮಾನಿಯಾಗಿದ್ದಳು.

ಜೀಸಸ್‌ನು ಮೂಡಣ ಹಾಗೂ ಪಡುವಣ ಕಡೆಯ ನಾಡಿಗೂ ಹೋಗಿ ಬರುತ್ತಿದ್ದ. ಅವನು ಯಾವ ಯಾವ ನಾಡುಗಳಿಗೆ ಹೋಗುತ್ತಿದ್ದನೆಂಬುದು ನಮಗೆ ಗೊತ್ತಿರದಿದ್ದರೂ, ನಮ್ಮ ಹೃದಯಗಳು ಮಾತ್ರ ಅವನ ಬೆಂಬತ್ತಿಯೇ ಇರುತ್ತಿದ್ದವು

ಆದರೆ ಮೇರಿ ಮಾತ್ರ ತನ್ನಂಗಳದಲ್ಲಿಯೇ ಅವನಿಗಾಗಿ ಕಾಯುತ್ತಿದ್ದಳು; ಹಾಗೂ ಪ್ರತಿ ಸಂಜೆಯಲ್ಲಿಯೂ ಆಕೆಯ ಕಂಗಳು ಅವನು ಮನೆಗೆ ಮರಳಿ ಬರುವ ದಾರಿಯನ್ನೇ ನೋಡುತ್ತಿದ್ದವು.

ಆದರೂ ಅವನ ತಿರುಗಿ ಬರುವಿಕೆಯ ಬಗ್ಗೆ ಆಕೆ ನಮ್ಮೆದುರು ಹೀಗೆ ಹೇಳುತ್ತಿದ್ದಳು: "ನನ್ನ ಮಗ ಎಂದು ಹೇಳುವುದಕ್ಕೂ ಅವನು ಮಿತಿ ಮೀರಿದ್ದಾನೆ. ತನ್ನ ಮೌನೀ ಹೃದಯಕ್ಕೂ ಮೀರಿ ಉಲಿಯುವವನಾಗಿದ್ದಾನೆ. ಹೇಗೆ ನಾನು ಅವನನ್ನು ನನ್ನವನೆಂದು ಹೇಳಲಿ?''

ಬಯಲು ಬೆಟ್ಟಕ್ಕೆ ಜನ್ಮ ಕೊಟ್ಟಿತ್ತೆಂಬುದನ್ನು ಮೇರಿಯು ನಂಬಲಾರ

ದಂತಾಗಿದ್ದಳೆಂದೂ ಹಾಗೂ ಅಂಜೀ ಶಿಖರದ ರಹದಾರಿಯೆಂಬುದನ್ನು ಆಕೆಯ ಶುಭ್ರ ಹೃದಯವು ಕಂಡಿದ್ದಿಲ್ಲವೆಂದೂ ನಮಗೆನಿಸುತ್ತಿತ್ತು.

ಆ ವ್ಯಕ್ತಿಯುದವಳಿಗೆ ತಿಳಿದಿತ್ತು, ಆದರೆ ಅವನು ಅವಳ ಮಗನಾದುದ ರಿಂದ ಅವನನ್ನು ತಿಳಿಯಲು ಆಕೆಗೆ ಧೈರ್ಯವಾಗುತ್ತಿದ್ದಿಲ್ಲ.

ಒಮ್ಮೆ, ಜೀಸಸ್‌ನು, ಮೀನುಗಾರರೊಡನಿರಲೆಂದು ಸರೋವರಕ್ಕೆ ಹೊರಟಾಗ, ಆಕೆ ನನಗೆಂದಳು: "ಭೂಮಿಯಿಂದೊಗೆದೇಳುವ ಈ ಅವಿಶ್ರಾಂತ ಪ್ರಾಣಿಯನ್ನುಳಿದರೆ ಅವನು ಮನುಷ್ಯನೇ? ಚಿಕ್ಕಿಗಳನ್ನು ಬಯಸುವ ಕಾಮನೆಯನ್ನುಬಿಟ್ಟರೆ ಅವನು ಮಾನವನೇ ?

"ನನ್ನ ಮಗನೇ ಒಂದು ಆಕಾಂಕ್ಷೆಯಾಗಿದ್ದಾನೆ. ಚಿಕ್ಕೆಗಳನ್ನು ಬಯಸುವ ನಮ್ಮೆಲ್ಲರ ಕಾಮನೆಯೇ ಅವನಾಗಿದ್ದಾನೆ.

"ನನ್ನ ಮಗ ಎಂದೆನಲ್ಲವೇ ನಾನು? ದೇವರು ನನ್ನನ್ನು ಕ್ಷಮಿಸಲಿ. ಆದರೂ ನನ್ನ ಹೃದಯಾಂತರಾಳದಲ್ಲಿ ನಾನೇ ಅವನ ತಾಯಿ.

ಇನ್ನು ಮೇಲೆ, ಮೇರಿಯ ಹಾಗೂ ಅವಳ ಮಗನ ಬಗ್ಗೆ ಹೆಚ್ಚು ಹೇಳುವುದು ಬಲು ಬಿಗಿಯಾಗಿದೆ. ಆದರೆ, ನನ್ನ ಗಂಟಲು ಗೊಗ್ಗರಾಗಿದ್ದರೂ, ನನ್ನ ನುಡಿಗಳು ಆನುಗೋಲಿನ ಕುಂಟರಂತೆ ನಿಮ್ಮನ್ನು ತಲುಪುತ್ತಿದ್ದರೂ, ನಾನು ಕಂಡುದನ್ನು ಕೇಳಿದುದನ್ನು ನಿಮಗೆ ಹೇಳಲೇಬೇಕು.

ಆಗ ವರ್ಷಾಕಾಲದ ಹರೆಯವಾಗಿದ್ದು ಗುಡ್ಡದ ಮೇಲೆ ಕೆಂಪು ಹೂಗಳು ಅರಳಿ ನಳನಳಿಸುತ್ತಿದ್ದವು; ಜೀಸಸ್‌ನು ಅಂದು ತನ್ನ ಶಿಷ್ಯರನ್ನು ಕರೆದು ಅವರಿಗೆ ಹೀಗೆ ನುಡಿದ: "ನನ್ನೊಡನೆ ಜೆರೂಸಲೇಮಕ್ಕೆ ಬನ್ನಿರಿ, ಅಲ್ಲಿ 'ಪಸೋಹಾ' ಹಬ್ಬದಲ್ಲಿ ಕುರಿಕಡಿಯುತ್ತಿರುವುದನ್ನು ಕಣ್ಮುಟ್ಟ ನೋಡಿರಿ."

ಅದೇ ದಿನ ಮೇರಿ ನನ್ನ ಮನೆಗೆ ಬಂದು ನನಗೆಂದಳು: "ಅವನು ಆ ಪವಿತ್ರ ಪಟ್ಟಣಕ್ಕೆ ಹೊರಟು ನಿಂತಿದ್ದಾನೆ. ನೀನೂ ನನ್ನೊಡನೆ ಬಂದು ಉಳಿದ ಹೆಂಗಸರೊಡನೆ ಅವನನ್ನು ಹಿಂಬಾಲಿಸುವಿಯಾ?"

ನಾವೆಲ್ಲರೂ, ಮೇರಿ ಮತ್ತು ಅವಳ ಮಗನೊಡನೆ ಆ ದೂರದ ದಾರೀ ನಡೆದು ಜೆರೂಸಲೇಮವನ್ನು ತಲುಪಿದೆವು. ನಗರ ದ್ವಾರದಲ್ಲಿ ಅಸಂಖ್ಯ ಸ್ತ್ರೀಪುರುಷರ ಗುಂಪು ಜಯಜಯಕಾರದೊಡನೆ ನಮ್ಮನ್ನು ಸ್ವಾಗತಿಸಿತು;

ಏಕೆಂದರೆ ಜೀಸಸ್‌ನ ಆಗಮನದ ಸುದ್ದಿ ಅವನ ಪ್ರೇಮಿಗಳಿಗೆ ಮೊದಲೇ ತಿಳಿದು ಬಂದಿತ್ತು.

ಆದರೆ ಅದೇ ರಾತ್ರಿ ಜೀಸಸ್‌ನು ತನ್ನ ಜನರೊಡನೆ ಆ ಪಟ್ಟಣವನ್ನು ಬಿಟ್ಟು ಹೊರಟನು.

ಅವನು ಬೆಥನಿಗೆ ಹೋದನೆಂದು ನಮಗೆ ತಿಳಿದು ಬಂತು.

ಮೇರಿ, ಅವನು ತಿರುಗಿಬರುವ ದಾರೀ ನೋಡುತ್ತ, ನಮ್ಮೊಡನೆ ಖಾನಾವಳಿಯಲ್ಲಿ ಉಳಿದಳು.

ಗುರುವಾರದ ಮುನ್ನಾದಿನ ಸಂಜೆಗೇ ಅವನನ್ನು ಬಯಲಲ್ಲಿಯೇ ಸೆರೆ ಹಿಡಿದು ಕೈದಿಯನ್ನಾಗಿಸಿದರು.

ಅವನು ಕೈದಾದುದು ನಮಗೆ ತಿಳಿದು ಬಂದಾಗ, ಮೇರಿ ಆ ಬಗ್ಗೆ ಒಂದು ಮಾತನ್ನೂ ಕೂಡ ಆಡಲಿಲ್ಲ. ಆದರೆ ಆಕೆಯಿನ್ನೂ ನಾಚ್ಚಿಂರೆಥದಲ್ಲಿ ವಧುವಾಗಿದ್ದಾಗ ಆಕೆಯ ಮುಖದ ಮೇಲೆ ಕಾಣಬರುತ್ತಿದ್ದ ಆ ಸಂಕಲ್ಪಿತ ನೋವು-ಸಲಿವುಗಳು ಈಗ ಸಿದ್ಧಿಪಡೆದ ಚಿಹ್ನೆ ಅವಳ ಕಂಗಳಲ್ಲಿ ಮಿನು ಗುತ್ತಿತ್ತು.

ಆಕೆ ರೋದಿಸಲಿಲ್ಲ. ತನ್ನ ಮಗನ ಭೂತದ ಬಗ್ಗೆ ಪ್ರಲಾಪಿಸದ ತಾಯಿ ಭೂತದಂತೆ ಆಕೆ ನಮ್ಮೊಡನೆ ಚಲಿಸುತ್ತಿದ್ದಳು.

ನಾವು ನೆಲದ ಮೇಲೆ ಕುಸಿದು ಕಳಿತಿದ್ದರೂ ಆಕೆ ಸ್ಥಿರತೆಯಿಂದ ಆ ಕೋಣೆಯಲ್ಲಿ ಅತ್ತಿಂದಿತ್ತ ಅಡಿಯಾಡುತ್ತಿದ್ದಳು.

ಆಕೆ ಆ ಕಿಡಿಕೆಯ ಬಳಿ ಬಂದು ಮೂಡಣದೆಡೆಗೆ ದಿಟ್ಟಿಸಿ ನೋಡುತ್ತ ನಿಲ್ಲುತ್ತಿದ್ದಳು; ಬಳಿಕ ತನ್ನೆರಡೂ ಕೈ ಬೆರಳುಗಳಿಂದ ತಲೆಕೂದಲನ್ನು ಹಿಂದಕ್ಕೆ ಕೊಡವಿಕೊಳ್ಳುತ್ತಿದ್ದಳು.

ಅರುಣೋದಯವಾದಾಗ ಕೂಡ ಆಕೆ ನಮ್ಮೊಡನೆ, ಕಾಡಿನಲ್ಲಿ ಸೈನಿಕ ರಿಲ್ಲದೆ ಒಂಟಿಯಾಗಿ ನಿಂತ ಧ್ವಜದಂತೆ, ಇನ್ನೂ ನಿಂತೇ ಇದ್ದಳು.

ಆಕೆಯ ಮಗನಿಗೆ ನಾಳೆಗೇನಾಗುವದೆಂಬದು ನಮಗೆ ತಿಳಿದಿದ್ದರಿಂದ ನಾವು ರೋದಿಸಿದೆವು. ಆಕೆ ಮಾತ್ರ, ತನ್ನ ಮಗನ ಭವಿತವ್ಯ ತಿಳಿದಿದ್ದರೂ ರೋದಿಸಲಿಲ್ಲ.

ಆಕೆಯ ಎಲವುಗಳು ಕಂಚುಗಟ್ಟಿದ್ದವು, ಆಕೆಯ ನರಗಳು ಮರಗಟ್ಟಿದ್ದವು, ಆಕೆಯ ಕಂಗಳೋ ಆಕಾಶದಂತೆ ಅಗಲವೂ ಧಿಟ್ಟವೂ ಆಗಿದ್ದವು.

ಗಾಳಿಯಲ್ಲಿ ತನ್ನ ಗೂಡು ಬೆಂಕಿಬಿದ್ದು ಉರಿಯುತ್ತಿರುವಾಗಲೂ, ಹಾಡುತ್ತಿರುವ ಹಕ್ಕಿಯನ್ನು ನೀವು ಕಂಡಿದ್ದೀರಾ?

ಕಂಬನಿಗಳಿಗೂ ಮೀರಿದ ದುಃಖೀ ಸ್ತ್ರೀಯನ್ನು ನೀವು ನೋಡಿದ್ದೀರಾ? ಅಥವಾ ತನ್ನ ನೋವನ್ನೇ ಮೀರಿನಿಂತ ಹೃದಯವನ್ನು ಕಂಡಿದ್ದೀರಾ?

ಅಂಥ ಸ್ತ್ರೀಯನ್ನು ನೀವು ಕಂಡಿರಲಾರಿರಿ, ಏಕೆಂದರೆ ನೀವು ಮೇರಿಯ ಸಮ್ಮುಖದಲ್ಲಿ ನಿಂತವರಲ್ಲ. ಮತ್ತು ನೀವಾ ಅದೃಶ್ಯ ಮಾತೆಯಿಂದ ಅಪ್ಪಲ್ಪಟ್ಟವರಲ್ಲ.

ಆ ನಿಶ್ಶಬ್ದ ಗಳಿಗೆಯಲ್ಲಿ, ಮೌನದ ಮುಚ್ಚಿದ ಖುರಗಳು ಅನಿದ್ರಿತರ ಹೃದಯದ ಮೇಲೆ ಬಡಿಯುತ್ತಿರುವಾಗ, ಝಬೇದಿಯ ಚಿಕ್ಕಮಗ ಜಾನ ಒಂದು ನುಡಿದ: "ಮೇರಿ ಮಾತಾ, ಜೀಸಸ್ ಮುಂದೆ ಹೋಗುತ್ತಲಿದ್ದಾನೆ. ಬನ್ನಿ, ನಾವೆಲ್ಲರೂ ಅವನನ್ನು ಹಿಂಬಾಲಿಸೋಣ."

ಮೇರಿ ಅವನ ಭುಜದ ಮೇಲೆ ಕೈಯಿಕ್ಕಿದಳು, ಅವರೆಲ್ಲ ಹೊರಹೊರಟರು, ನಾವೂ ಹಿಂಬಾಲಿಸಿದೆವು.

ನಾವು ಡೇವಿಡ್ ಟಾವರದ ಬಳಿ ಬಂದಾಗ, ಜೀಸಸ್ ತನ್ನ ಶಿಲುಬೆ ಹೊತ್ತೊಯ್ಯುತ್ತಿರುವುದನ್ನು ಕಂಡೆವು. ಅವನ ಸುತ್ತುಮುತ್ತೆಲ್ಲ ಜನ ಜಂಗುಳಿಯ ಗುಂಪು ಕಿಕ್ಕಿರಿದಿತ್ತು.

ಬೇರೆ ಇನ್ನಿಬ್ಬರೂ, ತಮ್ಮ ತಮ್ಮ ಶಿಲುಬೆಗಳನ್ನು ಹೊತ್ತೊಯ್ಯುತ್ತಿದ್ದರು.

ಮೇರಿ ತಲೆಯೆತ್ತಿಕೊಂಡು ನಮ್ಮೊಡನೆ ತನ್ನ ಮಗನ ಹಿಂದೆ ನಡೆದು ಬರುತ್ತಿದ್ದಳು. ಆಕೆಯ ಹೆಜ್ಜೆ ಭದ್ರವಾಗಿದ್ದವು.

ಅವಳ ಹಿಂದೆ, ಝಿಯಾನ, ರೋಮು,— ಅಲ್ಲಲ್ಲ— ಸಮಗ್ರ ಲೋಕವೇ, ಆ ಮುಕ್ತಮಾನವನ ಮೇಲೆ ಸೇಡುತೀರಿಸಿಕೊಳ್ಳಲೆಂದು ನಡೆದು ಬರುತ್ತಿತ್ತು.

ನಾವೆಲ್ಲ ಗುಡ್ಡದ ಬಳಿ ಬಂದಾಗ, ಅವನನ್ನು ಶಿಲುಬೆಯ ಮೇಲೆ ಎತ್ತರಿಸಿ ಬಿಟ್ಟಿದ್ದರು.

ನಾನು ಮೇರಿಯ ಕಡೆ ನೋಡಿದೆ. ಆಕೆಯ ಮುಖ ಮುದ್ರೆ ದುಃಖಿತ ಸ್ತ್ರೀಯಂತಿರಲಿಲ್ಲ; ಎಂದೆಂದಿಗೂ, ಮುಗುಗಳನ್ನು ಹಡೆಯುತ್ತಿದ್ದ ಹಾಗೂ ಹೂಳುತ್ತಿದ್ದ ಫಲವತ್ತಾದ ಭೂಮಾತೆಯಂತೆ ಅದು ಕಂಗೊಳಿಸುತ್ತಿತ್ತು.

ಬಳಿಕ ಆಕೆಯ ಕಂಗಳೆದುರು ಅವನ ಬಾಲ್ಯದ ಸ್ಮೃತಿ ಬಂತು. ಆಕೆ ಗಟ್ಟಿಯಾಗಿ ನುಡಿದಳು: "ನನ್ನ ಮಗ, ಅಲ್ಲ, ಅವನು ನನ್ನ ಮಗನಲ್ಲ; ನನ್ನ ಗರ್ಭವನ್ನೊಮ್ಮೆ ಸಂದರ್ಶಿಸಿದ ಮಾನವ; ನಿನ್ನ ಶಕ್ತಿಯ ಬಗ್ಗೆ . ನನಗೆ ವೈಭವ ಬಂದಿದೆ. ನಿನ್ನ ಕೈಗಳಿಂದ ಹರಿದು ಬರುವ ಒಂದೊಂದು ನೆತ್ತರ ಹನಿಯೂ, ನಾಡಿನ ಕ್ಷೇಮಪ್ರವಾಹವಾಗುವುದೆಂದು ನನಗೆ ಗೊತ್ತಿದೆ.

"ಒಮ್ಮೆ ನನ್ನ ಹೃದಯವು ಸೂರ್ಯಾಸ್ತ ಸಮಯದಲ್ಲಿ ಸತ್ತಂತೆ ನೀನೂ ಕೂಡ ಈ ಬಿರುಗಾಳಿಯಲ್ಲಿ ಸಾಯುವಿ; ಇದಕ್ಕಾಗಿ ನಾನು ಶೋಕಿಸುವದಿಲ್ಲ"

ಆ ಕ್ಷಣದಲ್ಲಿ, ಸೆರಗಿನಿಂದ ಮೋರೆ ಮುಚ್ಚಿಕೊಂಡು ಉತ್ತರದೇಶಕ್ಕೆ ಓಡಿ ಹೋಗಬೇಕೆಂದು ನನಗೆನ್ನಿಸಿತು. ಅಷ್ಟರಲ್ಲಿ ಮೇರಿ ಹೀಗೆ ನುಡಿದುದು ನನಗೆ ಕೇಳಬಂತು: "ನನ್ನ ಮಗನಲ್ಲದ ನನ್ನ ಮಗನೇ, ನಿನ್ನ ಬಲಗಡೆ ಗಿರುವ ಮನುಷ್ಯನಿಗೆ, ಅವನ ಇಂಥ ಕಷ್ಟದಲ್ಲಿಯೂ ಅವನನ್ನು ಸುಖಿ ಯನ್ನಾಗಿ ಮಾಡಿದಂಥ, ಯಾವ ಮಾತುಗಳನ್ನು ಹೇಳಿದೆ? ಅವನ ಮುಖದ ಮೇಲೆ ಮರಣ ಛಾಯೆಯೇ ಬೆಳಕಾಗಿ ಬೆಳಗಿದೆಯಲ್ಲ, ಹಾಗೂ ನಿನ್ನಿಂದ ತನ್ನ ದೃಷ್ಟಿಯನ್ನು ಅವನು ತಿರುಗಿಸಲಾರದಿರುವನಲ್ಲ?

"ಈಗ ನೀನು ನನ್ನೆಡೆಗೆ ನೋಡುತ್ತ ನಗುತ್ತಿರುವಿ, ಹೀಗೆ ನೀನು ನಗುತ್ತಿರುವುದರಿಂದಲೇ ನೀನೇ ಗೆದ್ದಿರುವಿಯೆಂದು ನನಗೆನಿಸುತ್ತದೆ."

ಜೀಸಸ್ ತನ್ನ ತಾಯಿಯ ಕಡೆಗೆ ನೋಡಿ ನುಡಿದ: "ಮೇರಿ, ಈ ಕ್ಷಣದಿಂದ ನೀನು ಜಾನನ ತಾಯಿಯಾಗು."

ಮತ್ತೆ ಅವನು ಜಾನನಿಗೆ ನುಡಿದ: "ನೀನು ಈ ಸ್ತ್ರೀಯ ಪ್ರೀತಿಯ ಪುತ್ರನಾಗು. ಇವಳ ಮನೆಗೆ ಹೋಗು. ಒಂದು ಕಾಲದಲ್ಲಿ ನಾನಿದ್ದ ಅದರ ಅಂಗಳದಲ್ಲಿ ನಿನ್ನ ನೆರಳು ಬೀಳಲಿ. ನನ್ನ ನೆನಪಿಗಾಗಿ ನೀನಿದನ್ನು ಮಾಡು"

ಮೇರಿ ಅವನೆಡೆಗೆ ತನ್ನ ಬಲಗೈಯನ್ನೆತ್ತಿಹಿಡಿದಳು; ಆಗ ಆಕೆ ಒಂದೇ ಟೊಂಗೆಯ ಗಿಡದಂತೆ ಕಂಡಳು. ಮತ್ತೆ ಆಕೆ ಉದ್ಗರಿಸಿದಳು: "ನನ್ನ ಮಗ

ನಲ್ಲದ ನನ್ನ ಮಗನೇ, ಇದು ದೇವರಿಗಾಗಿ ಆಗಿದ್ದರೆ, ದೇವರೇ ನಮಗೆ ಇದರಲ್ಲಿ ಶಾಂತಿಯನ್ನೂ ತಿಳಿವನ್ನೂ ನೀಡಲಿ, ಆದರೆ ಇದು ಮಾನವನಿಗಾಗಿ ಆಗಿದ್ದರೆ, ದೇವರು ಆ ಮಾನವನನ್ನು ಕೊನೆವರೆಗೂ ಕ್ಷಮಿಸಲಿ.

''ಇದು ದೇವರಿಗಾಗಿ ಆಗಿದ್ದರೆ, ಲೆಬನಾನದ ಹಿಮವೇ ನಿನ್ನ ಮೃತ ವಸ್ತ್ರವಾಗಲಿ, ಮತ್ತಿದು ಈ ಆಚಾರ್ಯ ಈ ಸೈನಿಕರಿಗಾಗಿ ಆಗಿದ್ದರೆ ಇದೋ, ನಿನ್ನ ಮೈ ಮುಚ್ಚುವುದಕ್ಕೆ ನನ್ನಲ್ಲಿ ಈ ವಸ್ತ್ರವಿದೆ.

''ನನ್ನ ಮಗನಲ್ಲದ ನನ್ನ ಮಗನೇ, ಇಲ್ಲಿ, ಯಾವುದು ದೇವ ನಿರ್ಮಿತವೋ, ಅದೆಂದಿಗೂ ನಾಶವಾಗದು; ಅದನ್ನು ಮಾನವನು ನಾಶಮಾಡ ಬಹುದೆಂದರೂ, ಅವನ ಕಣ್ಣಿಗೇ ಕಾಣದಂತೆ ಅದು ಪುನರ್ನಿರ್ಮಿತವಾಗಿ ನಿಲ್ಲುವುದು.''

ಆ ಹೊತ್ತಿನಲ್ಲಿ ಸ್ವರ್ಗವೇ ಅವನನ್ನು ಬುವಿಗಾಗಿ ಒಂದು ಕೂಗಾಗಿ, ಒಂದು ಉಸಿರಾಗಿ ಎಡೆಗೊಟ್ಟಿತ್ತು.

ಮೇರಿಯೂ ಅವನನ್ನು ಮಾನವನಿಗಾಗಿ, ಒಂದು ಗಾಯವಾಗಿ, ಒಂದು ಲೇಪನವಾಗಿ ಎಡೆಗೊಟ್ಟಿದ್ದಳು.

ಮೇರಿ ನುಡಿದಳು: ''ನೋಡಿರಿಲ್ಲಿ, ಅವನು ಹೊರಟುನಡೆದ. ಕಾಳಗ ಸಮಾಪ್ತಿಯಾಯಿತು. ಚಿಕ್ಕೆ ಬೆಳಗಿಹೋಯಿತು. ಹಡಗು ದಡ ತಲುಪಿತು. ಒಮ್ಮೆ ನನ್ನ ಮಡಿಲಲ್ಲಿದ್ದ ಅವನು ಈಗ ದಿಕ್ಕುದಿಕ್ಕುಗಳಲ್ಲಿಯೂ ಮಿಡಿಯುತ್ತಿದ್ದಾನೆ''

ನಾವು ಅವಳ ಸನಿಹಕ್ಕೆ ಬಂದೆವು. ಆಕೆ ನಮಗೆ ಹೇಳಿದಳು: ''ಮೃತ್ಯುಮುಖದಲ್ಲಿ ಕೂಡ ಅವನು ನಗುನಗುತ್ತಿದ್ದ ಅವನೇ ಗೆದ್ದು ವಿಜಯಿಯಾದ. ನಿಜವಾಗಿಯೂ ನಾನು ಒಬ್ಬ ವಿಜಯಿಯ ಮಾತೆಯಾದೆ.

ಬಳಿಕ, ಚಿಕ್ಕ ಶಿಷ್ಯನಾದ ಜಾನನ ಮೈಯಾಸರೆ ಮಾಡಿಕೊಂಡು ಮೇರಿ ಜೆರೂಸಲೇಮಕ್ಕೆ ಮರಳಿದಳು.

ಆಕೆ ಕೃತಕೃತ್ಯ ಸ್ತ್ರೀಯಾಗಿದ್ದಳು.

ನಾವೆಲ್ಲ ನಗರದ್ವಾರವನ್ನು ತಲುಪುತ್ತಿರುವಾಗ ನಾನು ಆಕೆಯ ಮುಖದೆಡೆಗೆ ನೋಡಿದೆ; ನನಗೆ ಅಚ್ಚರಿಯೆನಿಸಿತು. ಏಕೆಂದರೆ ಆ ದಿನ

ಜೀಸಸ್‌ನ ಮಸ್ತಕವು ಸಕಲರಿಗಿಂತಲೂ ಉನ್ನತತಮವಾಗಿತ್ತು; ಆದರೂ ಮೇರಿಯ ಮಸ್ತಕವೇನೂ ಕಡಿಮೆ ಉನ್ನತವಾಗಿರಲಿಲ್ಲ.

ವರ್ಷದ ವಸಂತದಲ್ಲಿಯೇ ಇದೆಲ್ಲವೂ ನಡೆದುಹೋಯಿತು.

ಈಗ ಚಳಿಗಾಲ. ಜೀಸಸ್‌ನ ತಾಯಿ ಮೇರಿ ಪುನಃ ತನ್ನ ವಾಸ ಸ್ಥಾನಕ್ಕೆ ಬಂದಿದ್ದಾಳೆ. ಏಕಾಕಿಯಾಗಿದ್ದಾಳೆ.

ಈಗೆರಡು ವಾರಗಳ ಹಿಂದೆ, ನನ್ನ ಹೃದಯವೇ ಎದೆಯಲ್ಲಿಯ ಕಲ್ಲಿನಂತಾಗಿತ್ತು. ಏಕೆಂದರೆ ನನ್ನ ಮಗ ನನ್ನನ್ನುಳಿದು ಹಡಗಿನಲ್ಲಿ ಟೀಯರಕ್ಕೆ ಹೊರಟು ಹೋದ. ಅವನಿಗೆ ನಾವಿಕನಾಗುವುದು ಬೇಕಿತ್ತು.

ತಾನೇನೂ ಇನ್ನು ತಿರುಗಿ ಬರುವದಿಲ್ಲೆಂದು ಅವನು ಎಂದಿದ್ದ.

ಒಂದು ದಿನ ಸಂಜೆ ನಾನು ಮೇರಿಯ ಕಡೆಗೆ ಹೋದೆ.

ಆಕೆಯ ಮನೆಯೊಳಕ್ಕೆ ನಾನು ಹೋದಾಗ ಆಕೆ ಮಗ್ಗದ ಮೇಲಿದ್ದಳು, ಆದರೆ ನೇಯುತ್ತಿದ್ದಿಲ್ಲ. ಆಕೆ ನಾರ್ಥುರೆಥದಾಚೆಗಿನ ಆಕಾಶವನ್ನು ನಿಟ್ಟಿಸುತ್ತಿದ್ದಳು.

ನಾನಾಕೆಗೆಂದೆ : "ಮೇರಿಗೆ ಜಯವಾಗಲಿ."

ಆಕೆ ತನ್ನ ತೋಳುಗಳನ್ನು ಮುಂದೆ ಚಾಚಿ ನುಡಿದಳು : "ಬಾ, ಇಲ್ಲಿ ನನ್ನ ಬದಿಗೇ ಕೂಡು. ಇಬ್ಬರೂ ಗುಡ್ಡಗಳ ಮೇಲೆ ರಕ್ತ ಸುರಿಸುತ್ತಿರುವ ಆ ಸೂರ್ಯನನ್ನು ದಿಟ್ಟಿಸುತ್ತಿರೋಣ."

ನಾನು ಆಕೆಯ ಬದಿ ಹೋಗಿ ಆಸನದ ಮೇಲೆ ಕುಳಿತೆ. ನಾವು ಕಿಡಿಕಿಯಿಂದ ಪಶ್ಚಿಮದೆಡೆಗೆ ನಿಟ್ಟಿಸತೊಡಗಿದೆವು.

ಒಂದು ಕ್ಷಣ ಕಳೆದು ಮೇರಿ ನುಡಿದಳು : "ಈ ಸಂಜೆಯ ಮುಂದೆ ಈ ಸೂರ್ಯನನ್ನು ಯಾರು ಶಿಲುಬೆಗೇರಿಸುತ್ತಿರಬಹುದು— ಎಂದು ನನಗೆ ಆಶ್ಚರ್ಯವಾಗಿದೆ."

ಬಳಿಕ ನಾನೆಂದೆ : "ನಾನು ನಿನ್ನಲ್ಲಿ ಸಾಂತ್ವನಕ್ಕಾಗಿ ಬಂದಿದ್ದೇನೆ. ನನ್ನ ಮಗ ನನ್ನನ್ನು ಬಿಟ್ಟು ಸಾಗರಯಾನ ಮಾಡಿದ. ಮನೆಯಲ್ಲಿ ಈ ತುದಿಯಿಂದ ಆ ತುದಿಯವರೆಗೂ ನಾನೊಬ್ಬಳೇ ಏಕಾಕಿಯಾಗಿದ್ದೇನೆ.

ಆ ಮೇಲೆ ಮೇರಿ ನುಡಿದಳು : "ನಾನು ನಿನ್ನನ್ನು ಸಾಂತ್ವನಗೊಳಿಸಬಹುದು; ಆದರೆ ಹೇಗೆ ಮಾಡಲಿ ?"

ನಾನೆಂದೆ: "ನೀನು ನಿನ್ನ ಮಗನ ಬಗ್ಗೆ ಹೇಳಿದರೆ ನನಗೆ ಸಾಂತ್ವನ ವೆನಿಸುವದು."

ಮೇರಿ ನನ್ನೆಡೆಗೆ ನೋಡಿ ನಕ್ಕಳು; ನನ್ನ ಹೆಗಲ ಮೇಲೆ ಕೈಹಾಕಿ ಆಕೆ ನುಡಿದಳು: "ನಾನು ಅವನ ಬಗ್ಗೆ ಹೇಳುವೆ. ನಿನ್ನನ್ನು ಸಾಂತ್ವನ ಗೊಳಿಸುವ ಅದು ನನ್ನನ್ನೂ ಸಾಂತ್ವನಗೊಳಿಸೀತು."

ಬಳಿಕ ಆಕೆ ಜೀಸಸ್‌ನ ಬಗ್ಗೆ ಹೇಳಿದಳು. ಮೊದಲಿನಿಂದಿದ್ದುದೆಲ್ಲವೆಲ್ಲ ವನ್ನೂ ಬಹಳ ಹೊತ್ತಿನವರೆಗೆ ಹೇಳಿದಳು.

ಅವಳಾ ಮಾತಿನಲ್ಲಿ, ಅವಳಿಗೆ, ಅವಳ ಮಗನ ಹಾಗೂ ನನ್ನ ಮಗನ ಬಗ್ಗೆ ಅಂತರವೇ ಇದ್ದಿಲ್ಲವೆಂದು ನನಗೆನಿಸಿತು.

ಏಕೆಂದರೆ ಆಕೆ ನನಗೆಂದಳು: "ನನ್ನ ಮಗನೂ ಒಬ್ಬ ಸಾಗರ ಸವಾ ರನೇ. ನಾನೂ ನನ್ನ ಮಗನನ್ನೊಪ್ಪಿಸಿದಂತೆ ನೀನೂ ಏಕೆ ನಿನ್ನ ಮಗನನ್ನು ಅಲೆಗಳಿಗೊಪ್ಪಿಸಬಾರದು ?

"ಹೆಣ್ಣು ಯಾವಾಗಲೂ ಒಂದು ಬಸಿರು, ಒಂದು ತೊಟ್ಟಿಲು ಅಲ್ಲದೆ ಆಕೆ ಗೋರಿಯಲ್ಲ. ನಮ್ಮ ಕೈಗಳು ನಮಗಾಗಿರದ ವಸ್ತ್ರಗಳನ್ನು ನೇಯು ವಂತೆಯೇ, ಜೀವನಕ್ಕೆ ಜೀವನವನ್ನು ಈಯಲು ನಾವು ಸಾಯುತ್ತೇವೆ.

"ನಾವೆಂದೂ ರುಚಿನೋಡಲಾರದ ಮೀನಕ್ಕಾಗಿ ನಾವು ಮೀನುಬಲೆ ಯನ್ನು ಹೆಣೆಯುತ್ತೇವೆ.

"ಅದಕ್ಕಾಗಿಯೇ ನಮಗೆ ದುಃಖ; ಆದರೂ ಒಟ್ಟಿನಲ್ಲಿ ಅದೇ ನಮ್ಮ ಆನಂದ !"

ಮೇರಿ ನನಗೆ ಈ ರೀತಿ ಹೇಳಿದಳು.

ಬಳಿಕ ಆಕೆಯನ್ನುಳಿದು ನನ್ನ ಮನೆಗೆ ನಾನು ಹೊರಟುಬಂದೆ. ಹಗಲಿನ ಬೆಳಕು ಕಳೆದುಹೋಗಿದ್ದರೂ ಇನ್ನೂ ಹೆಚ್ಚು ಅರಿವೆಯನ್ನು ನೇಯಲು ನಾನು ನನ್ನ ಮಗ್ಗದ ಮೇಲೆ ಕುಳಿತುಕೊಂಡೆ.

## ೬೩. "ಜಸ್ಟಸ್" ಅಡ್ಡಹೆಸರಿನ ಜೋಸೆಫ

ಆವನೊಬ್ಬ ಅಪಭ್ರಂಶ, ನಾಮಾನ್ಯ ಬೀಜದ ಸಂತಾನ, ವಿಲಕ್ಷಣ ಹಾಗೂ ಹಿಂಸಾಮಯೀ ಪುರುಷನಾಗಿದ್ದ ಎಂದು ಅವರು ಹೇಳುತ್ತಾರೆ.

ಕೇವಲ ಗಾಳಿ ಮಾತ್ರ ಅವನ ಕೂದಲುಗಳನ್ನು ಹಿಕ್ಕುತ್ತಿತ್ತು, ಮಳೆ ಮಾತ್ರ ಅವನ ಮೈಯನ್ನೂ ವಸ್ತ್ರಗಳನ್ನೂ ತೊಳೆಯುತ್ತಿತ್ತು ಎಂದು ಅವರು ಹೇಳುತ್ತಾರೆ.

ಅವನು ಹುಚ್ಚನೆಂದು ಅವರು ಬಗೆಯುತ್ತಾರೆ; ಅವನ ಮಾತುಗಳನ್ನು ರಕ್ಕಸನುಡಿಗೆ ಆರೋಪಿಸುತ್ತಾರೆ.

ಆದರೂ ನೋಡಿ, ಈ ಕೀಳ್ಗೈದ ಮಾನವನೇ ಆಹ್ವಾಹನೆಯನ್ನು ನಿಶಾಮಯಗೊಳಿಸಿದ್ದ. ಅದರ ದನಿ ಎಂದೂ ಅಡಗದು.

ಅವನು ಒಂದು ಗೀತ ಹಾಡಿದ; ಅದರ ಮಾಧುರ್ಯವನ್ನಾರೂ ಪ್ರತಿಬಂಧಿಸಲಾರರು. ತಲೆತಲೆಮಾರುಗಳ ವರೆಗೂ ಅದು ನಿನದಿಸುವುದು. ಅದು ತನಗೆ ಜನ್ಮವಿತ್ತ ತುಟಿಗಳನ್ನೂ, ತೂಗಿ ಕೇಳಿದ ಕಿವಿಗಳನ್ನೂ ನೆನೆಯುತ್ತ ಮಂಡಲದಿಂದ ಮಂಡಲಕ್ಕೇರುವುದು.

ಅವನು ಪರದೇಶಿಯಾಗಿದ್ದ. ಹೌದು ಅವನು ಪರದೇಶಿ, ದೇಗುಲದ ದಾರಿಯ ದಾರಿಕಾರ. ನಮ್ಮ ಬಾಗಿಲುಗಳನ್ನು ತಟ್ಟಿದ ಸಂದರ್ಶಕ, ದೂರ ದೇಶದ ಅತಿಥಿ, ಆಗಿದ್ದ.

ಆವನಿಗೊಬ್ಬ ಸುಪ್ರಸನ್ನ ಯಜಮಾನನು ಇಲ್ಲಿ ಕಂಡುಬರದ್ದರಿಂದಲೇ ಅವನು ತನ್ನ ತಾಣಕ್ಕೆ ಮರಳಿ ನಡೆದ.

## ೬೪. ಫಿಲಿಪ್

ನಮ್ಮ ಪರಮಪ್ರಿಯ ಜೀಸಸ್ ತೀರಿಕೊಂಡಾಗ, ಸಮಗ್ರ ಮಾನವ ಕುಲವೇ ತೀರಿಕೊಂಡಿತು. ಸೃಷ್ಟಿಯೊಳಗಿನ ಸಕಲ ವಸ್ತುಗಳೂ ಸ್ತಬ್ಧವಾದವು, ಮುಪ್ಪಾದವು. ಮೂಡಲವೇ ಕತ್ತಲಿಸಿತು; ಅಲ್ಲಿಂದ ಹೊರಟ ಬಿರುಗಾಳಿ ಬುವಿಯನ್ನೇ ಗುಡಿಸಿಬಿಟ್ಟಿತು. ಆಕಾಶದ ಕಂಗಳು ರೆಪ್ಪೆಬಡಿದ

ಕೊಂಡವು, ಮಳೆಯು ಭಯಂಕರವಾಗಿ ಧೋ ಧೋ ಸುರಿದು, ಅವನ ಕರಚರಣಗಳಿಂದೊಗೆದ ಶೋಣಿತವನ್ನು ಹರಿಸಿಕೊಂಡು ಹೋಯಿತು.

ನಾನೂ ಕೂಡ ಸತ್ತಿದ್ದೆ. ನನ್ನ ವಿಸ್ಮೃತಿಯ ಆಳದಲ್ಲಿಯೇ ಅವನು ಹೀಗೆ ನುಡಿದುಲಿಯುತ್ತಿರುವುದನ್ನು ಕೇಳಿದೆ: "ದೇವಾ ಇವರನ್ನು ಕ್ಷಮಿಸು; ಏಕೆಂದರೆ ತಾವೇನು ಮಾಡುತ್ತಿರುವೆವೆಂಬುದೇ ಇವರಿಗೆ ತಿಳಿದಿಲ್ಲ."

ಅವನ ದನಿ, ನನ್ನ ಮುಳುಗಿದಾತ್ಮವನ್ನು ಶೋಧಿಸಿ ನನ್ನನ್ನು ಮರಳಿ ದಂಡೆಗೆ ತಂದುಬಿಟ್ಟಿತು.

ನಾನು ನನ್ನ ಕಂಗಳನ್ನು ತೆರೆದೆ; ಅವನ ಶುಭ್ರ ಶರೀರವು ಮೋಡಗಳೆದುರು ತೂಗುತ್ತಿರುವುದನ್ನು ಕಂಡೆ; ನಾನು ಕೇಳಿದ ಅವನ ನುಡಿಗಳು ನನ್ನೊಳಗೇ ಆಕಾರಗೊಂಡು ನಾನೊಬ್ಬ ನವಮಾನವನಾಗಿ ಪರಿಣಮಿಸಿದೆ. ಮುಂದೆ ನಾನು ದುಃಖಿಸಲಿಲ್ಲ.

ತನ್ನ ಮುಖದೆರೆದು ತೋರುವ ಸಾಗರವನ್ನು, ಅಥವಾ ಬಿಸಿಲಿನಲ್ಲಿ ನಗುನಗುತ್ತಿರುವ ಬೆಟ್ಟವನ್ನು ಕಂಡು ಯಾರು ದುಃಖಿಸುವರು ?

ತನ್ನೆದೆಗಿರಿದಾಗ ಕೂಡ ಆ ಎದೆಯಿಂದ ಇಂಥ ಮಾತುಗಳನ್ನುಲಿಯುವ ಮಾನವೀ ಹೃದಯವೆಲ್ಲಿಯಾದರೂ ಇದೆಯೆ ?

ಅವನು ನ್ಯಾಯಾಧೀಶರನ್ನು ಬಿಡುಗಡೆಗೊಳಿಸಿದಂತೆ ಇನ್ನಾರಾದರೂ ಜನರು ನ್ಯಾಯಾಧೀಶರನ್ನು ಬಿಡುಗಡೆಗೊಳಿಸಿರುವರೇ? ತನ್ನಾತ್ಮನಿಷ್ಠೆಗಿಂತಲೂ ಹೆಚ್ಚಿನ ಶಕ್ತಿಯಿಂದ ಪ್ರೇಮವು ದ್ವೇಷವನ್ನಾಹ್ವಾನಿಸಿದುದು ಎಂದಾದರೂ ಉಂಟೆ ?

ಭೂವ್ಯಾಕಾಶದಲ್ಲಿ ಎಂದಾದರೂ ಇಂಥ ಕಹಳೆಯ ಕೂಗು ಕೇಳಿಸಿದೆಯೆ ?

ಕೊಲ್ಲಲ್ಪಟ್ಟವನೇ ಕೊಂದವನನ್ನು ಕರುಣೆಯಿಂದ ಕಂಡುದು ಈ ಮೊದಲೆಲ್ಲಾದರೂ ಉಂಟೇ? ಅಥವಾ ತಾರೆಯೊಂದಾದರೂ ಒಡ್ಡಿಗಾಗಿ ತಡೆದು ನಿಂತುದು ಉಂಟೇ ?

"ದೇವಾ ಇವರನ್ನು ಕ್ಷಮಿಸು; ಏಕೆಂದರೆ ತಾನೇನು ಮಾಡುತ್ತಿರುವೆವೆಂಬುದೇ ಇವರಿಗೆ ತಿಳಿದಿಲ್ಲ'' ಎಂಬೀ ನುಡಿಗಳನ್ನು ಜೀರ್ಣಿಸಿಕೊಳ್ಳುವುದರಲ್ಲಿ ಋತುಗಳೂ ದಣಿದಾವು, ವರ್ಷಗಳೂ ಮುಪ್ಪಾದಾವು.

ನಾನೂ ನೀವೂ, ಮತ್ತೆಮತ್ತೆ ಹುಟ್ಟಿಬಂದರೂ ಈ ನುಡಿಗಳನ್ನು ಅಪ್ಪಿಕೊಂಡೇವು.

ಇನ್ನು ನಾನು ಮನೆಗೆ ಹೋಗಿ ಪರಮೋನ್ನತ ಭಿಕ್ಷುವಿನಂತೆ ಅವನ ಬಾಗಿಲ ಬಳಿ ನಿಲ್ಲುವೆನು.

## ೬೫. ಯಾಮೇನಿಯ ಬಾರ್ಬರಾ

ವಸಂತಕ್ಕಾಗಿ ಕಾಯುವ ಚಳಿಗಾಲದಂತೆ, ಜೀಸಸ್‌ನು ಮೂರ್ಖರ, ಮಂದಮತಿಗಳ, ಬಗ್ಗೆ ತಾಳ್ಮೆಯಿಂದಿದ್ದನು.

ಬಿರುಗಾಳಿಯಲ್ಲಿಯ ಬೆಟ್ಟದಂತೆ ಅವನು ಅಚಲನಾಗಿದ್ದನು.

ತನ್ನ ವೈರಿಗಳ ಕ್ರೂರ ಪ್ರಶ್ನೆಗಳಿಗೂ ಅವನು ಕರುಣೆಯಿಂದ ಉತ್ತರಿಸುತ್ತಿದ್ದನು.

ಆಕ್ಷೇಪ, ಪ್ರತಿವಾದಗಳಿಗೆ ಅವನು ಮೌನದಾಳಲೂ ಬಹುದಿತ್ತು; ಏಕೆಂದರೆ ಅವನು ಸಮರ್ಥನಾಗಿದ್ದ; ಸಮರ್ಥನೇ ಸಹನಮಾಡಿಕೊಳ್ಳಬಲ್ಲ.

ಆದರೆ ಜೀಸಸ್ ಅವಿಶ್ರಾಂತನೂ ಆಗಿದ್ದ.

ದಾಂಭಿಕರನ್ನು ಅವನು ಉಳಿಯಗೊಡಲಿಲ್ಲ.

ಮಾತಿನ ಮೋಡಿಯವರಿಗೂ, ಠಕ್ಕರಿಗೂ ಅವನು ಸೊಪ್ಪು ಹಾಕಲಿಲ್ಲ.

ಅವನ ಮೇಲೆ ಅಧಿಕಾರವೇ ನಡೆಯುವಂತಿರಲ್ಲಿಲ್ಲ.

ತಾವು ಕತ್ತಲೆಯಲ್ಲೇ ಇದ್ದುದರಿಂದ ಬೆಳಕನ್ನು ನಂಬುವದಿಲ್ಲವೆಂಬವರ ಬಗ್ಗೆ, ಹಾಗೂ ತಮ್ಮ ಹೃದಯವನ್ನುಳಿದು ಆಕಾಶದಲ್ಲಿಯ ಗ್ರಹಗತಿಯ ಕುರುಹುಗಳನ್ನೂ ಶೋಧಿಸುತ್ತಿರುವವರ ಬಗ್ಗೆ ಅವನು ಅವಿಶ್ರಾಂತನಾಗಿದ್ದ.

ತಮ್ಮ ಉಷಃಕಾಲ, ಸಾಯಂಕಾಲಗಳ ಕನಸುಗಳನ್ನು ನಂಬುವುದನ್ನು ಬಿಟ್ಟು, ಹಗಲು ರಾತ್ರಿಗಳ ಅಳತೆ-ತೂಕ-ಮಾಡುತ್ತಿರುವವರಿಗಾಗಿ ಅವನು ಅವಿಶ್ರಾಂತನಾಗಿದ್ದ.

ಜೀಸಸ್‌ನು ತಾಳ್ಮೆಯಿಂದಿದ್ದ.

ಆದರೂ, ಜನರಿಗಾಗಿ ಅವನು ಅವಿಶ್ರಾಂತನಾಗಿದ್ದ.

ಮಗ್ಗ-ಬಟ್ಟೆಗಳ ಮಧ್ಯೆ ವರುಷ ವರುಷಗಳನ್ನು ನೀವು ಕಳೆಯುತ್ತಿದ್ದರೂ, ನಿಮ್ಮಿಂದೆ ಬಟ್ಟೆ ನೇಯಿಸಲು ಅವನು ಸಿದ್ಧನಿದ್ದ.

ಆದರೆ ನೆಯ್ದ ಬಟ್ಟೆಯ ಒಂದು ಅಂಗುಲವನ್ನೂ ಅವನು ಯಾರಿಗೂ ಹರಿಯಗೊಡುತ್ತಿದ್ದಿಲ್ಲ.

## ೬೬. ಪಾಯ್‌ಲೆಟನ ಹೆಂಡತಿ: ಒಬ್ಬ ರೋಮನ್ ಮಹಿಳೆಗೆ-

ಜೆರೂಸಲೇಮದ ಹೊರಗಿನ ತೋಟವೊಂದರಲ್ಲಿ, ನಾನು ನನ್ನ ದಾಸಿಯರೊಡನೆ ವಿಹರಿಸುತ್ತಿದ್ದೆ. ಆಗ ಅವನ ಸುತ್ತುಮುತ್ತು ಅನೇಕ ಸ್ತ್ರೀ ಪುರುಷರು ಕುಳಿತಿರುವುದನ್ನು ಕಂಡೆ; ನನಗೆ ಅರ್ಧಮರ್ಧ ಮಾತ್ರ ತಿಳಿಯುತ್ತಿದ್ದ ಮಾತಿನಲ್ಲಿ ಅವನು ಅವರಿಗೆ ಏನೋ ಹೇಳುತ್ತಲಿದ್ದ.

ಬೆಳಕುಗಂಬವನ್ನಾಗಲಿ, ಸ್ಫಟಿಕಾದ್ರಿಯನ್ನಾಗಲಿ ತಿಳಿದುಕೊಳ್ಳಲು ಯಾರೊಬ್ಬರಿಗೂ ಭಾಷೆಯ ಅವಶ್ಯಕತೆಯಿಲ್ಲ. ನಾಲಗೆ ಎಂದೂ ನುಡಿಯಲಾರದುದನ್ನೂ, ಕಿವಿಗಳೆಂದೂ ಕೇಳಲಾರದುದನ್ನೂ ಹೃದಯವು ತಿಳಿದುಕೊಳ್ಳುವುದು.

ಅವನು ತನ್ನ ಮಿತ್ರರಿಗೆ ಪ್ರೇಮ, ಸಾಮರ್ಥ್ಯಗಳ ಬಗ್ಗೆ ಹೇಳುತ್ತಿದ್ದ. ಅವನು ಪ್ರೇಮದ ಬಗ್ಗೆ ಆಡುತ್ತಿರುವನೆಂದು ನನಗೆ ತಿಳಿಯಿತು. ಏಕೆಂದರೆ ಅವನ ದನಿಯಲ್ಲಿ ಮಾರ್ದವವಿತ್ತು. ಅವನು ಸಾಮರ್ಥ್ಯದ ಬಗ್ಗೆ ಆಡುತ್ತಿರುವನೆಂಬುದೂ ನನಗೆ ತಿಳಿಯಿತು; ಏಕೆಂದರೆ ಅವನ ಹಾವಭಾವಗಳಲ್ಲಿ ಯೋಧತೆಯಿತ್ತು. ಅವನು ಕೋಮಲನಾಗಿದ್ದ; ಆದರೂ ನನ್ನ ಪತಿ ಕೂಡ ಅಷ್ಟು ಅಧಿಕಾರವಾಣಿಯಿಂದ ಮಾತಾಡಲಾರ.

ಅವನ ಬದಿಯಲ್ಲೇ ನಾನು ಹಾದುಹೋಗುತ್ತಿರುವುದನ್ನು ಕಂಡಾಗ ಅವನು ಒಂದುಕ್ಷಣ ಮಾತನಾಡುವುದನ್ನು ನಿಲ್ಲಿಸಿ ನನ್ನ ಕಡೆ ಕರುಣೆಯಿಂದ ನೋಡಿದ. ನಾನು ವಿನೀತಳಾಗಿ ಹೋದೆ; ನಾನೊಬ್ಬ ದೇವನ ಬದಿ ಹಾದ್ಹೋಗುತ್ತಿರುವೆನೆಂದು ನನ್ನಾತ್ಮಕ್ಕೆನಿಸಿತು.

ಯಾವದೇ ಗಂಡು, ಹೆಣ್ಣುಗಳನ್ನು ನಾನು ನೋಡಲಾಗದ ನನ್ನ ಏಕಾಂತತೆಯಲ್ಲಿಯೂ ಆ ದಿನದಿಂದ ಅವನ ಆಕೃತಿ ನನ್ನನ್ನು ಸಂದರ್ಶಿಸ ತೊಡಗಿತು. ನನ್ನ ಸ್ವತಃದ ಕಂಗಳು ಮುಚ್ಚಿಕೊಂಡಾಗ ಅವನ ಕಂಗಳು ನನ್ನಾತ್ಮವನ್ನೇ ಶೋಧಿಸಿದವು; ಹಾಗೂ ಅವನ ದನಿ ನನ್ನ ಇರುಳುಗಳ ಸ್ತಬ್ಧತೆಯು ಮೇಲೆ ಆಧಿಪತ್ಯ ನಡೆಸಿತು.

ಎಂದಿಗಿಂತಲೂ ನಾನು ಹೆಚ್ಚಾಗಿ ಅದಕ್ಕೆ ಅಂಟಿಕೊಂಡೆ; ನನ್ನ ನೋವಿನಲ್ಲೂ ಶಾಂತಿಯಿತ್ತು, ಕಂಬನಿಯಲ್ಲೂ ಸ್ವಾತಂತ್ರ್ಯವಿತ್ತು.

ಪ್ರಿಯತಮ ಗೆಳತೀ, ಇಂಥವನನ್ನು ನೀನೆಂದೂ ಕಂಡಿರಲಿಕ್ಕಿಲ್ಲ; ಹಾಗೂ ಇನ್ನೆಂದೂ ಕಾಣಲಿಕ್ಕಿಲ್ಲ.

ಅವನು ನಮ್ಮ ಭಾವನೆಗಳಾಚೆಗೆ ನಡೆದುಬಿಟ್ಟಿದ್ದಾನೆ. ಆದರೂ ಎಲ್ಲರಿಗಿಂತಲೂ ಅವನು ನನಗೆ ಹೆಚ್ಚು ಸಮೀಪದಲ್ಲಿದ್ದಾನೆ.

## ೬೭. ಜೆರೂಸಲೇಮದ ಹೊರಗಿನ ಒಬ್ಬ ಮನುಷ್ಯ

ಪಸೋಹ ಹಬ್ಬದ ಮುನ್ನಾದಿನ ಶುಕ್ರವಾರ ಸಂಜೆಗೆ ಜುಡಾಸನು ನನ್ನ ಮನೆಗೆ ಬಂದು ಬಾಗಿಲನ್ನು ಜೋರಿನಿಂದ ಬಡಿದ.

ಅವನು ಒಳಗೆ ಬಂದಾಗ ಅವನೆಡೆಗೆ ನೋಡಿದೆ, ಅವನ ಮುಖವು ಒಣಗಿದ ಕಟ್ಟಿಗೆಯಂತಾಗಿತ್ತು; ಅವನ ಕೈಗಳು ಗಾಳಿಯಲ್ಲಿಯ ಟೊಂಗೆಗಳಂತೆ ಅಲುಗಾಡುತ್ತಿದ್ದವು. ಹಾಗೂ ಆದೇ ನದಿಮುಳುಗಿ ಬಂದವರಂತೆ ಅವನ ಅರಿವೆಗಳು ತೊಯ್ದಿದ್ದವು; ಏಕೆಂದರೆ ಆ ಸಂಜೆ ಬಿರುಗಾಳಿ ಬಲವಾಗಿತ್ತು.

ಅವನೂ ನನ್ನೆಡೆಗೆ ನೋಡಿದ; ಅವನ ಕಣ್ಣ ಕುಣಿಕೆಗಳು ಕತ್ತಲುಗವಿದ ಗುಹೆಯಂತಿದ್ದವು; ಕಂಗಳು ನೆತ್ತರಗೆಂಪಾಗಿದ್ದವು.

ಅವನೆಂದ: "ನಾನು ನಾಝರೆಥದ ಜೀಸಸ್‌ನನ್ನು ಅವನ ವೈರಿಗಳಿಗೆ, ನನ್ನ ವೈರಿಗಳಿಗೆ ಹಿಡಿದುಕೊಟ್ಟೆ."

ಬಳಿಕ ಜುಡಾಸ ತನ್ನ ಕೈಬೀಸುತ್ತ ನುಡಿದ: "ಜೀಸಸ್‌ನು ತನ್ನ

ವೈರಿಗಳಿಂದ, ನಮ್ಮ ಜನರ ವೈರಿಗಳಿಂದ ತಾನು ಪಾರಾಗಬಲ್ಲೆನೆಂದು ಘೋಷಿಸಿದ. ನಾನದನ್ನು ನಂಬಿ ಅವನನ್ನು ಹಿಂಬಾಲಿಸಿದೆ.

"ಮೊತ್ತಮೊದಲು ಅವನು ನಮ್ಮನ್ನೆಲ್ಲ ಕರೆದಾಗ, ನಮಗೊಂದು ವಿಶಾಲ ಹಾಗೂ ಸಮರ್ಥ ಸಾಮ್ರಾಜ್ಯ ಕೊಡುವುದಾಗಿ ವಚನವಿತ್ತಿದ್ದ. ನಾವದನ್ನು ನಂಬಿ, ಅವನ ದರಬಾರಿನಲ್ಲಿ ನಮಗೆ ಮಹೋನ್ನತ ಸ್ಥಾನಗಳು ದೊರೆಯುವವೆಂದು ಬಗೆದು ಅವನ ದಯೆಯ ಬೆನ್ನು ಹತ್ತಿದೆವು.

"ರೋಮನ್ನರು ಈಗ ನಮ್ಮೊಡನೆ ನಡೆದುಕೊಳ್ಳುತ್ತಿರುವಂತೆ ನಾವೂ ಅವರೊಡನೆ ರಾಜಪುತ್ರರಂತೆ ನಡೆದುಕೊಳ್ಳಬಹುದೆಂದು ಬಗೆದಿದ್ದೆವು. ಜೀಸಸ್ ತನ್ನ ಸಾಮ್ರಾಜ್ಯದ ಬಗ್ಗೆ ಬಹಳ ಬಹಳ ಹೇಳಿದ್ದ. ಅವನ ರಾಜ್ಯದ ರಥಿಕರ ಮುಖ್ಯಸ್ಥನೋ, ಯೋಧರ ಸೇನಾಪತಿಯೋ ಎಂದು ನನ್ನನ್ನು ಅವನು ನಿಯಮಿಸಿಕೊಳ್ಳುವನೆಂದು ನಾನು ಬಗೆದಿದ್ದೆ. ಹೀಗಾಗಿ ಮನಃಪೂರ್ವಕ ನಾನವನನ್ನು ಹಿಂಬಾಲಿಸಿದೆ.

"ಆದರೆ ಜೀಸಸ್ ಯೋಚಿಸಿದ್ದು ರಾಜ್ಯವೂ ಅಲ್ಲ, ರೋಮನ್ನರಿಂದ ನಮ್ಮ ಬಿಡುಗಡೆಯೂ ಅಲ್ಲ. ಅವನ ರಾಜ್ಯ ಕೇವಲ 'ಹೃದಯ ರಾಜ್ಯ'ವಾಗಿತ್ತು. ಅವನು ಕೇವಲ ಪ್ರೀತಿ, ದಯೆ, ಕ್ಷಮೆಗಳ ಮಾತನ್ನಾಡುತ್ತಿದ್ದ. ಬೀದಿಯ ಹೆಂಗಸರು ಅವನ್ನು ಆನಂದದಿಂದ ಕೇಳುತ್ತಿದ್ದರು. ನನ್ನ ಹೃದಯದಲ್ಲಿ ಮಾತ್ರ ಕಹಿ ಬೆಳೆದು ಬಂದು ನಾನು ಕಠಿಣತಮನಾದೆ.

"ಜ್ಯುಡಿಯಾದ ನನ್ನ ಸಂಕಲ್ಪಿತ ಸಮ್ರಾಟನು ಕೇವಲ ಕೊಳಲೂದುವವನಾಗಿ ಬಿಟ್ಟು, ಬೀದಿಹೋಕರ ಹಾಗೂ ಬಿಡಾಡಿಗಳ ಮನತಣಿಸಲು ಪ್ರಾರಂಭಿಸಿದ.

"ನನ್ನ ಜನರಂತೆ ನಾನೂ ಅವನನ್ನು ಪ್ರೀತಿಸಿದ್ದೆ. ಅವನು ಪರಕೀಯರ ನೊಗದಿಂದ ನಮ್ಮನ್ನು ಮುಕ್ತಗೊಳಿಸಬಹುದೆಂದೂ, ನಾನು ಆಶೆಯಿಟ್ಟುಕೊಂಡಿದ್ದೆ. ಆದರೆ ಯಾವಾಗ ಅವನು ನಮ್ಮ ಬಿಡುಗಡೆಗಾಗಿ, ಒಂದು ಮಾತನ್ನು, ಒಂದು ಹಸ್ತಚಲನವನ್ನು ಮಾಡಹಾದನೋ, ಸೀಝರನದನ್ನು ಸೀಝರನಿಗೆ ಒಪ್ಪಿಸಿಬಿಡಿರೆಂದು ಎಂದು ಹೇಳಿದನೋ ಅಂದೇ ಶನಗೆ ನೈರಾಶ್ಯದುಂಬಿ ನನ್ನ ಆಕಾಂಕ್ಷೆ ಮೃತವಾಯಿತು. ಆಗ ನಾನೆಂದುಕೊಂಡೆ: ನನ್ನ ಆಶೆಗಳ ಕೊಲೆಗೈದವರೂ ಕೊಲೆಗೀಡಾಗಬೇಕು. ಏಕೆಂದರೆ ಯಾವ

ನೊಬ್ಬನ ಜೀವಕ್ಕಿಂತಲೂ, ನನ್ನ ಆಶೆ–ಆಕಾಂಕ್ಷೆಗಳು ಹೆಚ್ಚು ಬೆಲೆಯುಳ್ಳವಾಗಿದ್ದವು ? ”

ಜುಡಾಸ ಹಲ್ಲು ಮಸೆಯುತ್ತ ತಲೆ ಕೆಳಗೆ ಮಾಡಿದ, ಮತ್ತೆ ಮಾತನಾಡುತ್ತ ಹೇಳಿದ : “ ನಾನವನನ್ನು ಹಿಡಿದುಕೊಟ್ಟುಬಿಟ್ಟೆ. ಈ ದಿನ ಅವನು ಶಿಲುಬೆಗೇರಿಸಲ್ಪಟ್ಟ....ಆದರೂ ಶಿಲುಬೆಯ ಮೇಲೆ ಅವನು ತೀರಿಕೊಂಡಾಗ ಅವನು ರಾಜರಾಜನಂತೆ ತೀರಿಕೊಂಡ. ಮುಕ್ತಿದಾತರು ಸಾಯುವಂತೆ, ಹಾಗೂ ಮಹಾಮನುಜರು ಶಿಲೆ ಮೃತವಸ್ತ್ರಗಳಾಚೆಗೆ ಬದುಕುವಂತೆ, ಬಿರುಗಾಳಿಯಲ್ಲಿಯೇ ಅವನು ತೀರಿಕೊಂಡ.

“ ಸಾಯುತ್ತಿರುವ ವೇಳೆಯಲ್ಲಿ ಕೂಡ, ಅವನು ಪ್ರಶಾಂತನೂ, ಕರುಣಾಮಯಿಯೂ ಆಗಿದ್ದ; ಅವನ ಹೃದಯವು ಕನಿಕರದಿಂದ ತುಂಬಿತ್ತು. ಅದನ್ನು ಹಿಡಿದುಕೊಟ್ಟ ನನ್ನ ಬಗೆಗೆ ಕೂಡ ಅವನಿಗೆ ಕನಿಕರವಿತ್ತು. ”

ನಾನೆಂದೆ : “ ಜುಡಾಸ್, ನೀನು ಬಹಳ ದೊಡ್ಡ ತಪ್ಪುಮಾಡಿದೆ. ”

ಜುಡಾಸ ಉತ್ತರಿಸಿದ : “ ಆದರೆ ಅವನು ರಾಜರಾಜನಂತೆ ಮರಣವನ್ನಪ್ಪಿದ. ರಾಜರಾಜನಂತೆ ಅವನೇಕೆ ಜೀವಿಸಬಾರದಾಗಿತ್ತು ? ”

ಮತ್ತೆ ನಾನೆಂದೆ : “ ನೀನು ಮಹಾ ಗಂಭೀರ ಅಪರಾಧ ಮಾಡಿದ್ದೀಯೆ. ”

ಬಳಿಕ ಅಲ್ಲಿಯೇ ಇದ್ದ ಬೆಂಚಿನ ಮೇಲೆ ಕುಕ್ಕರಿಸಿದ; ಆಗವನು ಶಿಲೆಯಂತೆ ಸ್ತಬ್ಧನಾಗಿದ್ದ.

ನಾನು ಅಲ್ಲಿಯೇ ಅತ್ತಿಂದಿತ್ತ ಅಡಿಯಾಡತೊಡಗಿದೆ; ಮತ್ತು ಒಮ್ಮೆ ನಾನವನಿಗೆ ಹೇಳಿದೆ : “ ನೀನೊಂದು ಮಹಾ ಪಾಪ ಮಾಡಿದೆ. ”

ಆದರೆ ಜುಡಾಸ ಏನೂ ಮಾರ್ನುಡಿಯಲಿಲ್ಲ. ಅವನು ಮಣ್ಣಿನಂತೆ ಮೂಕನಾಗಿ ಬಿಟ್ಟಿದ್ದ.

ಕೆಲವೇಳೆ ಕಳೆಯಲು ಅವನು ಎದ್ದು ನಿಂತು ನನ್ನ ಕಡೆ ನೋಡತೊಡಗಿದ. ಆಗವನು ಉನ್ನತನಾದಂತೆ ಕಂಡ. ಮಾತನಾಡಲು ಪ್ರಾರಂಭಿಸಿದಾಗ ಅವನ ದನಿ ಒಡಕ ಗಡಿಗೆಯ ನಾದದಂತಿತ್ತು; ಅವನು ನುಡಿದ : “ ನನ್ನ ಹೃದಯದಲ್ಲಿ ಪಾಪವಿದ್ದಿಲ್ಲ. ಇದೇ ರಾತ್ರಿ ನಾನವನ ರಾಜ್ಯವನ್ನು ಪ್ರವೇಶಿ

ಸುವೆ; ಹಾಗೂ ನಾನವನ ಸಾನ್ನಿಧ್ಯದಲ್ಲಿ ನಿಂತು ಅವನ ಕ್ಷಮೆಯನ್ನು ಕೇಳಿಕೊಳ್ಳುವೆ. ''

'' ಅವನು ಅರಸನಂತೆ ಅಸುವನ್ನು ನೀಗಿದ; ನಾನು ಮಹಾ ಪಾತಕಿಯಂತೆ ಪ್ರಾಣ ನೀಗುವೆ. ಆದರೂ ಅವನು ನನ್ನನ್ನು ಕ್ಷಮಿಸುವನೆಂದು ನನ್ನ ಹೃದಯಕ್ಕೆ ಗೊತ್ತಿದೆ. ''

ಹೀಗೆ ನುಡಿದಾದ ಮೇಲೆ ಅವನು ತನ್ನ ಒದ್ದೆಯರಿವೆಗಳನ್ನು ತನ್ನ ಮೈಗೆ ಸುತ್ತಿಕೊಂಡು ನುಡಿದ: ''ನಾನೀ ರಾತ್ರಿ ನಿನ್ನೆಡೆಗೆ ಬಂದುದು, ನಿನಗೆ ಸ್ವಲ್ಪ ತೊಂದರೆಯೆನಿಸಿದ್ದರೂ ಅಡ್ಡಿಯಿಲ್ಲ, ಒಳ್ಳೆಯದೇ ಆಯಿತು; ಅದಕ್ಕಾಗಿ ನೀನು ನನ್ನನ್ನು ಕ್ಷಮಿಸುವಿಯಾ ?

'' ನಿನ್ನ ಮಕ್ಕಳಿಗೆ, ನಿನ್ನ ಮೊಮ್ಮಕ್ಕಳಿಗೆ ಹೇಳಿದನ್ನು : 'ಇಸ್ಕ್ಯಾರಿಯಟದ ಜುಡಾಸನು ನಾಝರೆಥದ ಜೀಸಸ್‌ನನ್ನು ಅವನ ವೈರಿಗಳಿಗೆ ಹಿಡಿದುಕೊಟ್ಟ; ಏಕೆಂದರೆ ಜೀಸಸ್‌ನು ತನ್ನ ಜನಾಂಗದ ವೈರಿಯೆಂದು ಅವನು ನಂಬಿದ್ದ'

'' ಹಾಗೂ ಜುಡಾಸನು, ಆ ತಪ್ಪು ಮಾಡಿದ ದಿನವೇ ಆ ಅರಸನ ಹಾದಿಯನ್ನೇ ಹಿಡಿದು ನಡೆದು, ತನ್ನಾತ್ಮವನ್ನೇ ಅವನೆದುರಿಗೆ ಒಪ್ಪಿಸಲು, ಹಾಗೂ ನ್ಯಾಯನಿರ್ಣಯಿಸಿಕೊಳ್ಳಲು ಅವನ ಸಿಂಹಾಸನದೆದುರು ನಿಂತುಕೊಂಡ.

'' ನನ್ನ ರಕ್ತವೂ ಹಸಿರು ನೆಲಕ್ಕಾಗಿ ಹಸಿದಿತ್ತೆಂದೂ ನನ್ನ ಹೆಳವ ಆತ್ಮವು ಮುಕ್ತಿ ಪಡೆಯಬಹುದೆಂದೂ ಬಗೆದಿದ್ದೇನೆಂದು ನಾನವನಿಗೆ ಹೇಳುವೆ. ''

ಬಳಿಕ ಜುಡಾಸ ತನ್ನ ತಲೆಯನ್ನು ಹಿಂಬಾಗಿಸಿ ಗೋಡೆಗಾನಿಸಿ ಚೀರಿಕೊಂಡ: '' ಓ ದೇವಾ, ಯಾವ ಮನುಷ್ಯನು ತನ್ನ ತುಟಿಗಳನ್ನು ಮರಣದ ಬೆರಳುಗಳು ಮುಟ್ಟುವ ಮುನ್ನ ನಿನ್ನ ಹೆಸರನ್ನುಚ್ಚರಿಸಲಾರನೋ, ಅಂಥವನಾದ ದೇವಾ, ಏಕೆ ನನ್ನನ್ನೀ ಬೆಳಕಿಲ್ಲದ ಬೆಂಕಿಯಿಂದ ಸುಡುತ್ತಿರುವೆ ?

'' ಆ ಅಜ್ಞಾತ ನಾಡಿನ ಆಕಾಂಕ್ಷೆಯನ್ನೇಕೆ ಈ ಗ್ಯಾಲಿಲಿಯನ್ನರಿಗೆ ನೀನು ಉಂಟುಮಾಡಿದೆ ? ಈ ಮನೆ ಮಡದಿಮಕ್ಕಳಿಂದ ಪಾರಾಗಲಾರದ

ಆಶೆಯಿಂದ ನನ್ನನ್ನೇಕೆ ಹೊರೆಗೊಳಿಸಿದೆ? ತನ್ನ ಹಸ್ತಗಳನ್ನು ನೆತ್ತರದಲ್ಲದ್ದಿದ್ದ ಈ ಜುಡಾಸ ಎಂಬ ಮನುಷ್ಯನಾರು ?

"ಜೀರ್ಣ ವಸ್ತ್ರ ಹಾಗೂ ಹರಕ ಜೇಸಿನಂತಿದ್ದ ಅವನನ್ನು ಮುಗಿಸಿಬಿಡುವಂಥ ಕೈಗಳನ್ನು ನನಗೆ ಕೈಗಡ ಕೊಡು.

"ಇದೇ ಇರುಳು ಇವನ್ನು ಮಾಡಿಬಿಡಲು ನೆರವು ನೀಡು.

"ಮತ್ತೊಮ್ಮೆ ನಾನೀ ಬಂಧನದಿಂದ ಹೊರಬಂದು ನಿಲ್ಲುವಂತಾಗಲಿ.

"ಈ ಪಕ್ಕರಹಿತ ಸ್ವಾತಂತ್ರ್ಯವು ನನಗೆ ಸಾಕಾಗಿಹೋಗಿದೆ. ನಾನೊಂದು ಅಗಾಧ ಅಂಧಕೂಪವಾಗಿದ್ದೇನೆ.

"ನಾನು ಕಣ್ಣೀರಿನ ಹೊಳೆಯನ್ನೇ ಹರಿಸಿ ಸಾಗರವನ್ನು ಕಹಿಗೊಳಿಸಬಹುದು. ತನ್ನ ಹೃದಯಕವಾಟದ ಬಾಗಿಲ ಬಡೆಯುತ್ತಿರುವವನಿಗಿಂತ, ನಿನ್ನ ದಯೆಗೆ ಪಾತ್ರನಾದ ಮಾನವನಾಗಬಯಸುವೆ ನಾನು."

ಜುಡಾಸನು ಈ ರೀತಿ ಉದ್ಗರಿಸಿ, ಬಳಿಕ ಬಾಗಿಲು ತೆರೆದುಕೊಂಡು ಬಿರುಗಾಳಿಯಲ್ಲಿಯೇ ಹೊರಹೊರಟ.

ಮೂರು ದಿನಗಳಾದ ಬಳಿಕ ನಾನು ಜೆರೂಸಲೇಮುಕ್ಕೆ ಹೋದೆ: ನಡೆದುಹೋದುದೆಲ್ಲವನ್ನೂ ಕೇಳಿದೆ. ಜುಡಾಸನೂ ಶಿಖರದ ಕೋಡುಗಲ್ಲಿನ ಮೇಲಿಂದ ಹಾರಿಕೊಂಡನೆಂಬದನ್ನೂ ಕೇಳಿದೆ.

ಅಂದಿನಿಂದ ನಾನು ಬಹಳ ಕಾಲ ವಿಚಾರಮಾಡಿ ಜುಡಾಸನ ಮನವನ್ನು ತಿಳಿದುಕೊಂಡೆ. ರೋಮನ್ನರಿಂದ ಆಕ್ರಮಿತವಾದ ಈ ನಾಡಿನಲ್ಲಿ, ಆ ಮಹಾ ಪ್ರವಾದಿಯು ಶಿಖರವನ್ನೇರುತ್ತಿರುವಾಗಲೇ, ಮಂಜಿನಂತೆ ಸುಳಿದಾಡುತ್ತಿದ್ದ ತನ್ನ ಅಣುಜೀವನವನ್ನು ಜುಡಾಸನು ಕೃತಕೃತ್ಯ ಮಾಡಿಕೊಂಡ.

ಒಬ್ಬನು ತಾನು ರಾಜಪುತ್ರನಾಗಲಿದ್ದ ರಾಜ್ಯದ ಬಗ್ಗೆ ಆಕಾಂಕ್ಷಿಸಿದ್ದ. ಇನ್ನೊಬ್ಬನು ಸಕಲರೂ ರಾಜಪುತ್ರರಾಗಬಹುದಾದ ರಾಜ್ಯದ ಬಗ್ಗೆ ಬಯಸಿದ್ದ.

# ೬೮. ಹುಚ್ಚನೆಂದು ಕರೆಯಲ್ಪಡುತ್ತಿದ್ದ ಮುದುಕ ಗ್ರೀಕ ಕುರುಬ: ಸರ್ಕಿಸ್

ಒಂದು ಕನಸಿನಲ್ಲಿ, ನನ್ನ ದೇವರಾದ ಪ್ಯಾನ ಮತ್ತು ಜೀಸಸ್‌ರು ಒಂದು ಅರಣ್ಯಮಧ್ಯದಲ್ಲಿ ಜತೆಯಾಗಿ ಕುಳಿತುದನ್ನು ಕಂಡೆ.

ಅಲ್ಲಿಯೇ ಹರಿಯುತ್ತಿದ್ದ ಹಳ್ಳದ ದಂಡೆಯಮೇಲೆ, ಅವರಿಬ್ಬರೂ ಮಾತಾಡುತ್ತ, ನಡನಡುವೆ ನಗುತ್ತ ಕುಳಿತಿದ್ದರು; ಅದರಲ್ಲೂ ಜೀಸಸ್‌ನ ನಗೆಯು ಹೆಚ್ಚು ತೋಷದಾಯಕವಾಗಿತ್ತು. ಬಹಳ ಹೊತ್ತಿನವರೆಗೂ ಅವರು ಮಾತಾಡುತ್ತಲಿದ್ದರು.

ಪೃಥ್ವಿ ಹಾಗೂ ಅದರ ಗುಟ್ಟುಗಳ, ಆಣಸುಬಿಗಿದ ಬಂಧುಗಳ, ಕೊಂಬುಳ್ಳ ಭಗಿನಿಯರ, ಹಾಗೂ ಕನಸುಗಳ ಬಗ್ಗೆ ಪ್ಯಾನ ಮಾತಾಡದ. ಬೇರುಗಳ ಹಾಗೂ ಅವುಗಳ ಮರಿಗಳ, ಮತ್ತು ಎಚ್ಚತ್ತಿದ್ದು ಬೇಸಿಗೆಗಾಗಿ ಹಾಡುತ್ತಿದ್ದ ರಸಗಳ ಬಗ್ಗೆಯೂ ಅವನು ಮಾತಾಡಿದ.

ಜೀಸಸ್‌ನು, ಅರಣ್ಯದೊಳಗಿನ ಎಳೆಚಿಗುರುಗಳ, ಹೂ, ಹಣ್ಣುಗಳ ಹಾಗೂ ಇನ್ನೂ ಬರದಿರುವ ಋತುವಿಗಾಗಿ ಅವು ಧರಿಸಿದ ಬೀಜಗಳ ಬಗ್ಗೆ ಮಾತಾಡಿದ.

ಆಕಾಶದಲ್ಲಿಯ ಹಕ್ಕಿಗಳ ಬಗ್ಗೆ ಹಾಗೂ ಅವು ಊರ್ಧ್ವಲೋಕದಲ್ಲಿ ಹಾಡುತ್ತಿದ್ದ ಬಗ್ಗೆ ಅವನು ಮಾತಾಡಿದ.

ದೇವರೇ ಕಾಯುತ್ತಿದ್ದ ಮರುಭೂಮಿಯೊಳಗಿನ ಗಂಡೋಳಿಗಳ ಬಗ್ಗೆಯೂ ಅವನು ಮಾತಾಡಿದ.

ಈ ಹೊಸ ದೇವರ ಮಾತುಗಳಿಂದ ಪ್ಯಾನ್ ಸಂತೋಷಭರಿತನಾದ; ಅವನ ಮೂಗಿನ ಹೊರಳೆಗಳು ಥರಥರಿಸಿದವು.

ಮತ್ತು ಅದೇ ಕನಸಿನಲ್ಲೇ, ಪ್ಯಾನ ಮತ್ತು ಜೀಸಸ್‌ರು ಶಾಂತರಾದುದನ್ನೂ, ಹಸಿರನೆರಳಿನ ಆ ಸ್ತಬ್ಧತೆಯಲ್ಲಿ ಸ್ತಬ್ಧರಾದುದನ್ನೂ ನಾನು ಕಂಡೆ.

ಬಳಿಕ ಪ್ಯಾನ ತನ್ನ ವೀಣೆಯನ್ನು ತೆಗೆದುಕೊಂಡು ಜೀಸಸ್‌ನಿಗಾಗಿ ಬಾರಿಸಿದ.

ಆಗ ಗಿಡಗಳು ಅಲುಗಾಡಿದವು, ವನಸ್ಪತಿಗಳು ನಡುಗಿದವು. ನನಗೂ ಹೆದರಿಕೆಯಾಯಿತು.

ಜೀಸಸ್ ನುಡಿದ: "ನಮ್ಮಂದುವೇ, ನಿನ್ನ ವೀಣಾ ನುಡಿಯಲ್ಲಿ ಕಾಡುದಾರಿ, ಕೋಡುಗಲ್ಲೆತ್ತರಗಳೆರಡೂ ಇವೆ."

ಬಳಿಕ ಪ್ಯಾನನು ತನ್ನ ವೀಣೆಯನ್ನು ಜೀಸಸ್‌ನಿಗೆ ಕೊಡುತ್ತ "ಇನ್ನು ನೀನು ಬಾರಿಸು, ಈಗ ನಿನ್ನ ಸರತಿ'' ಎಂದ.

''ಈ ನಿನ್ನ ವೀಣಾ ತಂತಿಗಳು ನನಗೆ ಹೆಚ್ಚಾಗಿವೆ. ನಾನು ನನ್ನ ಕೊಳಲೂದುವೆ. ''ಎಂದು ಜೀಸಸ್‌ನೆಂದ.

ಹಾಗೂ ಅವನು ತನ್ನ ಕೊಳಲು ತೆಗೆದು ಬಾರಿಸಿದ.

ಆಗ, ಎಲೆಗಳ ಮೇಲೆ ಬೀಳುವ ಮಳೆಹನಿಗಳ ನಾದ, ಗುಡ್ಡಗಳಲ್ಲಿ ಹರಿಯುತ್ತಿರುವ ಹೊಳೆಹಳ್ಳಗಳ ನಿನದ, ಗಿರಿಶಿಖರದ ಮೇಲೆ ಬೀಳುತ್ತಿದ್ದ ಹಿಮದ ಸದ್ದು ಇವುಗಳು ನನಗೆ ಕೇಳಬಂದವು.

ಒಮ್ಮೆ ಗಾಳಿಯೊಡನೆ ಬಡಿಯುತ್ತಿದ್ದ ನನ್ನ ಎದೆ ಮಿಡಿತವು ಗಾಳಿಯಲ್ಲಿಯೇ ಪುನಃ ವಿಶ್ರಾಂತವಾಯಿತು ಹಾಗೂ ನನ್ನ ನಿನ್ನಿನ ಕಾಲದ ತೆರೆಗಳೆಲ್ಲವೂ ಪುನಃ ದಂಡೆದಲುಪಿದವು. ನಾನು ಪುನಃ ಕುರುಬ ಸರ್ಕಿಸನಾದೆ. ಜೀಸಸ್‌ನ ಕೊಳಲು ಅಸಂಖ್ಯ ಕುರಿಕಾಯುತ್ತಿದ್ದ ಅನೇಕ ಕುರುಬರ ಕೈಕೊಳಲಾಗಿ ಪರಿಣಮಿಸಿತು.

ಬಳಿಕ ಪ್ಯಾನನು ಜೀಸಸ್‌ನಿಗೆಂದ: "ನನ್ನ ವಯಸ್ಸಿಂತ ನಿನ್ನ ಹರೆಯವೇ ಈ ವೀಣೆಗೆ ಹೆಚ್ಚು ಹತ್ತಿರವಾಗಿದೆ. ನನ್ನ ಸ್ತಬ್ಧತೆಯಲ್ಲಿಯೇ ಬಹುಕಾಲದ ಹಿಂದೇ ನಾನು ನಿನ್ನ ಗೀತವನ್ನೂ ನಿನ್ನ ನಾಮಸ್ಮರಣೋಚ್ಚಾರಣೆಯನ್ನೂ ಕೇಳಿದ್ದೇನೆ.

''ನಿನ್ನ ಹೆಸರಿನಲ್ಲಿ ಒಂದು ಒಳ್ಳೇ ನಾದವಿದೆ. ಅದು ರಸವಾಗಿ ಮರಮರಗಳ ಟೊಂಗೆಗಳಿಗೂ ಏರಲಿ, ಹೆಜ್ಜೆಹಿಡಿದು ಗುಡ್ಡ-ಗುಡ್ಡಗಳಲ್ಲಿಯೂ ಹರಿದಾಡಲಿ.

"ನನ್ನ ಮಹಾಪಿತನು ನನ್ನನ್ನಾ ಹೆಸರಿನಿಂದ ಕರೆಯುದಿದ್ದಾಗ್ಯೂ, ಅದು ನನಗೆ ಆಚ್ಚರಿಯೆನಿಸಲಿಲ್ಲ. ಅದನ್ನು ಪುನಃ ನನ್ನ ಸ್ಮೃತಿಪಥಕ್ಕೆ ತಂದು ಕೊಟ್ಟುದು ಈ ನಿನ್ನ ಕೊಳಲೇ.

"ಈಗ ನಾವಿಬ್ಬರೂ ನಮ್ಮ ನಮ್ಮ ವಾದ್ಯಗಳನ್ನು ನುಡಿಸೋಣ" ಅಂತೇ ಅವರಿಬ್ಬರೂ ನುಡಿಸತೊಡಗಿದರು.

ಅವರ ಗಾನವು ಭೂಮ್ಯಾಕಾಶಗಳೆರಡಲ್ಲೂ ದುಮುದುಮಿಸತೊಡಗಿತು. ಸಕಲಪ್ರಾಣಿಗಳಿಗೂ ಭಯವಾವರಿಸಿತು

ಪಶುಗಳ ಕೂಗೂ, ಕಾನನದ ಹಸಿವೆಯೂ ನನಗೆ ಕೇಳಿಸಿತು. ಏಕಾಕಿ ಜನರ ಆಕ್ರಂದನವೂ, ಅಜ್ಞಾತದ ಆಶೆಯುಳ್ಳವರ ತಕರಾರುಗಳೂ ನನಗೆ ಕೇಳಬಂದವು.

ನಲ್ಲೆಯು ನಲ್ಲನಿಗಾಗಿ ಬಿಡುವ ನಿಟ್ಟುಸಿರೂ, ಹಾಗೂ ದುರ್ದೈವೀ ಬೇಟೆಗಾರ ತನ್ನ ಬೇಟೆಗಾಗಿ ಹಂಬಲಿಸುವ ತೀಕೂ ನನಗೆ ಕೇಳ ಬಂದವು.

ಬಳಿಕವರ ಗಾನದಲ್ಲಿ ಶಾಂತಿ ಬಂತು ಭೂಮ್ಯಾಕಾಶಗಳೆರಡೂ ಆ ಗಾನದಲ್ಲಿ ಕೂಡಿ ಹಾಡತೊಡಗಿದವು.

ಇದೆಲ್ಲವನ್ನೂ ನಾನು ನೋಡಿದುದು, ಕೇಳಿದುದು ನನ್ನ ಕನಸಿನಲ್ಲಿ.

## ೬೯. ಎನಾಸ: ಉನ್ನತ ಪುರೋಹಿತ

ಅವನೊಬ್ಬ ಕಾಡಾಡಿ, ಕಾಟಕ, ಅಡವಿಗೊಲ್ಲ ಮತ್ತು ಆತ್ಮಸ್ತುತಿಪರ ನಾಗಿದ್ದ. ಅವನು ಕೇವಲ ಶ್ವಪಚರಿಗೂ ಸ್ಥಾನಭ್ರಷ್ಟರಿಗೂ ಮಾತ್ರ ಉಪ ದೇಶಿಸುತ್ತಿದ್ದ; ಅಂತೆಯೇ ಅವನು ಸಕಲ ಕಲಂಕಿತ ಹಾಗೂ ಭ್ರಷ್ಟರ ದಾರೀ ಹಿಡಿಯಬೇಕಾಯಿತು.

ಅವನು ನಮ್ಮನ್ನೂ ನಮ್ಮ ಕಾಯಿದೆ ಕಾನೂನುಗಳನ್ನೂ ಹುಡುಗಾಟ ಮಾಡಿ ಬಿಟ್ಟಿದ್ದ. ನಮ್ಮ ಮರ್ಯಾದೆಯನ್ನೇ ಅಣಕಿಸಿದ್ದ; ಸ್ಥಾನಮಾನ ಗಳನ್ನು ಗೇಲಿ ಮಾಡಿದ್ದ. ನಮ್ಮ ದೇಗುಲಗಳನ್ನು ಹಾಳುಗೆಡಹುವೆನೆಂದೂ ಪವಿತ್ರ ಸ್ಥಳಗಳನ್ನು ಹೊಲೆಗಲೆಸುವೆನೆಂದೂ ಕೂಡ ಅವನು ಹೇಳಿದ್ದ. ಅವನು ನಾಚಿಕೆಗೇಡಿಯಾಗಿದ್ದ, ಅಂತೆಯೇ ನಾಚಿಕೆ ತರುವ ಸಾವಿನಿಂದ ಅವನು ಸಾಯಬೇಕಾಯಿತು.

ಅವನು ಜೆಂಟಾಯಿಲ್ಸದ ಗ್ಯಾಲಿಲಿಯವನಾಗಿದ್ದ; ಇಸ್ರಾಯಿಲದ ಹಾಗೂ ಇಸ್ರಾಯಿಲದ ದೇವರ ವಿರುದ್ಧ ಇನ್ನೂ ಅಧಿಕಾರ ಬಜಾಯಿಸುತ್ತಿದ್ದ ಎಡೊನಿಸ್ ಮತ್ತು ಎಸ್ಟಾರ್ಟರಿದ್ದ ಉತ್ತರದ ದೇಶದಿಂದ ಬಂದ ವಿದೇಶಿಯಾಗಿದ್ದ.

ನಮ್ಮ ಪ್ರವಾದಿಗಳ ಬಗ್ಗೆ ಮಾತನಾಡುತ್ತಿದ್ದಾಗ ತಡೆ ತಡೆಯುತ್ತಿದ್ದ ಅವನ ದನಿ, ಅವನು ಆ ಅಂತ್ಯಜ ಹಾಗೂ ಅಸಹ್ಯರ ಹಡಬೆಯ ಭಾಷೆಯಲ್ಲಿ ಮಾತನಾಡುತ್ತಿದ್ದಾಗ ಗೊಗ್ಗರವೂ ಕರ್ಣಕಟುವೂ ಆಗಿರುತ್ತಿತ್ತು.

ಅವರಿಗೆ ಮರಣದಂಡನೆಯನ್ನು ವಿಧಿಸುವುದನ್ನುಳಿದು ನನಗೆ ಇನ್ನೊಂದು ಮಾರ್ಗವೇನಿತ್ತು ?

ನಾನೀ ದೇಗುಲಗಳ ಪಾಲಕನಲ್ಲವೇ ? ನಿಯಮ ಪಾಲಕನಲ್ಲವೇ ? "ಅವನೊಬ್ಬ ಹುಚ್ಚರೊಳಗಿನ ಹುಚ್ಚ; ತನ್ನ ಹುಚ್ಚಿನಲ್ಲಿಯೇ ತಾನು ಮುಳುಗಿ ಹೋಗಲಿ; ಏಕೆಂದರೆ ಹುಚ್ಚರೂ, ಭ್ರಮಿಷ್ಠರೂ, ದೆವ್ವ ಬಡಿದವರೂ ಇಸ್ರಾಯಿಲದ ದಾರಿಯಲ್ಲಿಯೇ ನಾಶವಾಗಿ ಶೂನ್ಯವಾಗುತ್ತಾರೆ" ಎಂಧು ಪ್ರಶಾಂತ ಚಿತ್ತದಿಂದ ಅವನ ಮೇಲೆ ತಿರುಗಿ ಹೇಳಬಹುದಿತ್ತೇ ?

ಅವನು ನಮ್ಮನ್ನು, ಸುಳ್ಳರೆಂದೂ, ದಾಂಭಿಕರೆಂದೂ, ತೋಳಗಳೆಂದೂ, ವಿಷಾರಿ ಸರ್ಪಸಂತಾನವೆಂದೂ ಕರೆಯುತ್ತಿದ್ದಾಗ ಅವನ ನುಡಿಗಳನ್ನು ನಾನು ಕಿವುಡುಗೇಳಬಹುದಿತ್ತೇ ?

ಇಲ್ಲಿ, ನಾನವನನ್ನು ಕಿವುಡುಗೇಳುವಂತಿದ್ದಿಲ್ಲ; ಏಕೆಂದರೆ ಅವನು ಹುಚ್ಚನಿದ್ದಿಲ್ಲ. ಅವನು ಮಹಾ ಗರ್ವಿಷ್ಠನಾಗಿದ್ದ. ತನ್ನ ಬುದ್ಧಿವಂತಿಕೆಯ ಡೊಳ್ಳು ಬಾರಿಸಿ ನಮ್ಮನ್ನೆಲ್ಲ ಹೀಗಳೆದಿದ್ದ; ಆಹ್ವಾನಿಸಿದ್ದ.

ಇದಕ್ಕಾಗಿಯೇ ನಾನವನನ್ನು ಶಿಲುಬೆಗೇರುವಂತೆ ಮಾಡಬೇಕಾಯಿತು; ಹಾಗೂ ಅವನನ್ನು ಶಿಲುಬೆಗೇರಿಸಿದುದು ಅಂಥದೇ ಹೀನಮುದ್ರೆಯ ಪಡಿಯಚ್ಚು ಪಡೆದವರಿಗೆ ಒಂದು ಮುನ್ನೆಚ್ಚರವೂ, ಸಂಕೇತವೂ ಆಗಿತ್ತು.

ಇದಕ್ಕಾಗಿ ಸನ್‌ಹ್ಯಾಡ್ರಿನದ ಹಲಕೆಲವು ಹಿರಿಯರೂ ಕೂಡ ನನ್ನನ್ನು ದೂಷಿಸುತ್ತಾರೆಂಬುದು ನನಗೆ ಗೊತ್ತು. ಆದರೆ ಈಗಿನಂತೆ ಆಗ್ಯೂ ಜಾಗ್ರತನೇ ಇದ್ದ ನಾನು, ಒಬ್ಬ ಮನುಷ್ಯನು ಎಲ್ಲ ಜನರನ್ನು ಪ್ರಪಾತಕ್ಕೊಯ್ಯುವುದಕ್ಕಿಂತ, ಎಲ್ಲ ಜನರಿಗಾಗಿ ಒಬ್ಬ ಮನುಷ್ಯ ಸಾಯಲೆಂದು ಬಗೆದೆ.

ಹೊರಗಿನ ವೈರಿಗಳು ಜುಡಿಯಾವನ್ನು ಗೆದ್ದಿದ್ದರು. ಆದರೆ ಒಳಗಿನ ವೈರಿಗಳೇ ಜುಡಿಯಾವನ್ನು ಗೆದಿಯದಂತೆ ನಾನು ನೋಡಿಕೊಳ್ಳುವೆ.

ಆ ಶಪಿತ ಉತ್ತರದೇಶದ ಯಾವನೊಬ್ಬನೂ ನಮ್ಮ ಪವಿತ್ರರ ಪಾವಿತ್ರ್ಯವನ್ನು ನಿಲುಕಲಾರ ಹಾಗೂ ನಮ್ಮ **ಕಾವೆನೆಂಟಿದ ಆರ್ಕ**ದ ಮೇಲೆ ತನ್ನ ನೆಳಲನ್ನು ಬೀಳಿಸಲಾರ.

## ೨೦. ಮೇರಿಯ ನೆರೆಯಾಕೆಯಾಗಿದ್ದ ಒಬ್ಬ ಸ್ತ್ರೀ

ಆವನ ಮರಣದ ನಾಲ್ವತ್ತನೆಯ ದಿನ, ನೆರೆಹೊರೆಯ ಎಲ್ಲ ಮಹಿಳೆಯರು ಮೇರಿಯ ಮನೆಗೆ ಬಂದು ಆಕೆಯನ್ನು ಸಾಂತ್ವನಗೊಳಿಸುತ್ತಾರೆ, ಶೋಕಗೀತ ಹಾಡುತ್ತಾರೆ;

ಅವರಲ್ಲಿಯ ಒಬ್ಬಾಕೆ ಈ ಹಾಡನ್ನು ಹಾಡಿದಳು :

ಎಲ್ಲಿಗೆ, ಎನ್ನ ವಸಂತವೇ ಎಲ್ಲಿಗೆ ನಡೆದೆ ?
ಇನ್ನಾವ ಆಕಾಶದಲ್ಲಿ ನಿನ್ನ ಸೌಗಂಧವು ಸೂಸಬೇಕೆನ್ನುವುದು ?
ಇನ್ನಾವ ಬೇರೆ ನೆಲದ ಮೇಲೆ ನೀನು ನಡೆದಾಡಬೇಕೆನ್ನುವಿ ?
ನಿನ್ನ ಮನದಲ್ಲಿದ್ದುದನ್ನಾಡಲು, ಇನ್ನಾವ ಬಾನೆತ್ತರಕ್ಕೆ
ನಿನ್ನ ತಲೆಯನ್ನೆತ್ತುವೆ ?
ಈ ಕೊಳ್ಳಗಳೆಲ್ಲ ಬಂಜರಾದಾವು,
ಬಂಜರು, ರುಕ್ಷ ಭೂಮಿಗಳನ್ನುಳಿದು ಬೇರೇನೂ ನಮಗೆ
ಉಳಿಯಲಾರವು.
ಹಸಿರು ವಸ್ತುಗಳೆಲ್ಲ ಬಿಸಿಲಿನಲ್ಲಿ ಹುರಿದುಹೋದಾವು,
ನಮ್ಮ ತೋಟಗಳೆಲ್ಲ ಹುಳಿಹಣ್ಣನ್ನೇ ನೀಡಿಯಾವು,
ದ್ರಾಕ್ಷಾ ತೋಟಗಳೆಲ್ಲ ಕಹಿದ್ರಾಕ್ಷೆಯನ್ನೇ ಕೊಟ್ಟಾವು,
ನಿನ್ನ ಮಧುವಿಗಾಗಿ ನಾವು ನೀರಡಿಸೇವು,
ನಿನ್ನ ಸೌಗಂಧವನ್ನು ನಮ್ಮ ಮೂಗು ಬೇಡೀತು.

ಎಲ್ಲಿಗೆ, ನಮ್ಮ ಪ್ರಥಮ ವಸಂತದ ಪುಷ್ಪವೇ, ಎಲ್ಲಿಗೆ ನಡೆದೆ ?
ಅಲ್ಲಿಂದೆಂದೂ ನೀನು ತಿರುಗಿ ಬರಲಾರೆಯಾ ?

ನಿನ್ನ ಮಲ್ಲಿಗೆ ಮತ್ತೆ ನಮಗೆ ಕಾಣಲಾರದೇ
ನಿನ್ನ ಬಳಗದವರೆಲ್ಲ ನಮ್ಮ ದಾರಿಯಲ್ಲಿ ಬಂದು ನಿಂತು
'ನಿಮ್ಮ ಬೇರುಗಳೂ ಬುವಿಯಲ್ಲಿ ಆಳವಾಗಿ ಇಳಿದಿವೆ,
ನಮ್ಮ ಅವಿಶ್ರಾಂತ ಉಸಿರು ಎಂದೆಂದೂ ಗಗನಕ್ಕೇರುವುದು'
ಎಂದು ಹೇಳಲಾರರೇ ?
ಎಲ್ಲಿಗೆ, ಜೀಸಸ್, ಎಲ್ಲಿಗೆ ನಡೆದೆ ?
ನನ್ನ ನೆರೆಯಾಕೆಯಾದ ಮೇರಿಯ ಮಗುವೇ
ನನ್ನ ಮಗನ ಸಹಚರನೇ,
ಎಲ್ಲಿಗೆ, ನಮ್ಮ ಪ್ರಥಮ ವಸಂತವೇ, ಯಾವ ಬೇರೆ ಭೂಮಿಗೆ ?
ನಮ್ಮಲ್ಲಿಗೆ ಪುನಃ ನೀನು ತಿರುಗಿ ಬರಲಾರೆಯಾ ?
ನಮ್ಮ ಕನಸಿನ ಬಂಜರು ದಂಡೆಯನ್ನು ನಿನ್ನ ಪ್ರೇಮಪೂರದ
ಸಿಂಚನದಿಂದ ಸೋಂಕಲಾರೆಯಾ ?

## ೭೧. ಮಹಾನುಭಾವ ಆ:ಜ

ನಾರ್ಝರೀನನ ಜೀಸಸ್‌ನನ್ನು ನಾನು ಕಳೆದ ಸಲ ಕಂಡುದು ಚೆನ್ನಾಗಿ ನನಗೆ ನೆನಪಿದೆ. ಆ ಗುರುವಾರ ಮಧ್ಯಾಹ್ನ, ಜುಡಾಸನು ನಮ್ಮಲ್ಲಿ ಬಂದು ಜೀಸಸ್‌ನಿಗೂ ಅವನ ಮಿತ್ರಮಂಡಲಿಗೂ ಊಟ ಸಿದ್ಧಪಡಿಸಲು ಹೇಳಿದ.

ಅವನು ನನಗೆರಡು ಬೆಳ್ಳಿ ನಾಣ್ಯಗಳನ್ನಿತ್ತು "ಊಟಕ್ಕೆ ಅವಶ್ಯವೆನಿಸಿದ ವಸ್ತುಗಳನ್ನೆಲ್ಲ ತರಿಸು" ಎಂದು ನುಡಿದ.

ಅವನು ಹೋದಬಳಿಕ ನನ್ನ ಪತ್ನಿಯೆಂದಳು: "ಇದು ನಿಜವಾಗಿಯೂ ನಮ್ಮ ಸೌಭಾಗ್ಯ." ಏಕೆಂದರೆ ಜೀಸಸ್ ಪ್ರವಾದಿಯಾಗಿ ಬಿಟ್ಟಿದ್ದ, ಅನೇಕ ಪವಾಡಗಳನ್ನು ಮಾಡಿತೋರಿಸಿದ್ದ.

ಮುಸ್ಸಂಜೆಗೆ ಅವನು ಬಂದ, ಅವನ ಹಿಂಬಾಲಿಗರೂ ಬಂದರು. ಮೇಲಟ್ಟದ ಬಂಕದಲ್ಲಿ ಅವರು ಹೋಗಿ ಊಟದ ಮೇಜಿನ ಸುತ್ತಲೂ ಕುಳಿತರು. ಅಂದವರು ಸ್ತಬ್ಧರೂ ಮೌನಿಗಳೂ ಆಗಿದ್ದರು.

ಕಳೆದ ವರ್ಷ, ಹಾಗೂ ಅದಕ್ಕೊಂದು ವರ್ಷ ಹಿಂದೆ ಕೂಡ, ಅವರಿಲ್ಲಿ ಬಂದಿದ್ದರು; ಆಗವರು ಆನಂದತುಂದಿಲರಾಗಿದ್ದರು. ಆಗವರು ರೊಟ್ಟಿ ಮುರಿದು ತಿಂದಿದ್ದರು, ಮಧುವನ್ನೀಂಟಿದ್ದರು, ನಮ್ಮ ಪುರಾತನ ಗೀತ ಗಳನ್ನು ಹಾಡಿದ್ದರು, ಹಾಗೂ ಜೀಸಸ್ ಅವರೊಡನೆ ಮಧ್ಯರಾತ್ರಿಯು ವರೆಗೂ ಮಾತುಕತೆ ಆಡುತ್ತಲಿದ್ದ.

ಬಳಿಕ ಉಳಿದವರೆಲ್ಲರೂ, ಅವನನ್ನು ಆ ಮೇಲಟ್ಟದ ಬಂಕದಲ್ಲಿ ಏಕಾಕಿಯಾಗಿ ಬಿಟ್ಟು ಬೇರೆ ಬೇರೆ ಕೋಣೆಗಳಲ್ಲಿ ಮಲಗಲು ಹೋದರು. ಏಕೆಂದರೆ ಮಧ್ಯರಾತ್ರಿಯಾದ ಬಳಿಕ ತಾನು ಏಕಾಂತದಲ್ಲಿರಬೇಕೆಂಬದು ಅವನ ಬಯಕೆಯಾಗಿತ್ತು.

ಆಗ ಅವನು ಎಚ್ಚರವಾಗಿರುತ್ತಿದ್ದ. ನಾನು ನನ್ನ ಹಾಸಿಗೆಯಲ್ಲಿ ಮಲಗಿಕೊಂಡೇ ಅವನ ಹೆಜ್ಜೆಸಪ್ಪಳ ಕೇಳುತ್ತಿದ್ದೆ.

ಆದರೀ ಕಡೆಯ ಕಾಲದಲ್ಲಿ ಅವನೂ ಅವನ ಮಿತ್ರರೂ ಸುಖ ವಾಗಿದ್ದಿಲ್ಲ.

ನನ್ನ ಪತ್ನಿ ಗ್ಯಾಲಿಲಿ ಸರೋವರದ ಮೀನಿನ ಅಡಿಗೆ ಮಾಡಿದ್ದಳು. ಹೌರಾನದ ಹಕ್ಕಿ, ಅಕ್ಕಿ ಹಾಗೂ ದಾಡಿಮದ ಬೀಜಗಳ ಹುಗ್ಗಿ ಮಾಡಿ ದ್ದಳು; ಸೈಪ್ರೆಸ್ ಮಧುವಿನ ಹೂಜೆಯನ್ನೊಯ್ದು ಅದೆಲ್ಲವನ್ನೂ ಅವರಿಗೆ ನಾನು ಬಡಿಸಿದೆ.

ಬಳಿಕ ಅವರನ್ನಲ್ಲಿಯೇ ಬಿಟ್ಟು ನಾನು ಹೊರಟುಬಂದೆ; ಏಕೆಂದರೆ ಅವರು ಏಕಾಂತ ಬಯಸುತ್ತಾರೆಂದು ನನಗೆನಿಸಿತು.

ಅವರು ಕತ್ತಲಾಗುವವರೆಗೂ ಅಲ್ಲಿ ಉಳಿದರು. ಬಳಿಕ ಅವರೆಲ್ಲರೂ ಮೇಲಟ್ಟದಿಂದ ಇಳಿದುಬಂದರು. ಆದರೆ ಜೀಸಸ್ ಕೆಳಮೆಟ್ಟಿಲ ಬಳಿ ಸ್ವಲ್ಪ ತಡೆದುನಿಂತ. ನನ್ನ ಕಡೆಗೂ ನನ್ನ ಪತ್ನಿಯ ಕಡೆಗೂ ನೋಡಿದ. ಬಳಿಕ ನನ್ನ ಮಗಳ ತಲೆಯನ್ನು ತನ್ನ ಕೈಗಳಿಂದ ತಟ್ಟಿ ನುಡಿದ: "ನಿಮಗೆಲ್ಲರಿಗೂ ಸುರಾತ್ರ. ನಾವು ಪುನಃ ನಿಮ್ಮ ಮೇಲಟ್ಟಕ್ಕೆ ಬರುವೆವು; ಆದರೂ ನಾವೆಲ್ಲ ನಿಮ್ಮನ್ನು ಇಷ್ಟು ಬೇಗ ಬಿಟ್ಟು ಹೊರಡುವದಿಲ್ಲ. ಸೂರ್ಯೋದಯವಾಗುವ ವರೆಗೂ ನಾವಿಲ್ಲಿ ಇರುವೆವು.

"ಸ್ವಲ್ಪ ಹೊತ್ತಿನಲ್ಲಿಯೇ ನಾವು ತಿರುಗಿ ಬಂದು, ಇನ್ನಷ್ಟು ರೊಟ್ಟಿ, ಇನ್ನಷ್ಟು ಮಧುವನ್ನು ಕೇಳುವೆವು, ನೀನೂ, ನಿನ್ನ ಪತ್ನಿಯೂ ನಮಗೆಲ್ಲ ಒಳ್ಳೇ ಯಜಮಾನರಾಗಿದ್ದೀರಿ, ನಾವೆಲ್ಲ ಈ ನಿಮ್ಮ ಮೇಲಟ್ಟದ ಬಂಕಕ್ಕೆ ಬಂದು ಊಟದ ಮೇಜಿನ ಸುತ್ತು ಕುಳಿತಾಗ ನಿಮ್ಮನ್ನು ಸ್ಮರಿಸುವೆವು."

"ಪ್ರಭೂ, ನಿಮಗೆ ಉಣಬಡಿಸುವುದೆಂದರೇ ನಮಗೊಂದು ಮರ್ಯಾದೆ. ನೀವು ನಮ್ಮಲ್ಲಿಯೇ ಬರುತ್ತಿರುವಿರೆಂದು ಉಳಿದೆಲ್ಲ ಹೋಟೆಲ್ ಮಾಲಕರು ನನ್ನೊಡನೆ ಅಸೂಯೆಬಡುತ್ತಾರೆ; ನಾನೋ, ಮಾರುಪಕಟ್ಟೆಯಲ್ಲಿ ಅವ ರೆಡೆಗೆ ಹೆಮ್ಮೆಯಿಂದ ಮುಗುಳು ನಗುತ್ತಿರುವೆ. ಹಲಕೆಲವು ಸಲ ಅವರಿಗೆ ಅಣಕವನ್ನೂ ಮಾಡುತ್ತಿರುವೆ"

ಅವನು ನುಡಿದ: "ಹಾಟೆಲಿನೊಡೆಯರೆಲ್ಲರೂ ಉಣಬಡಿಸುವದರಲ್ಲಿ ಹೆಮ್ಮೆ ತಾಳಬೇಕು. ಏಕೆಂದರೆ ರೊಟ್ಟಿ-ಮಧುಗಳನ್ನು ನೀಡುವವನು, ಬೆಳೆದು ತುಳಿಸಿ ತೂರಿ ರಾಶಿ ಮಾಡುತ್ತಿರುವವನ ಹಾಗೂ ದ್ರಾಕ್ಷೆ ಹಿಂಡಿ ಮಧು ಮಾಡುತ್ತಿರುವವನ ಬಂಧುವೇ ಆಗಿದ್ದಾನೆ. ನೀವೆಲ್ಲ ಬಹಳ ದಯಾ ವಂತರಾಗಿದ್ದೀರಿ. ನಿಮ್ಮಲ್ಲಿಯದನ್ನು ಉದಾರತೆಯಿಂದ, ಹಸಿದು ನೀರಡಿಸಿ ಬಂದ ಕಪರ್ದಿಕರಹಿತರಿಗೂ ನೀಡುತ್ತೀರಿ."

ಬಳಿಕವನು ಗುಂಪಿನ ಹಣದ ಚೀಲವನ್ನಿಟ್ಟುಕೊಂಡಿದ್ದ ಇಸ್ಕಾರಿ ಯೆಟ್‌ದ ಜುಡಾಸನೆಡೆಗೆ ಹೊರಳಿ ನುಡಿದ: "ನನಗೆರಡು ನಾಣ್ಯಗಳನ್ನು ಕೊಡು."

ಜುಡಾಸನು ಅವನಿಗೆರಡು ನಾಣ್ಯಗಳನ್ನು ಕೊಡುತ್ತ ನುಡಿದ: "ಇವು ನನ್ನ ಹಣದ ಚೀಲದೊಳಗಿದ್ದ ಕೊನೆಯ ಬೆಳ್ಳಿಯ ನಾಣ್ಯ ದ್ವಯಗಳು."

ಜೀಸಸ್ ಅವನೆಡೆಗೆ ನೋಡಿ ನುಡಿದ: "ಬೇಗ, ಬಹುಬೇಗ, ನಿನ್ನ ಚೀಲವು ಮತ್ತೆ ಬೆಳ್ಳಿನಾಣ್ಯಗಳಿಂದ ತುಂಬುವುದು."

ಆ ಮೇಲೆ ಅವೆರಡೂ ನಾಣ್ಯಗಳನ್ನು ನನ್ನ ಕೈಗೆ ಕೊಟ್ಟು ಅವನು ನುಡಿದ: "ಇವುಗಳಿಂದ ನಿನ್ನ ಮಗಳಿಗೊಂದು ರೇಶಿಮೆಯ ನಡುಕಟ್ಟು ಕೊಂಡುಕೊಡು. ಹಾಗೂ ನನ್ನ ನೆನಪಿಗಾಗಿ ಅದನ್ನು 'ಪಾಸೋಹ' ಹಬ್ಬದ ದಿನ ಆಕೆಗೆ ಧರಿಸಲು ಹೇಳು."

ಮತ್ತೆ ನನ್ನ ಮಗಳ ಮೋರೆಯ ಕಡೆ ನೋಡುತ್ತ, ಬಗ್ಗಿ ಅವನು ಅವಳ ಹಣೆಯನ್ನು ಮುತ್ತಿಟ್ಟ. ಹಾಗೂ ಮತ್ತೊ ಒಮ್ಮೆ "ನಿಮಗೆಲ್ಲರಿಗೂ ಸುರಾತ್ರ" ಎಂದು ನುಡಿದ.

ಬಳಿಕ ಅವನು ಹೊರಟುನಡೆದ.

ಅವನು ಆ ದಿನ ನಮಗೆ ನುಡಿದುದನ್ನೆಲ್ಲ ಅವನ ಮಿತ್ರರಲ್ಲೊಬ್ಬನು ತೊಗಲಿನ ಕಾಗದದ ಮೇಲೆ ಬರೆದಿಟ್ಟಿದ್ದಾನೆಂದು ನನಗೆ ತಿಳಿದು ಬಂತು; ಆದರೆ ಅದನ್ನೇ, ಅವನು ತನ್ನ ಬಾಯಿಯಿಂದ ಉಲಿದುದನ್ನು ನಾನು ಕೇಳಿದುದನ್ನೇ, ನಿಮಗೆ ತಿರುಗಿ ಹೇಳಿದ್ದೇನೆ.

"ನಿಮಗೆಲ್ಲರಿಗೂ ಸುರಾತ್ರ" ಎಂದವನು ನುಡಿಯುತ್ತಿದ್ದಾಗಿನ ಅವನ ದನಿಯ ಉಲಿಯನ್ನು ನಾನೆಂದಿಗೂ ಮರೆಯಲಾರೆ.

ಅವನ ಬಗ್ಗೆ ಇನ್ನೂ ಹೆಚ್ಚಿನದನ್ನು ನಿಮಗೆ ಕೇಳಬೇಕಾಗಿದ್ದರೆ ನನ್ನ ಮಗಳನ್ನು ಕೇಳಿ. ಆಕೆ ಈಗ ಬೆಳೆದ ಸ್ತ್ರೀಯಾಗಿದ್ದಾಳೆ. ಆದರೂ ತನ್ನ ಬಾಲ್ಯದ ಆ ನೆನಪಿನಿಂದ ಆಕೆ ಹರುಷಗೊಳ್ಳುತ್ತಾಳೆ. ಅದರ ಬಗ್ಗೆ ನನಗಿಂತಲೂ ಆಕೆಯ ಮಾತು ಹೆಚ್ಚು ಸಿದ್ಧವಾಗಿವೆ.

## ೭೨. ಬರಬ್ಬಾಸ

ಅವರು ನನ್ನನ್ನು ಮುಕ್ತಗೊಳಿಸಿ ಅವನನ್ನಾರಿಸಿದರು. ಆಗ ಅವ ಮೇಲೇರಿದ, ನಾನು ಕೆಳಗುರುಳಿದೆ.

ಅವರು ಅವನನ್ನು ಬಲಿಯಾಗಿ ಹಿಡಿದು ಪಸೋಹಾ ಹಬ್ಬಕ್ಕಾಗಿ ಆಹುತಿ ಕೊಟ್ಟರು.

ನಾನು ಬಂಧಮುಕ್ತನಾಗಿ ಜನಸಂದಣಿಯೊಡನೆ ಅವನ ಹಿಂದೆಹಿಂದೆ ನಡೆದೆ. ಆದರೆ ಆಗ ನಾನು ತನ್ನ ಗೋರಿಯತ್ತ ತಾನೇ ನಡೆದಿದ್ದ ಮನುಷನಂತಾಗಿದ್ದೆ.

ಸೂರ್ಯನ ಬಿಸಿಲಿನಿಂದ ನಾಚಿಕೆಯು ಸುಟ್ಟುಹೋಗುವಂಥ ಮರುಭೂಮಿಗೆ ನಾನು ಹಾರಿಹೋಗಬೇಕಾಗಿತ್ತು. ಆದರೂ ನನ್ನ ಅಪರಾಧಕ್ಕಾಗಿ ಅವನನ್ನು ಬಲಿಹಿಡಿದವನೊಡನೆ ನಾನು ನಡೆದುಹೋದೆ.

ಯಾವಾಗ ಅವರು ಅವನನ್ನು ಶಿಲುಬೆಗೇರಿಸಿ ಮೊಳೆ ಹೊಡೆದರೋ ಆಗ ನಾನಲ್ಲಿಯೇ ನಿಂತಿದ್ದೆ.

ನನಗೆ ಕಾಣಿಸಿತು, ನನಗೆ ಕೇಳಿಸಿತು.

ನಾನು ಕಂಡೆ, ನಾನು ಕೇಳಿದೆ. ಆದರೆ ನಾನೇ ನನ್ನ ದೇಹದಿಂದ ಹೊರಗಿದ್ದಂತಿದ್ದೆ.

ಅವನ ಬಲಗಡೆಗೆ ಶಿಲುಬೆಗೇರಿದ್ದ ಆ ಕಳ್ಳ ಅವನಿಗೆಂದ: "ನಿನಗೂ— ನಾರ್ಝರೆಥದ ಜೀಸಸ್‌ನಾದ ನಿನಗೂ— ಕೂಡ ನನ್ನೊಡನೆ ರಕ್ತಸುರಿಸು ವಂತಾಯಿತೇ ?"

ಜೀಸಸ್ ಹೀಗೆ ಮಾರ್ನುಡಿದ: "ನಿನ್ನನ್ನು ತಲುಪಿ ನಿನ್ನ ಕೈಸೋಂಕಲು ನನ್ನನ್ನು ತಡೆಹಿಡಿದುದು ಈ ಮೊಳೆಯೇ.

"ನಾವಿಬ್ಬರೂ ಕೂಡಿಯೇ ಶಿಲುಬೆಗೇರಿದೆವು. ಅವರು ನಿನ್ನ ಶಿಲುಬೆ ಯನ್ನು ನನ್ನದರ ಬದಿಗೇ ಏರಿಸಬಹುದಿತ್ತು."

ಬಳಿಕ ಅವನು, ಕೆಳಗೆ ತನ್ನ ತಾಯಿಯ ಕಡೆಗೂ, ಅವಳ ಬದಿಯಲ್ಲೇ ನಿಂತ ಯುವಕನ ಕಡೆಗೂ ನಿಟ್ಟಿಸಿ ನೋಡಿದ.

ಅವನೆಂದ: "ತಾಯೀ, ನಿನ್ನ ಬದಿಗೇ ನಿಂತ ನಿನ್ನ ಮಗನ ಕಡೆ ನೋಡು.

"ಸ್ತ್ರೀಯೇ, ನನ್ನೀರಕ್ತದ ಹನಿಗಳನ್ನು ಉತ್ತರದೇಶಕ್ಕೊಯ್ಯತಕ್ಕ ಮನುಷ್ಯನನ್ನು ಈಕ್ಷಿಸು."

ಗ್ಯಾಲಿಲಿಯ ಸ್ತ್ರೀಯರು ಪ್ರಲಾಪಿಸುತ್ತಿರುವುದನ್ನು ಅವನು ಕೇಳಿದಾಗ ಅವನು ನುಡಿದ: "ನೋಡಿಲ್ಲಿ, ಅವರು ಅತ್ತರೆ ನನಗೆ ದಾಹವೇರುತ್ತದೆ.

"ಅವರ ಕಂಬನಿಗಳನ್ನು ಸೋಂಕದಷ್ಟು ಎತ್ತರಕ್ಕೆ ನನ್ನನ್ನಿಲ್ಲಿ ಏರಿಸಿದ್ದಾರೆ.

"ಈ ದಾಹವನ್ನು ಶಮಿಸಲು ನಾನು ವಿಷವನ್ನು, ಕಟು ಕಷಾಯ ವನ್ನು ಕುಡಿಯುವದಿಲ್ಲ."

ಬಳಿಕವನ ಕಂಗುಳು ಆಕಾಶದೆಡೆಗೆ ವಿಶಾಲವಾಗಿ ತೆರೆದವು; ಅವನೆಂದ: "ತಂದೇ, ಏಕೆ ನೀನು ನಮ್ಮನ್ನು ತೊರೆದೆ?"

ಆ ಮೇಲೆ ಅವನು ಕನಿಕರದುಂಬಿ ನುಡಿದ: "ತಂದೇ ಅವರನ್ನು ಕ್ಷಮಿಸು, ಏಕೆಂದರೆ ತಾವೇನು ಮಾಡುತ್ತೇವೆಂಬದೇ ಅವರಿಗೆ ತಿಳಿಯ ದಾಗಿದೆ."

ಅವನೀ ಮಾತನ್ನಾಡಿದಾಗ, ದೇವರೆದುರಿಗೆ ಸಕಲರೂ ಅಡ್ಡಬಿದ್ದು ಈ ಒಬ್ಬನನ್ನು ಶಿಲುಬೆಗೇರಿಸಿದ್ದಕ್ಕಾಗಿ ಕ್ಷಮೆಕೋರುತ್ತಿರುವರೆಂಬಂತೆ ನನಗೆ ಕಂಡುಬಂತು.

ಬಳಿಕವನು ದೊಡ್ಡ ದನಿಯಿಂದ: "ತಂದೆಯೇ ನನ್ನಾತ್ಮವನ್ನು ನಿನಗೇ ಮರಳಿ ಒಪ್ಪಿಸುವೆ."

ಕಟ್ಟಕಡೆಗೆ ಅವನು ಗೋಣೆತ್ತಿ ನುಡಿದ: "ಈ ಗುಡ್ಡದ ಮೇಲೆ ಮಾತ್ರ ಈಗಿದೆಲ್ಲಾ ಮುಗಿಯಿತು."

ಕೊನೆಗವನು ಕಣ್ಣು ಮುಚ್ಚಿದ.

ಕೂಡಲೆ ಕತ್ತಲು ಕವಿದಾಗಸದಲ್ಲಿ ಮಿಂಚು ಹೊಡೆಯಿತು, ದೊಡ್ಡ ದೊಂದು ಗುಡುಗು ಗದ್ದರಿಸಿತು.

ನನ್ನನ್ನು ಬಿಟ್ಟು ಬದಲಿಗೆ ಅವನನ್ನು ಕೊಂದವರು ನನ್ನ ಅನಂತ ಯಾತನೆಯನ್ನೇ ಪಡೆದರೆಂಬದು ಈಗ ನನಗೆ ತಿಳಿದು ಬಂತು.

ಅವನ ಶಿಲುಬೆಗೇರುವಿಕೆಯು ಒಂದು ಗಂಟೆಯುವರೆಗೆ ಮಾತ್ರ ನಡೆಯಿತು

ಆದರೆ ನಾನೋ, ಸಾಯುವವವರೆಗೂ ಶಿಲುಬೆಗೇರುತ್ತಲೇ ಇದ್ದೇನೆ.

## ೭೩. ರೋಮನ್ ದಲಪತಿ ಕ್ಲಾಡಿಯಸ್

ಅವನನ್ನು ಹಿಡಿದು ನನಗೊಪ್ಪಿಸಲಾಯಿತು; ಹಾಗೂ ಬೆಳಗಾಗುವ ವರೆಗೆ ಅವನನ್ನು ಕಾಯಲು ನನಗೆ ಆಜ್ಞಾಪಿಸಲಾಯಿತು.

ನನ್ನ ಸೈನಿಕರು ಅವನನ್ನು ಕೈದಿಯಂತೆ ಒಯ್ದರು. ಅವನು ಅವರಿಗೆ ವಿಧೇಯನಾಗಿದ್ದ.

ಮಧ್ಯರಾತ್ರಿಯಲ್ಲಿ ನಾನು ನನ್ನ ಹೆಂಡಿರು ಮಕ್ಕಳನ್ನುಳಿದು ಹೊರಟು ಆಯುಧ ಶಾಲೆಯನ್ನು ಸಂದರ್ಶಿಸಿದೆ. ಜೆರೂಸಲೇಮದಲ್ಲಿ ನನ್ನ

ಸೈನಿಕರದೆಲ್ಲ ಸರಿಯಿದೆಯೇ ಎಂಬದನ್ನು ಸುತ್ತಾಡಿಕೊಂಡು ನೋಡಿ ಬರುವುದು ನನ್ನ ಚಟವಾಗಿತ್ತು. ಆ ರಾತ್ರಿ ನಾನು ಅವನನ್ನು ಸೆರೆಯಿಟ್ಟ ಆಯುಧ ಶಾಲೆಯನ್ನು ಸಂದರ್ಶಿಸಿದೆ.

ನನ್ನ ಸೈನಿಕರೂ, ಮತ್ತೂ ಕೆಲ ಜ್ಯೂಜನರೂ ಅವನನ್ನು ಹಾಸ್ಯ ಮಾಡುತ್ತಿದ್ದರು. ಅವರು ಅವನ ಉಡುಪನ್ನು ಸೆಳೆದಿದ್ದರು; ಕಳೆದ ವರ್ಷದ ಮುಳ್ಳು ಕಂಟಿಯ ಕಿರೀಟಮಾಡಿ ಅವನ ತಲೆಗೆ ತೊಡಿಸಿದ್ದರು.

ಅವರು ಅವನನ್ನೊಂದು ಕಂಬಕ್ಕಾನಿಸಿ ಕುಳ್ಳಿರಿಸಿದರು; ಅವನೆದುರಿಗೆ ಅವರೆಲ್ಲ ಕೂಗುತ್ತ ಚೀರುತ್ತ ಕುಣಿಯುತ್ತಿದ್ದರು.

ಹಾಗೂ ಅವನ ಕೈಯಲ್ಲಿ ಅವರೊಂದು ಕೊಳಲನ್ನು ಕೊಟ್ಟಿದ್ದರು.

ನಾನಲ್ಲಿ ಬಂದಾಗ ಒಬ್ಬ ಕೂಗಿಕೊಂಡ: "ಓ ದಲಪತೀ ನೋಡಿಲ್ಲಿ ಈ ಜ್ಯೂಜನರ ಜನಪನನ್ನು."

ನಾನವನೆದುರು ಬಂದುನಿಂತೆ, ಅವನೆಡೆಗೆ ನೋಡಿದೆ. ನನಗೆ ನಾಚಿಕೆಯಾಯಿತು. ಏಕೆಂಬದು ನನಗೆ ತಿಳಿಯಲಿಲ್ಲ.

ಗ್ಯಾಲಿಯಾ ಹಾಗೂ ಸ್ಪೇನದಲ್ಲಿ ನಾನು ಕಾದಾಡಿದ್ದೇನೆ, ನನ್ನ ಸೈನಿಕರೊಡನೆ ಮರಣವನ್ನೆದುರಿಸಿದ್ದೇನೆ. ಆದರೂ ನನಗೆ ಹೆದರಿಕೆಯಿದ್ದಿಲ್ಲ. ಪುಕ್ಕನಾಗಿದ್ದಿಲ್ಲ. ಆದರೆ ಈ ಮನುಷ್ಯನೆದುರು ನಾನು ಬಂದು ನಿಂತಾಂಗ, ಹಾಗು ಅವನು ನನ್ನೆಡೆಗೆ ನೋಡಿದಾಗ ನಾನು ಎದೆಯೊಡೆದೆ. ನನ್ನ ತುಟಿಗಳು ಬಿಗಿದಂತಾಯಿತು, ಒಂದೂ ಮಾತನ್ನಾಡಲಾರದಾದೆ.

ಹಾಗೂ ನೆಟ್ಟಗೇ ನಾನು ಆಯುಧ ಶಾಲೆಯನ್ನು ಳಿದು ಹೊರಹೊರಟೆ.

ಇದು ಮೂವತ್ತು ವರ್ಷಗಳ ಹಿಂದಿನ ಮಾತು. ಆಗ ಕೂಸಾಗಿದ್ದ ನನ್ನ ಮಕ್ಕಳು ಈಗ ಹರೆಯದವರಾಗಿದ್ದಾರೆ ಅವರು ರೋಮಕ್ಕೂ ಸೀಝರನಿಗೂ ಸೇವೆ ಸಲ್ಲಿಸುತ್ತಿದ್ದಾರೆ.

ಅವರಿಗೆ ಬುದ್ಧಿವಾದ ಹೇಳುವಾಲೆಲ್ಲ ನಾನು ಅವನ ಬಗ್ಗೆ— ತನ್ನ ತುಟಿಗಳಲ್ಲಿ ಜೀವರಸದುಂಬಿಕೊಂಡು ತನ್ನ ಕೊಲೆಗಾರರ ಬಗ್ಗೆ ತನ್ನ ಕಂಗಳಲ್ಲಿ ಕರುಣೆದುಂಬಿಕೊಂಡು ಮರಣವನ್ನೆದುರಿಸಿದ ಅವನ ಬಗ್ಗೆ— ಆಡಿದ್ದೇನೆ.

ಈಗ ನಾನು ಮುದುಕ. ಸಾಕಷ್ಟು ಕಾಲ ಬದುಕಿದ್ದಾಗಿದೆ. ನಿಜ

ವಾಗಿಯೂ, ಪಾಂಪೇಯಾಗಲೀ, ಸೀಝರನಾಗಲೀ ಗ್ಯಾಲಿಲಿಯ ಆ ಮನು ಷ್ಯನಷ್ಟು ದೊಡ್ಡ ಅಧಿಕಾರಯುತರಲ್ಲವೆಂದು ನನಗೆನಿಸುತ್ತದೆ.

ಏಕೆಂದರೆ ಅವರ ಅಪ್ರತಿರೋಧಿತ ಆಹುತಿಯಾದಂದಿನಿಂದ, ಅವನ ಸಲುವಾಗಿ ಕಾದಾಡಲು ಭೂಮಿಯೊಳಗಿಂದ ಒಂದು ದೊಡ್ಡ ಸೈನ್ಯವೇ ಎದ್ದಿದೆ. ಅಲ್ಲದೆ ಜೀವಿಸಿರುವ ಈ ಪಾಂಪೇ, ಈ ಸಿಝರರೂ ಕೂಡ ಎಂದೂ ಸೇವೆಗೊಳ್ಳದಷ್ಟು, ಹೆಚ್ಚು ಒಳ್ಳೆಯ ಸೇವೆಯನ್ನು, ಸತ್ತಿದ್ದರೂ, ಅವನು ಅವರಿಂದ ಕೊಂಡಿದ್ದಾನೆ.

## ೭೪. ಪ್ರಭುವಿನ ಬಂಧು ಜೇಮ್ಸ್

ಆ ರಾತ್ರಿಯ ನೆನಪು ಒಂದು ಸಾವಿರಾರು ಸಲವಾದರೂ ನನಗೆ ಆಗುತ್ತಿದ್ದಿತು; ಇನ್ನೂ ಒಂದು ಸಾವಿರಾರು ಸಲವಾದರೂ ಅದು ಆಗುವು ದೆಂಬುದು ನನಗೆ ಗೊತ್ತು.

ಭೂಮಿಯು ತನ್ನನ್ನು ಹರಗಿದ ಕುಂಟೆಯನ್ನು ಮರೆತೀತು, ಸ್ತ್ರೀಯು ಜನನಕಾಲದ ನೋವು-ನಲಿವುಗಳನ್ನೂ ಮರೆತಾಳು; ಆದರೆ ನಾನೆಂದೂ ಆ ರಾತ್ರಿಯನ್ನು ಮರೆಯುವಂತಿಲ್ಲ.

ಆ ಮಧ್ಯಾಹ್ನ ಜೆರೂಸಲೇಮದ ಊರಹೊರಗೆ ಬಂದಿದ್ದೆವು; ಜೀಸಸ್ ಆಗೆಂದಿದ್ದ: "ನಾವೆಲ್ಲರೂ ಊರೊಳಗೆ ಹೋಗಿ ಖಾನಾವಳಿಯಲ್ಲಿ ಊಟ ಮಾಡೋಣ."

ನಾವೆಲ್ಲ ಖಾನಾವಳಿಯನ್ನು ತಲುಪಿದಾಗ ಕತ್ತಲಾಗಿತ್ತು; ನಮಗೆಲ್ಲ ಬಹಳ ಹಸಿವೆಯೂ ಆಗಿತ್ತು. ಖಾನಾವಳಿಯವನು ನಮ್ಮನ್ನೆಲ್ಲ ಸ್ವಾಗತಿಸಿ, ಮೇಲಟ್ಟದ ಪಡಸಾಲೆಗೆ ನಮ್ಮನ್ನು ಕರೆದೊಯ್ದ.

ಊಟದ ಮೇಜಿನ ಸುತ್ತಲೂ ಕುಳಿತುಕೊಳ್ಳಲು ಜೀಸಸ್ ನಮಗೆ ಹೇಳಿದ. ಆದರೆ ತಾನು ಮಾತ್ರ ಇನ್ನೂ ಹಾಗೆಯೇ ನಿಂತುಕೊಂಡಿದ್ದ; ಅವನು ನಮ್ಮನ್ನು ನೋಡುತ್ತಲೇ ನಿಂತುಕೊಂಡಿದ್ದ.

ಅವನು ಖಾನಾವಳಿಯವರಿಗೆ ಹೇಳಿದ: "ಒಂದು ಗಂಗಾಳ, ಒಂದು ನೀರು ತುಂಬಿದ ಬಿಂದಿಗೆ, ಒಂದು ಟಾವೆಲ್‌ಗಳನ್ನು ನನಗೆ ತಂದುಕೊಡು."

ಮತ್ತೆ ನಮ್ಮ ಕಡೆಗೆ ನೋಡುತ್ತ ಮೆಲ್ಲನೆ ನುಡಿದ: "ನಿಮ್ಮ ಪಾದರಕ್ಷೆಗಳನ್ನು ತೆಗೆದಿಡಿರಿ.''

ಏಕೆಂಬುದು ನಮಗೆ ಅರ್ಥವಾಗದಿದ್ದರೂ, ಅವನಾಣತಿಯಂತೆ ನಾವೆಲ್ಲರೂ ಪಾದರಕ್ಷೆಗಳನ್ನು ತೆಗೆದಿಟ್ಟೆವು.

ಅಷ್ಟರಲ್ಲಿ ಖಾನಾವಳಿಯವನು ಗಂಗಾಳವನ್ನೂ ತೀರುತುಂಬಿದ ಬಿಂದಿಗೆಯನ್ನೂ ತಂದ. ಜೀಸಸ್ ಹೇಳಿದ: ''ಈಗ ನಾನು ನಿಮ್ಮ ಕಾಲು ತೊಳೆಯುವೆ. ಏಕೆಂದರೆ ಪುರಾತನ ಬೀದಿಯ ಧೂಳುಮುಸುಕಿದ ನಿಮ್ಮ ಕಾಲುಗಳನ್ನು ಜಳಜಳ ಮಾಡಿ, ಅವುಗಳಿಗೆ ಹೊಸಹಾದಿಯ ಸ್ವಾತಂತ್ರ್ಯ ಕೊಡುವುದು ಅವಶ್ಯವಿದೆ.''

ನಾವೆಲ್ಲರೂ ಬೆಚ್ಚಿದೆವು, ನಾಚಿಕೊಂಡೆವು.

ಬಳಿಕ ಸಾಯ್‌ಮನ್ ಪೀಟರನು ಎದ್ದುನಿಂತು ನುಡಿದ: "ನಮ್ಮ ಪ್ರಭು, ನಮ್ಮ ಗುರುವೇ ನಮ್ಮ ಕಾಲುಗಳನ್ನು ತೊಳೆಯುವದನ್ನು ನಾವು ಹೇಗೆ ಸಹಿಸಬಹುದು ?"

ಜೀಸಸ್ ಉತ್ತರಿಸಿದ: ''ಯಾರು ಜನಸೇವೆಯನ್ನು ಮಾಡುತ್ತಾರೋ ಅವರೇ ಜನರಲ್ಲೆಲ್ಲ ಎಲ್ಲಕ್ಕೂ ದೊಡ್ಡವರೆಂಬುದು ನಿಮ್ಮ ನೆನಪಿನಲ್ಲುಳಿಯಲೆಂದು ನಾನೀಗ ನಿಮ್ಮ ಕಾಲುತೊಳೆಯುತ್ತೇನೆ.''

ಬಳಿಕವನು ನಮ್ಮಲ್ಲಿಯ ಪ್ರತಿಯೊಬ್ಬರನ್ನೂ ನಿಟ್ಟಿಸಿನೋಡಿ ನುಡಿದ: ''ನಿಮ್ಮನ್ನೆಲ್ಲ ತನ್ನ ಬಂಧುಗಳೆಂದು ತಿಳಿದ ಈ ಮಾನವಪುತ್ರನು ಯಾರ ಪಾದಗಳು ನಿನ್ನಿನವರೆಗೂ ಅರೇಬಿಯಾದ ಗಂಧರಸದಿಂದ ಅಭಿಷೇಕಗೈಯಲ್ಪಟ್ಟು ಮಹಿಳೆಯರ ಕೂದಲುಗಳಿಂದ ಒರೆಸಲ್ಪಟ್ಟವೋ ಅಂಥವನು ಈಗ ನಿಮ್ಮ ಪಾದಗಳನ್ನು ತೊಳೆಯಬಯಸುತ್ತಾನೆ."

ಆ ಮೇಲೆ ಅವನು ಗಂಗಾಳವನ್ನೂ ಬಿಂದಿಗೆಯನ್ನೂ ತೆಗೆದುಕೊಂಡು ಮೊಳಕಾಲೂರಿ ಬಾಗಿ ಜುಡಾಸ್ ಇಸ್ಕಾರಿಯೆಟನಿಂದ ಮೊದಲು ಮಾಡಿ ಸಕಲರ ಪಾದಗಳನ್ನೂ ತೊಳೆದನು.

ಬಳಿಕ ಅವನು ನಮ್ಮೆಲ್ಲರೊಡನೆ ಊಟದ ಮೇಜಿನ ಬಳಿ ಕುಳಿತ; ಆಗವನ ಮುಖವು, ಹೋರಾಟ ರಕ್ತಪಾತಗಳಲ್ಲಿ ಇರುಳನ್ನು ಕಳೆದ ರಣರಂಗದ ಮೇಲಿನ ಅರುಣೋದಯದಂತೆ ಪ್ರಭಾಯ ಮಾನವಾಗಿತ್ತು.

ಅಷ್ಟರಲ್ಲಿ, ಖಾನಾವಳಿಯವನು ತನ್ನ ಸ್ತ್ರೀಯೊಡನೆ ಆಹಾರ ಮಧು ಗಳನ್ನು ತೆಗೆದುಕೊಂಡು ಬಂದ.

ಜೀಸಸ್ ಬಗ್ಗಿ ನನ್ನ ಕಾಲು ತೊಳೆಯುವ ಮೊದಲು ಬಹಳ ಹಸಿವೆ ಯೆನಿಸುತ್ತಿದ್ದ ನನಗೆ ಈಗ ಊಟ ಒಲ್ಲದಾಯಿತು. ಮಧುವಿನಿಂದಲೂ ಆರ ಲಾಗದ ದಾಹವೊಂದು ನನ್ನ ಗಂಟಲನ್ನು ಸುಡುತ್ತಿತ್ತು.

ಬಳಿಕ ಜೀಸಸ್ ರೊಟ್ಟಿಯ ತುಂಡೊಂದನ್ನು ತೆಗೆದುಕೊಂಡು ನಮಗೆ ಕೊಡುತ್ತ ನುಡಿದ: "ಬಹುಶಃ ನಾವಿನ್ನೊಂದು ಸಲ ರೊಟ್ಟಿಯನ್ನು ಮುರಿಯಲಾರೆವು. ಗ್ಯಾಲಿಲಿಯಲ್ಲಿಯ ನಮ್ಮ ದಿನಗಳ ಸ್ಮೃತಿಗಾಗಿ ನಾವೀ ತುತ್ತನ್ನೆತ್ತೋಣ.

ಬಳಿಕವನು ಮಧುವನ್ನು ಹೂಜಿಯಿಂದ ಬಟ್ಟಲಿಗೆ ಬಾಗಿಸಿದ. ತಾನೂ ಕುಡಿದ, ನಮಗೂ ಕೊಟ್ಟ. ಹೀಗೆಂದ: "ನಮಗೆಲ್ಲರಿಗೂ ಗೊತ್ತಿದ್ದ ನೀರಡಕೆಯ ನೆನಪಿಗಾಗಿ ಇದನ್ನು ಕುಡಿಯಿರಿ. ಹೊಸ ದ್ರಾಕ್ಷಾ ಸುಗ್ಗಿಯನ್ನು ಬಯಸಿ ಕೂಡ ಈ ಮಧುವನ್ನು ಕುಡಿಯಿರಿ. ನನ್ನನ್ನು ಮುತ್ತಿ ಬಿಟ್ಟಾಗ, ನಾನು ನಿಮ್ಮೊಡನಿಲ್ಲದಾಗ, ಹಾಗೂ ನೀವು ಇಲ್ಲಿಯೋ, ಇನ್ನೆ ಲ್ಲಿಯೋ ಕೂಡಿದಾಗ, ನೀವೀಗಿನಂತೆಯೇ ರೊಟ್ಟಿಗಳನ್ನು ಮುರಿಯಿರಿ, ಮಧುವನು ಸುರಿಯಿರಿ, ತಿನ್ನಿರಿ, ಕುಡಿಯಿರಿ. ಬಳಿಕ ನಿಮ್ಮ ಸುತ್ತು–ಮುತ್ತು ನೋಡಿರಿ, ಆಗ ಒಮ್ಮೊಮ್ಮೆ ನಾನೂ ನಿಮ್ಮ ಊಟದ ಮೇಜಿನ ಬಳಿ ನಿಮ್ಮೊಡನೆ ಕುಳಿತಿರುವುದನ್ನು ನೀವು ಕಾಣಬಹುದು."

ಹೀಗೆ ನುಡಿದು ಅವನು, ಹಕ್ಕಿ ತನ್ನ ಮರಿಗಳಿಗೆ ಗುಟುಕಿಕ್ಕುವಂತೆ, ನಮಗೆಲ್ಲ ಮೀನಿನ, ಹಕ್ಕಿಗಳ ಕವಳವನ್ನು ಹಂಚಿಕೊಡಲಾರಂಭಿಸಿದ.

ನಾವು ಸ್ವಲ್ಪೇ ತಿಂದೆವು, ಆದರೂ ಹೊಟ್ಟೆತುಂಬಿತು; ಒಂದು ಗುಟುಕು ಮಾತ್ರ ಕುಡಿದೆವು, ಏಕೆಂದರೆ ಆ ಬಟ್ಟಲವು ಭೂಮ್ಯಾಕಾಶಗಳ ನಡುವಿನ ಅವಕಾಶದಷ್ಟಿದ್ದಂತಿತ್ತು.

ಬಳಿಕ ಜೀಸಸ್ ನುಡಿದ: "ನಾವಿಲ್ಲಿಂದೇಳುವ ಮೊದಲು ಗ್ಯಾಲಿಲೀಯ ನಲ್ಗೀತಗಳನ್ನು ಹಾಡೋಣ."

ಎದ್ದು ನಿಂತು ನಾವೆಲ್ಲರೂ ಕೂಡಿ ಆ ಗೀತಗಳನ್ನು ಹಾಡಿದೆವು; ಅವನ

ದನಿ ನಮ್ಮೆಲ್ಲರಿಗಿಂತಲೂ ಉಜ್ಜ್ವವಾಗಿತ್ತು. ಪ್ರತಿ ಶಬ್ದದಲ್ಲಿಯೂ ಅವನ ನುಡಿಯ ನಾದವೇ ನಿನದಿಸುತ್ತಿತ್ತು.

ಅವನು ನಮ್ಮೆಲ್ಲರ, ನಮ್ಮಲ್ಲಿ ಪ್ರತಿಯೊಬ್ಬರ ಮುಖವನ್ನೂ ಈಕ್ಷಿಸಿದ. ಬಳಿಕ ನುಡಿದ: " ನಾನೀಗ ನಿಮ್ಮ ನಿರೋಪ ತೆಗೆದುಕೊಳ್ಳುವೆ. ನಾವೆಲ್ಲರೂ ಈ ಮನೆಯಾಚೆ ಹೊರಹೊರಡೋಣ, ಗೆಥ್ಸಮೇನಕ್ಕೆ ಹೋಗೋಣ. "

ಅದಕ್ಕೆ ಝಬೇದಿ ಪುತ್ರ ಜಾನ ನುಡಿದ: "ಪ್ರಭೂ ಈ ರಾತ್ರಿ ನೀವೇಕೆ ನಮ್ಮ ನಿರೋಪ ತೆಗೆದುಕೊಳ್ಳುವೆನೆಂದು ಹೇಳುತ್ತೀರಿ ! "

ಜೀಸಸ್ ಉತ್ತರಿಸಿದ: " ನಿಮ್ಮ ಹೃದಯಗಳು ಗಡಬಡಿಸದಿರಲಿ. ನನ್ನ ಮಹಾಪಿತನ ಮನೆಯಲ್ಲಿ ನಿಮಗಾಗಿ ಸ್ಥಾನಗಳನ್ನು ಸಿದ್ಧಪಡಿಸಲು ಮಾತ್ರ ನಾನು ನಿಮ್ಮನ್ನುಳಿದು ಹೊರಡುವೆ. ನಿಮಗೆ ನನ್ನ ಅವಶ್ಯಕತೆ ಎನಿಸಿದರೆ ನಾನು ನಿಮ್ಮೆಡೆಗೆ ಮರಳಿ ಬರುವೆ. ಎಲ್ಲಿ ನೀವು ಕೂಗಿ ಕರೆಯುವಿರೋ ಅಲ್ಲಿ ನಿಮ್ಮ ಕೂಗು ಕೇಳಿ ಬರುವೆ; ನಿಮ್ಮಾತ್ಮವು ಎಲ್ಲೆಲ್ಲಿ ನನ್ನನ್ನು ಶೋಧಿಸುವುದೋ ಅಲ್ಲೆಲ್ಲ ನಾನು ಇದ್ದೇ ಇರುವೆ.

"ತೃಷ್ಣೆಯು ಮಧುಮನೆಗೂ, ಹಸಿವೆಯು ಮದುವೆಯೌತನಕ್ಕೂ ಕರೆದೊಯ್ಯುವುದೆಂಬುದನ್ನು ಮರೆಯದಿರಿ.

" ನಿಮ್ಮ ಪ್ರಬಲ ಆಕಾಂಕ್ಷೆಯೇ ಈ ಮಾನವಪುತ್ರನನ್ನು ಶೋಧಿಸಿ ಕಾಣುವುದು. ಏಕೆಂದರೆ ಈ ಆಕಾಂಕ್ಷೆಯೇ ಆನಂದದ ಬುಗ್ಗೆಯ ಬಾಯಿಯಾಗಿದೆ; ಅದೇ ಮಹಾಪಿತನೆಡೆಗೆ ಕರೆದೊಯ್ಯುವ ದಾರಿಯಾಗಿದೆ. "

ಜಾನ ಮತ್ತೆ ಮರುನುಡಿದ: " ನೀನು ನಮ್ಮನ್ನುಳಿದು ಹೊರಡುವುದೇ ಆದಲ್ಲಿ ನಮಗೆ ಹೇಗೆ ಉಲ್ಲಾಸವೆನಿಸೀತು? ಈ ವಿಯೋಗದ ಮಾತನ್ನೇಕೆ ನೀವು ಆಡುವಿರಿ ?"

ಜೀಸಸ್ ಉತ್ತರಿಸಿದ: "ಬೇಟೆಗೊಳಗಾದ ಚಿಗರಿಗೆ, ಎದೆಯಲ್ಲಿ ನಾಟುವ ಮೊದಲೇ ಬೇಟೆಗಾರನ ಬಾಣವು ಬರುವುದು ತಿಳಿದಿರುತ್ತದೆ. ಹರಿವ ನದಿಗೆ ದಂಡೆ ತಲುಪುವ ಮೊದಲೇ ಸಾಗರದ ಎಚ್ಚರವಿರುತ್ತದೆ. ಹಾಗೂ ಈ ಮಾನವಪುತ್ರನು ಮಾನವರ ಹಾದಿಯನ್ನೇ ಹಿಡಿದು ನಡೆದಿದ್ದಾನೆ.

"ಇನ್ನೊಂದು ಬದಾಮು ಗಿಡವು ಬಿಸಿಲಲ್ಲಿ ಹೂ ಬಿಡುವ ಮೊದಲೇ ನನ್ನ ಬೇರುಗಳು ಇನ್ನೊಂದು ಹೊಲದ ಹೃದಯದಾಳದಲ್ಲಿ ಇಳಿದಿರುತ್ತವೆ."

ಬಳಿಕ ಸಾಯ್‌ಮನ್ ಪೀಟರ ನುಡಿದ: "ಪ್ರಭೂ, ಈಗಲೇ ನಮ್ಮನ್ನು ಬಿಟ್ಟು ಹೊರಡಬೇಡ. ನಿನ್ನ ಸಾನ್ನಿಧ್ಯದಾನಂದದಿಂದ ನಮ್ಮನ್ನು ತೊಲಗಿಸಬೇಡ. ನೀನು ಹೋದಲ್ಲಿ ನಾವೂ ಬರುವೆವು, ನೀನಿದ್ದಲ್ಲಿಯೇ ನಾವೂ ಕೂಡ ಇರುವೆವು."

ಜೀಸಸ್ ಸಾಯ್‌ಮನ್ ಪೀಟರನ ಮೇಲೆ ಕೈಹಾಕಿ, ಅವನ ಮೊಗ ನೋಡಿ ಮುಗುಳು ನಕ್ಕು ನುಡಿದ: "ಯಾರಿಗೆ ಗೊತ್ತು? ಈ ಇರುಳು ಕಳೆಯುವುದರೊಳಗೇ ನೀನು ನನ್ನನ್ನು ಅಲ್ಲಗಳೆಯಬಹುದು, ನಾನು ನಿನ್ನನ್ನು ಬಿಟ್ಟು ಹೊರಡುವ ಮೊದಲೇ ನೀನೇ ನನ್ನನ್ನು ಬಿಟ್ಟು ಹೊರಡಬಹುದು.

ಬಳಿಕ ಒಮ್ಮೆಲೆ ಅವನೆಂದ: "ನಾವಿಲ್ಲಿಂದ ಹೊರಹೊರಡೋಣ."

ಖಾನಾವಳಿಯಿಂದ ಅವನು ಹೊರಹೊರಟ; ನಾವೆಲ್ಲ ಅವನನ್ನು ಹಿಂಬಾಲಿಸಿದೆವು. ನಾವು ನಗರದ್ವಾರವನ್ನು ತಲುಪಿದಾಗ ಇಸ್ಕಾರಿಯೆಟದ ಜುಡಾಸನು ನಮ್ಮೊಳಗೆ ಇದ್ದಿಲ್ಲ. ಜಹನಮ್ ಕೊಳ್ಳವನ್ನು ದಾಟಿದ ಕೂಡಲೇ ಜೀಸಸ್ ನಮ್ಮಿಂದ ಬಹಳ ಮುಂದೆಮುಂದೆ ನಡೆದು ಹೋದ; ನಾವೆಲ್ಲ ಒಬ್ಬರಿಗೊಬ್ಬರು ಕೂಡಿ ನಡೆದೆವು

ನಾವೆಲ್ಲರೂ ಓಲಿವ್ಹ ತೋಟವನ್ನು ತಲುಪಿದೊಡನೆ ಅವನು ತಡೆದು ನಮ್ಮೆಡೆಗೆ ತಿರುಗಿ ನುಡಿದ: "ಇಲ್ಲಿಯೇ ಒಂದು ಗಂಟೆ ವಿಶ್ರಮಿಸಿರಿ."

ಅರೆ ನೇರಿಲ ಮರಗಳ ಮೊಗ್ಗು ಚಿಗುರುಗಳೊಡನೆ, ಶೇಬುಗಿಡದ ಹೂವಿನೊಡನೆ ಅದು ತುಂಬಿದ ವಸಂತ ಕಾಲವಾಗಿದ್ದರೂ ಆ ಸಂಜೆಯಲ್ಲಿ ಚಳಿಯಿತ್ತು. ಅಲ್ಲಿಯ ತೋಟಗಳೆಲ್ಲ ಮನೋಹರವಾಗಿದ್ದವು.

ನಮ್ಮಲ್ಲಿ ಪ್ರತಿಯೊಬ್ಬರೂ ಒಂದೊಂದು ಗಿಡದ ಬೊಡ್ಡೆಯನ್ನು ನೋಡಿಕೊಂಡು ಅದಕ್ಕಾತು ಕುಳಿತುಕೊಂಡೆವು. ನಾನು ಮೈಗೆ ವಸ್ತ್ರ ಸುತ್ತಿಕೊಂಡು ಪಾಯಿನ್ ಗಿಡದ ಬುಡಕ್ಕೆ ಕುಳಿತೆ.

ಆದರೆ ಜೀಸಸ್ ನಮ್ಮನ್ನುಳಿದು ತಾನೊಬ್ಬನೇ ಓಲಿವ್ಹ ತೋಟದೆಡೆಗೆ ಹೊರಟು ನಡೆದ. ಉಳಿದವರೆಲ್ಲ ಮಲಗಿಕೊಂಡಿದ್ದರೂ ನಾನವನ್ನು ಕಾಯುತ್ತಲೇ ಇದ್ದೆ.

ಅವನು ಒಮ್ಮೊಮ್ಮೊಮ್ಮೆ ಸ್ತಬ್ಧನಾಗಿ ನಿಲ್ಲುತ್ತಿದ್ದ; ಪುನಃ ಅತ್ತಿಂದಿತ್ತ ಇತ್ತಿಂದಿತ್ತ ಅಡಿಯಾಡುತ್ತಿದ್ದ. ಹೀಗವನು ಅನೇಕಸಲ ನಡೆಸಿಯೇ ಇದ್ದ.

ಬಳಿಕವನು ಮೂಡಣಕ್ಕೂ ಪಡುವಣಕ್ಕೂ ತನ್ನ ಕೈ ಚಾಚಿ ಆಕಾಶ ಡೆಡೆಗೆ ಮುಖವೆತ್ತಿರುವುದನ್ನು ನಾನು ಕಂಡೆ.

ಒಮ್ಮೆ ಅವನೆಂದಿದ್ದ: "ಸ್ವರ್ಗ, ಮರ್ತ್ಯ ಹಾಗೂ ನರಕವೂ ಕೂಡ ಮಾನವರಪೇ ಇದೆ." ಅವನ ಈ ನುಡಿ ಈಗ ನನ್ನ ನೆನಪಿಗೆ ಬಂತು. ಆ ಆಲಿವ್ಹ್ ತೋಟದಲ್ಲಿ ಅಡಿಯಾಡುತ್ತಿದ್ದವನು ಸ್ವರ್ಗೀಯ ಮಾನವನೆಂಬುದು ನನಗೆ ಗೊತ್ತಿತ್ತು. ಈ ಭೂಗರ್ಭವು ಕೇವಲ ಒಂದು ಪ್ರಾರಂಭ, ಅಥವಾ ಒಂದು ಅಂತ್ಯವಲ್ಲವೆಂದೂ, ಆದರೆ ಇದೊಂದು, ಯಾನ, ಒಂದು ವಿಶ್ರಾಂತಿ ಸ್ಥಾನವೆಂದೂ, ಹಾಗೂ ಒಂದು ಅಚ್ಚರಿ ಒಂದು ಜರಗಿನ ಕ್ಷಣವೆಂದೂ ನಾನು ನನ್ನೊಳಗೇ ಯೋಚಿಸುತ್ತಿದ್ದೆ. ಜೀಸಸ್ ಹಾಗೂ ಆ ಪವಿತ್ರ ಪಟ್ಟಣದ ನಡುವಿನ ಆ ಜೆಹನಮ್ ಕೊಳ್ಳದಲ್ಲಿ ಒಂದು ನರಕವನ್ನೂ ನಾನು ಕಂಡೆ.

ಅವನಲ್ಲಿ ನಿಂತುಕೊಂಡಾಗ ಮತ್ತು ನಾನಿಲ್ಲಿ ವಸ್ತ್ರ ಸುತ್ತಿಕೊಂಡು ಕುಳಿತೇ ಅವನ ನುಡಿಯ ನಿನಾದವನ್ನು ಆಲಿಸಿದೆ. ಆದರವನು ನಮಗಾಗಿ ಮಾತನಾಡುತ್ತಿದ್ದಿಲ್ಲ. ಅವನು "ತಂದೆಯೇ" ಎಂದುಚ್ಚರಿಸಿದುದನ್ನು ಮೂರು ಸಲ ನಾನು ಕೇಳಿದೆ. ಅಷ್ಟೇ ಮಾತ್ರ ನನಗೆ ಕೇಳಿಸಿದ್ದು.

ಕೆಲಹೊತ್ತಿನ ಮೇಲೆ ಅವನು ಕೈಗಳನ್ನು ಕೆಳಗೆ ಬಿಟ್ಟ; ಹಾಗೂ ನನ್ನ ದೃಷ್ಟಿ ಮತ್ತು ಆಕಾಶಗಳ ಮಧ್ಯೆ ಅವನು ಸೈಪ್ರಸ್ ವೃಕ್ಷದಂತೆ ಸ್ತಬ್ಧನಾಗಿ ನಿಂತಿದ್ದ.

ಕೊನೆಗೆ ಅವನು ತಿರುಗಿ ನಮ್ಮೆಡೆಗೆ ಬಂದ. ನಮಗೆಂದ: "ಎಚ್ಚರಾಗಿರಿ, ಏಳಿರಿ, ನನ್ನ ಗಳಿಗೆ ಬಂದಿದೆ. ಜಗತ್ತೇ ಕೈದುಗೊಂಡು ನಮ್ಮ ಮೇಲೆ ಕಾಳೆಗಕ್ಕಾಗಿ ಸಜ್ಜಾಗಿದೆ."

ಬಳಿಕ ಮತ್ತವನು ನುಡಿದ: "ಒಂದು ಕ್ಷಣ ಮೊದಲು ನಾನು ಆ ಮಹಾಪಿತನ ದನಿಯನ್ನು ಕೇಳಿದೆ. ನಾನು ನಿಮ್ಮನ್ನು ಇನ್ನೊಮ್ಮೆ ಕಾಣದಿದ್ದರೂ, ವಿಜಯಶಾಲಿಯು ಗೆಲ್ಲುವವರೆಗೂ ಶಾಂತನಾಗಲಾರನೆಂಬದನ್ನು ನೆನಪಿನಲ್ಲಿಡಿ."

ನಾವೆಲ್ಲರೂ ಎದ್ದು ಅವನ ಬಳಿ ಬಂದಾಗ ಅವನ ಮುಖವು ಮರು ಭೂಮಿಯ ಮೇಲಿನ ನಕ್ಷತ್ರ ಜಡಿತ ನಭದಂತಿತ್ತು.

ಬಳಿಕವನು ನಮ್ಮಲ್ಲಿಯ ಪ್ರತಿಯೊಬ್ಬರ ಗಲ್ಲಕ್ಕೂ ಮುತ್ತಿಟ್ಟ. ಅವನ ತುಟಿ ನನ್ನ ಗಲ್ಲಕ್ಕೆ ಸೋಂಕಿದಾಗ ಅವನ ತುಟಿಗಳು ಜ್ವರ ಬಂದ ಕೂಸಿನ ಕೈಯಂತೆ ಬಿಸಿಯಾಗಿದ್ದುವು.

ಒಮ್ಮೆಲೆ, ದೂರದಲ್ಲಿ ಏನೋ ಬಹಳ ಜನರ ಗದ್ದಲವು ನಡೆದಂತೆ ನಮಗೆ ಕೇಳಿಸಿತು. ಸನಿಹಕ್ಕೆ ಬಂದಾಗ, ಅದು ಕೈಯಲ್ಲಿ ಕಂದೀಲು ಏಣಿ ಗಳನ್ನು ಹಿಡಿದ ಜನದ ಗುಂಪೆಂಬುದು ನಮಗೆ ಗೊತ್ತಾಯಿತು. ಅವರು ಅವಸರವಸರವಾಗಿ ಬರುತ್ತಿದ್ದರು.

ಅವರು ತೋಟದ ಬೇಲಿಯ ಬಳಿಗೆ ಬಂದಾಗ, ಜೀಸಸ್ ನಮ್ಮನ್ನು ಳಿದು ಅವರನ್ನು ನೋಡಲೆಂದು ಅವರೆಡೆಗೆ ಮುನ್ನಡೆದ. ಆ ಜನಜಂಗುಳಿ ಯನ್ನು ಇಸ್ಕಾರಿಯೊಟದ ಜುಡಾಸನೇ ಮುನ್ನಡೆಸುತ್ತಿದ್ದ.

ಆ ಜನಜಂಗುಳಿಯಲ್ಲಿ ಖಡ್ಗ ಭಾಲೆಗಳೊಡನೆ ರೋಮನ್ ಸೈನಿಕರೂ ದೊಣ್ಣೆ ಗುದ್ದಲಿಗಳೊಡನೆ ಜೆರೂಸಲೇಮದ ಜನರೂ ಇದ್ದರು.

ಜುಡಾಸನು ಜೀಸಸ್‌ನೆಡೆಗೆ ಬಂದು ಅವನನ್ನು ಮುತ್ತಿಟ್ಟ. ಬಳಿಕವನು ಆ ಸಾಯುಧ ಜನಜಂಗುಳಿಯ ಕಡೆ ತಿರುಗಿ ಹೇಳಿದ: "ಇವನೇ ಆ ಮನುಷ್ಯ."

ಜೀಸಸ್ ಜುಡಾಸನಿಗೆಂದ : " ನೀನೇಕೋ ನನಗಾಗಿ ತಡಮಾಡಿದೆ. ಇದು ನಿನ್ನೆಯೇ ಆಗಬೇಕಿತ್ತು."

ಬಳಿಕವನು ಆ ಸಾಯುಧ ಜನರ ಕಡೆ ತಿರುಗಿ ನುಡಿದ : " ನನ್ನನ್ನು ಹಿಡಿದುಕೊಳ್ಳಿರಿ. ಆದರೆ ನಿಮ್ಮ ಪಂಜರವು ಈ ಪಕ್ಕಗಳನ್ನು ಒಳಕೊಳ್ಳು ವಷ್ಟು ದೊಡ್ಡದಿರುವಂತೆ ನೋಡಿಕೊಳ್ಳಿ."

ಬಳಿಕವರು ಅವನ ಮೇಲೆ ಬಿದ್ದು ಅವನನ್ನು ಹಿಡಿದರು ಹಾಗೂ ಅವರೆಲ್ಲರೂ ಕೂಗಾಡುತ್ತಲೂ ಚೀರುತ್ತಲೂ ಇದ್ದರು

ಆದರೆ ನಾವು ಭಯಗೊಂಡು ಓಡಿಹೋಗಿ ಪಾರಾಗಬಯಸಿದೆವು. ನಾನು ಒಂಟಿಯಾಗಿಯೇ ಓಲಿವ್ಹ್ ತೋಟದೊಳಗಿಂದ ಓಡಿಹೋದೆ. ಆಗ ನನಗೆ ಎಚ್ಚರವೇ ಉಳಿಯಲಿಲ್ಲ. ಹಾಗೂ ಭಯವೊಂದನ್ನುಳಿದು ಇನ್ನಾ ವುದೂ ದನಿ ಕೇಳಿಸಲಿಲ್ಲ.

ಎರಡು ಮೂರು ತಾಸುಳಿದಿದ್ದ ಆ ರಾತ್ರಿಯಲ್ಲಿ, ನಾನು ಓಡುತ್ತ, ಅಡಗುತ್ತ ಅರುಣೋದಯದ ಹೊತ್ತಿಗೆ ಜೆರಿಚೋದ ಬಳಿಯ ಒಂದು ಹಳ್ಳಿಗೆ ಬಂದಿದ್ದೆ.

ನಾನೇಕೆ ಅವನನ್ನು ಬಿಟ್ಟು ಬಂದೆ? ನನಗೇ ತಿಳಿಯದು. ನಾನವನನ್ನು ಹೀಗೆ ಬಿಟ್ಟುದು ನನಗೆ ಬಹಳ ದುಃಖವೆನಿಸಿತು. ನಾನು ಪುಕ್ಕಲು ಹೇಡಿಯಾಗಿದ್ದೆ, ಅವನ ವೈರಿಗಳನ್ನೆದುರಿಸುವುದನ್ನುಳಿದು ಓಡಿಹೋದೆ.

ನನ್ನ ಮನಸಿಗೇ ಜಾಡ್ಯ–ನಾಚಿಕೆಯೆನಿಸಿತು. ನಾನು ಜೆರೂಸಲೇಮಕ್ಕೆ ಮರಳಿದೆ. ಆದರೆ ಆಗಲೇ ಅವನು ಕೈದಿಯಾಗಿದ್ದ. ಯಾವದೇ ಮಿತ್ರನೂ ಅನನೊಡನೆ ಮಾತನಾಡುವಂತಿದ್ದಿಲ್ಲ.

ಅವನನ್ನು ಶಿಲುಬೆಗೇರಿಸಿದರು. ಅವನ ರಕ್ತ ನೆಲವನ್ನೇ ಹೊಸದನ್ನಾಗಿಸಿತು.

ನಾನಿನ್ನೂ ಜೀವದಿಂದಿದ್ದೇನೆ; ಅವನ ಮಧುರ ಜೀವನದ ಜೇನಹುಟ್ಟಿನಲ್ಲಿಯೇ ನಾನು ಬದುಕುತ್ತಿದ್ದೇನೆ.

## ೭೫. ಸಿರೀನದ ಸಾಯ್‌ಮನ್

ನಾನು ನನ್ನ ಹೊಲದೆಡೆಗೆ ಹೋಗುತ್ತಿದ್ದಾಗ ಹಾದಿಯಲ್ಲಿ ಜೀಸಸ್‌ನು ಶಿಲುಬೆ ಹೊತ್ತುಕೊಂಡು ಹೋಗುತ್ತಿರುವುದನ್ನೂ ಜನಜಂಗುಳಿ ಅವನನ್ನು ಹಿಂಬಾಲಿಸಿ ಹೋಗುತ್ತಿರುವುದನ್ನೂ ನೋಡಿದೆ.

ಬಳಿಕ ನಾನೂ ಕೂಡ ಅವನನ್ನು ಹಿಂಬಾಲಿಸಿದೆ.

ಆ ಶಿಲುಬೆಯ ಭಾರಕ್ಕೆ ಅವನು ಆಗಾಗ ತಡೆಯುತ್ತಿದ್ದ; ಏಕೆಂದರೆ ಅವನ ಮೈ ದಣಿದುಹೋಗಿತ್ತು.

ಬಳಿಕ ಒಬ್ಬ ರೋಮನ್ ಸೈನಿಕ ನನ್ನೆಡೆಗೆ ಬಂದು ನುಡಿದ: "ಬಾ, ನೀನು ಸಾಕಷ್ಟು ಗಟ್ಟಿಗನೂ ಧಷ್ಟಪುಷ್ಟನೂ ಆಗಿ ಕಾಣುತ್ತೀ. ಈ ಮನುಷ್ಯನ ಶಿಲುಬೆಯನ್ನು ನೀನು ತೆಗೆದುಕೋ."

ಅವನು ಹೀಗೆಂದೊಡನೆ ನನ್ನ ಹೃದಯ ತುಂಬಿ ಬಂತು; ನಾನು ಕೃತಜ್ಞನಾದೆ.

ನಾನವನ ಶಿಲುಬೆಯನ್ನು ತೆಗೆದುಕೊಂಡೆ

ಅದು ಬಹಳ ಭಾರವಾಗಿತ್ತು. ಏಕೆಂದರೆ ಚಳಿಮಳೆಗಳಿಂದ ತೊಯ್ದ ಪೊಪ್ಲಾರ ಕಟ್ಟಿಗೆಯಿಂದ ಅದನ್ನು ಮಾಡಲಾಗಿತ್ತು.

ಜೀಸಸ್ ನನ್ನೆಡೆಗೆ ನೋಡಿದ. ಅವನ ಹಣೆಯಿಂದ ಗಡ್ಡದವರೆಗೂ ಬೆವರು ಸುರಿಯುತ್ತಿತ್ತು.

ಅವನು ಮತ್ತೊ ಒಮ್ಮೆ ನನ್ನೆಡೆಗೆ ನೋಡಿ ನುಡಿದ: "ನೀನೂ ಕೂಡ ಈ ಬಟ್ಟಲನ್ನೆತ್ತಿ ಕುಡಿಯುವಿಯಾ? ಕೊನೆಗಾಲದವರೆಗೂ ನನ್ನೊಡನೆ ನೀನೂ ಈ ಶಿಲುಬೆಯಂಚನ್ನು ಸೀಪುವಿಯಾ?"

ಹೀಗೆನ್ನುತ್ತ ಅವನು ನನ್ನ ತೆರವಿದ್ದ ಭುಜದ ಮೇಲೆ ತನ್ನ ಕೈಯಿಟ್ಟ. ನಾವಿಬ್ಬರೂ ಕೂಡಿಯೇ ಆ ಬುರುಡೆ ಬೆಟ್ಟಕ್ಕೆ ನಡೆದೆವು.

ಆದರೀಗ ನನಗೆ ಆ ಶಿಲುಬೆ ಭಾರವೆನಿಸಲಿಲ್ಲ: ಅವನ ಕೈ ಸೋಂಕು ಮಾತ್ರ ಭಾಸವಾಗುತ್ತಿತ್ತು. ಅದು ನನ್ನ ಹೆಗಲ ಮೇಲೆ ಹಕ್ಕಿಯ ರೆಕ್ಕೆಯಂತಿತ್ತು.

ಬಳಿಕ ನಾವು ಗುಡ್ಡದ ತುದಿಯನ್ನು ತಲುಪಿದೆವು; ಅಲ್ಲಿಯೇ ಅವನನ್ನವರು ಶಿಲುಬೆಗೇರಿಸತಕ್ಕವರಿದ್ದರು.

ಆಗ ನನಗೆ ಆ ಕಟ್ಟಿಗೆಯ ಭಾರದ ಭಾವನೆ ಬಂತು.

ಅವನ ಕೈ-ಕಾಲುಗಳಲ್ಲಿ ಅವರು ಮೊಳೆ ಬಡಿಯುತ್ತಿರುವಾಗ ಅವನು ಒಂದು ಮಾತನ್ನೂ ಆಡಲಿಲ್ಲ, ಅಥವಾ ಯಾವದೇ ಸದ್ದನ್ನೂ ಮಾಡಲಿಲ್ಲ.

ಅವನ ಅವಯವಗಳು ಆ ಸುತ್ತಿಗೆಯ ಹೊಡೆತಕ್ಕೂ ಅಲುಗಾಡಲೇ ಇಲ್ಲ.

ಅವನ ಕೈಕಾಲುಗಳು ಸತ್ತಂತೆಯೇ ಇದ್ದವು; ರಕ್ತಸ್ನಾನದ ನಂತರ ಬದುಕಬೇಕೆನ್ನುವಂತಿದ್ದವು. ರಾಜಪುತ್ರನು ರಾಜದಂಡವನ್ನು ಬಯಸುವಂತೆ ಅವನಾ ಮೊಳೆಗಳನ್ನು ಬಯಸಿದ್ದನೋ ಏನೋ ಎಂಬಂತಿತ್ತು; ಹಾಗೂ ಎತ್ತರಕ್ಕೇರಲು ಅವನು ಹಾತೊರೆಯುವಂತೂ ಇತ್ತು.

ಅವನಿಗಾಗಿ ಕನಿಕರಬಡಬೇಕೆಂದು ನನ್ನ ಹೃದಯಕ್ಕೆ ತೋಚಲೇ ಇಲ್ಲ. ಏಕೆಂದರದು ಅಷ್ಟು ಅಚ್ಚರಿಯಿಂದ ತುಂಬಿಬಂದಿತ್ತು.

ಯಾರ ಶಿಲುಬೆಯನ್ನು ನಾನು ಹೊತ್ತೊಯ್ದೆನೋ ಅವನೇ ಈಗ ನನ್ನ ಶಿಲುಬೆಯಾಗಿಪ್ಪಾನೆ.

" ಈ ಮನುಷ್ಯನ ಶಿಲುಬೆಯನ್ನು ಹೊತ್ತುಕೊಂಡು ನಡೆ" ಎಂದವರು ಮತ್ತೆ ನನಗೆ ಹೇಳಿದರೆ, ಸಾಯುವವರೆಗೂ ನಾನದನ್ನು ಹೊತ್ತುಕೊಂಡು ಹೋಗಬಲ್ಲೆ.

ಆದರೆ ಆಗ ನಾನು ಅವನನ್ನು ನನ್ನ ಹೆಗಲಮೇಲೆ ತನ್ನ ಕೈಯಿಡಲು ಬೇಡಿಕೊಳ್ಳುವೆ.

ಬಹಳ ಕಾಲದ ಹಿಂದೆ ಇದು ಸಂಭವಿಸಿತು. ಆದರೂ ನಾನು ರಂಟೆಯೊಡನೆ ಹೊಲಕ್ಕೆ ಹೋಗುತ್ತಿರುವಾಗ ಹಾಗೂ ಮಲಗುವ ಮೊದಲು ತೂಕಡಿಕೆ ಬಂದಾಗ ಆ ಪ್ರೇಮಮಯ ಮಾನವನನ್ನು ಕುರಿತು ಸದಾ ಯೋಚಿಸುತ್ತಲೇ ಇರುವೆ.

ಅವನ ಗರಿಯಂಥ ಕೈ ನನ್ನ ಭುಜದಮೇಲಿದ್ದಂತೆಯೇ ಭಾವಿಸುತ್ತಿರುವೆ.

## ೭೬. ಜುಡಾಸನ ತಾಯಿ ಸಿಬೊರಿಯಾ

ನನ್ನ ಮಗ ಒಳ್ಳೆಯವ, ನ್ಯಾಯವಂತ. ಅವನು ನನ್ನ ಬಗ್ಗೆ ಕರುಣೆಯೂ ಕೋಮಲನೂ ಆಗಿದ್ದ. ಅವನು ತನ್ನ ನಾಡವರನ್ನೂ, ಬಳಗದವರನ್ನೂ ಪ್ರೀತಿಸುತ್ತಿದ್ದ. ನೂಲದೆ ನೆಯ್ಯದೆ ಚಾಂಬಳೀ ಉಡುಪು ಧರಿಸಿ ಮೆರೆಯುತ್ತಿದ್ದ. ಹಾಗೂ ಉತ್ತದೆ ಬಿತ್ತದೆ ಬೆಳೆಯ ರಾಶಿಗೂಡಿಸುತ್ತಿದ್ದ. ನಮ್ಮ ವೈರಿಗಳಾದ ರೋಮನ್ ಸೈನಿಕರನ್ನು ಅವನು ದ್ವೇಷಿಸುತ್ತಿದ್ದ.

ನಮ್ಮ ದ್ರಾಕ್ಷಾತೋಟದ ಬಳಿ ಹಾದುಹೋಗುತ್ತಿದ್ದ ರೋಮನ್ ದಳದ ಬಾಣಕ್ಕೆ ಗುರಿಯಾದಾಗ ನನ್ನ ಮಗನು ಕೇವಲ ಹದಿನೇಳು ವರ್ಷದವನಿದ್ದ.

ಆ ವಯಸ್ಸಿನಲ್ಲಿ ಕೂಡ, ಅವನು ಬೇರೆ ಯುವಕರಿಗೆ ಇಸ್ರಾಯಿಲದ ಘನತೆಯನ್ನು ಕುರಿತು ಹೇಳುತ್ತಿದ್ದ; ಇನ್ನೂ ಏನೇನೋ ವಿಲಕ್ಷಣ ನುಡಿಗಳನ್ನಾಡುತ್ತಿದ್ದ; ನನಗವು ತಿಳಿಯುತ್ತಿದ್ದಿಲ್ಲ.

ಅವನು ನನ್ನ ಮಗ, ನನ್ನ ಏಕಮಾತ್ರ ಪುತ್ರನಾಗಿದ್ದ.

ಈಗ ಒಣಗಿದ ಎದೆಹಾಲ ಬದುಕನ್ನವನು ಉಂಟಿದ್ದ. ಈಗ ನಡ ನಡುಗುವ ದಾರದಂತಿದ್ದ ಬೆರಳುಗಳನ್ನೇ ಆಗವನು ಹಿಡಿದುಕೊಂಡು ಈ ತೋಟದಲ್ಲಿ ತನ್ನ ಮೊದಲ ಹೆಜ್ಜೆಗಳನ್ನಿಟ್ಟಿದ್ದ.

ಲೆಬನಾನದ ದ್ರಾಕ್ಷೆಯಂತೆ ಆಗ ಕೋಮಲ ಮಧುರವಾಗಿದ್ದ ಇದೇ ಈ ಕೈಗಳಿಂದಲೇ, ಅವನ ಪ್ರಪ್ರಥಮ ಪಾದರಕ್ಷೆಗಳನ್ನು ನಾನು, ನನ್ನ ತಾಯಿ ನನಗಿತ್ತಿದ್ದ ಲಿನನ್ ಕರವಸ್ತ್ರದಲ್ಲಿ ತೆಗೆದಿಟ್ಟಿದ್ದೆ. ಆ ಕಿಡಿಕಿಯ ಬದಿ ಯಿರುವ ಆ ಗೂಡಿನಲ್ಲಿ ಇನ್ನೂ ಅವುಗಳನ್ನಿಟ್ಟಿದ್ದೇನೆ.

ಅವನು ನನ್ನ ಚೊಚ್ಚಿಲು. ಅವನು ಮೊದಲುಹೆಜ್ಜೆಯಿಟ್ಟಾಗಲೇ ನಾನೂ ನನ್ನ ಮೊದಲಹೆಜ್ಜೆಯಿಟ್ಟಿದ್ದೆ; ಏಕೆಂದರೆ ಮಹಿಳೆಯರು ಮಕ್ಕಳ ನ್ನುಳಿದು ಮುಂದೆ ನಡೆಯಲಾರರು.

ಈಗ ಅವನು ತನ್ನ ಕೈಯಿಂದಲೇ ತನ್ನನ್ನು ಕೊಂದುಕೊಂಡನೆಂದು ಅವರು ಹೇಳುತ್ತಾರೆ. ತನ್ನ ಮಿತ್ರ ನಾಝರೆಥದ ಜೀಸಸ್‌ನಿಗೆ ದ್ರೋಹ ಬಗೆದದ್ದಕ್ಕಾಗಿ ಪಶ್ಚಾತ್ತಾಪಪಟ್ಟು ಅವನು ಗುಡ್ಡದ ಕೋಡುಗಲ್ಲಮೇಲಿಂದ ಕೊಳ್ಳಕ್ಕೆ ಹಾರಿಕೊಂಡನೆನ್ನುತ್ತಾರೆ.

ನನ್ನ ಮಗ ಸತ್ತನೆಂಬದು ನನಗೆ ಗೊತ್ತು. ಆದರೆ ಅವನಾರಿಗೂ ದ್ರೋಹ ಬಗೆದಿಲ್ಲವೆಂಬದೂ ನನಗೆ ಗೊತ್ತು. ಏಕೆಂದರೆ ಅವನು ತನ್ನ ಬಾಂಧವರನ್ನು ಪ್ರೀತಿಸುತ್ತಿದ್ದ, ಹಾಗೂ ರೋಮನ್ನರನ್ನುಳಿದು ಯಾರನ್ನೂ ದ್ವೇಷಿಸುತ್ತಿದ್ದಿಲ್ಲ.

ನನ್ನ ಮಗ ಇಸ್ರಾಯಿಲದ ಘನತೆಗಾಗಿ ಹವಣಿಸಿದ್ದ. ಮತ್ತು ಅದು ಕೇವಲ ಅವನ ಮಾತು-ಕೃತಿಗಳಲ್ಲಷ್ಟೇ ಇದ್ದಿದ್ದಿಲ್ಲ.

ರಾಜಮಾರ್ಗದಲ್ಲಿ ಜೀಸಸ್‌ನನ್ನು ಕಂಡಾಗ, ಅವನು ನನ್ನನ್ನು ಬಿಟ್ಟು ಅವನನ್ನು ಹಿಂಬಾಲಿಸಿದ. ಯಾವದೇ ಮನುಷ್ಯನನ್ನು ಅವನು ಹಿಂಬಾಲಿ ಸುವುದು ತಪ್ಪೆಂದು ನನ್ನ ಮನಸಿಗೆ ಗೊತ್ತಿತ್ತು.

ಅವನು ನನ್ನ ನಿರೋಪ ತೆಗೆದುಕೊಳ್ಳಬಂದಾಗ, ಅವನು ತಪ್ಪುದಾರಿ ಹಿಡಿದಿದ್ದಾನೆಂಬದನ್ನು ನಾನವನಿಗೆ ಹೇಳಿದೆ. ಆದರವನು ಕಿವಿಗೊಡಲಿಲ್ಲ.

ನಮ್ಮ ಮಕ್ಕಳು ನಮ್ಮನ್ನು ಲೆಕ್ಕಿಸುವದಿಲ್ಲ. ಇಂದಿನ ಭರತಿ ತೆರೆ

ನಿನ್ನಿನ ಭರತಿ ತೆರೆಯೊಡನೆ ವಿಚಾರವಿನಿಮಯ ಗೈಯದಂತೆ ಅವರೂ ನಮ್ಮ ವಿಚಾರ ಕೇಳುವದಿಲ್ಲ.

ನನ್ನ ಮಗನ ಬಗ್ಗೆ ಇನ್ನೇನನ್ನೂ ನೀವು ದಯವಿಟ್ಟು ಕೇಳಬೇಡಿ.

ನಾನವನನ್ನು ಪ್ರೀತಿಸಿದ್ದೆ, ಹಾಗೂ ಎಂದೆಂದಿಗೂ ಅವನನ್ನು ಪ್ರೀತಿಸುವೆ.

ಪ್ರೇಮವು ಬರೀ ಮೈಯಷ್ಟಕ್ಕೇ ಇದ್ದಿದ್ದರೆ ಕಾದ ಕಬ್ಬಿಣ ಸಳಿಗಳಿಂದ ದನ್ನು ಸುಟ್ಟು ನಾನು ಶಾಂತಳಾಗುವೆ. ಆದರದು ಮುಟ್ಟಲಾರದ ಆತ್ಮ ದಾಳದಲ್ಲಿದೆ.

ನಾನಿನ್ನು ಹೆಚ್ಚು ನುಡಿಯಲಾರೆ. ಜುಡಾಸನ ತಾಯಿಗಿಂತಲೂ ಹೆಚ್ಚು ಘನವಂತೆಯಾದ ಇನ್ನೊಬ್ಬ ಮಹಿಳೆಯತ್ತ ನೀವು ಹೋಗಿ ಕೇಳಿರಿ.

ಜೀಸಸ್‌ನ ತಾಯಿಯೆಡೆಗೆ ಹೋಗಿರಿ. ಅವಳ ಹೃದಯಕ್ಕೂ ಖಡ್ಗಾ ಘಾತವಾಗಿದೆ. ಆಕೆ ನನ್ನ ಬಗ್ಗೆ ನಿಮಗೆ ಹೇಳಬಹುದು. ಆಗ ನಿಮಗೆ ಅದು ಅರ್ಥವಾಗುವದು.

## ೭೭. ಬಿಬ್ಲಾಸದ ಒಬ್ಬ ಮಹಿಳೆ.

ಅಸ್ಟಾರ್ಟೆಯ ಪುತ್ರಿಯರೇ, ಹಾಗೂ ತಮೌಜವನ್ನು ಪ್ರೀತಿಸುವ
ನೀವೆಲ್ಲರೇ, ನನ್ನೊಡನೆ ರೋದಿಸಿರಿ.
ನಿಮ್ಮ ಹೃದಯ ಕರಗಲಿ, ಉಕ್ಕೇರಲಿ ಹಾಗೂ ರಕ್ತಕಂಬನಿಗಳನ್ನು
ಸುರಿಸಲಿ.
ಏಕೆಂದರೆ ಚಿನ್ನ-ದಂತಗಳಿಂದ ನಿರ್ಮಿಸಲ್ಪಟ್ಟ ಅವನು ಇನ್ನಿಲ್ಲ.
ಆ ಕಾಳಕಾಡಿನಲ್ಲಿ ಕಾಡಮಿಕ ಅವನ ಮೇಲೇರಿ ಬಂದು
ತನ್ನ ಕೋರೆಗಳಿಂದವನ ಮೈಯನ್ನಿರಿಯಿತು.
ಈಗವನು ಕಳೆದ ವರ್ಷದ ತರಗೆಲೆಗಳಂತೆ ಒಣಗಿ ಬಿದ್ದಿದ್ದಾನೆ.
ಅವನ ಹೆಜ್ಜೆಯ ಸಪ್ಪಳವಿನ್ನು, ವಸಂತ ಪುಷ್ಪದಲ್ಲಡಗಿ ಮಲಗಿದ
ಬೀಜವನ್ನೆಚ್ಚರಿಸಲಾರದು.

ಅವನ ದನಿಯಿನ್ನು ಮುಂಬೆಳಗಿನೊಡನೆ ನನ್ನ ಕಿಟಕಿಯತನ
ಬರಲಾರದು.

ನಾನಿನ್ನೆಂದೆಂದೂ ಏಕಾಕಿಯಾಗಿ ಬಿಡುವೆ.

ಅಸ್ಟಾರ್ಟೆಯ ಪುತ್ರಿಯರೇ, ಹಾಗೂ ತಮೌಜವನ್ನು ಪ್ರೀತಿಸುವ
ನೀವೆಲ್ಲರೇ, ನನ್ನೊಡನೆ ರೋದಿಸಿರಿ.
ಏಕೆನೆ ನನ್ನ ಪ್ರಿಯತಮ ನನ್ನನ್ನು ದಾಟಿ ಹೋದ.
ಅವನು ನದಿಯುಲಿದಂತೆ ಮಾತನಾಡುತ್ತಿದ್ದ.
ಅವನ ದನಿಯೂ ಕಾಲವೂ ಅವಳಿಯಾಗಿದ್ದವು.
ಅವನ ಮುಖವು ನೆತ್ತರ ನೋವನ್ನೂ ಸವಿಗೊಳಿಸುತ್ತಿತ್ತು.
ಅವನ ತುಟಿಗಳಲ್ಲಿ ವಿಷವೂ ಜೇನಾಗಿಬಿಡುತ್ತಿತ್ತು.

ಅಸ್ಟಾರ್ಟೆಯ ಪುತ್ರಿಯರೇ, ಹಾಗೂ ತಮೌಜವನ್ನು ಪ್ರೀತಿಸುವ
ನೀವೆಲ್ಲರೇ, ನನ್ನೊಡನೆ ರೋದಿಸಿರಿ.
ಅವನ ಚಿಟ್ಟದ ಸುತ್ತಲೂ ಚುಕ್ಕಿಗಳತ್ತಂತೆ,
ಹಾಗೂ ಸೋಮನ ಪಕಳೆಗಳೇ ಅವನ ಗಾಯಗೊಂಡ ಮೈ ಸುತ್ತು
ಬೀಳುವಂತೆ ನನ್ನೊಡನೆ ರೋದಿಸಿರಿ.
ನನ್ನ ಹಾಸಿಗೆಯ ರೇಶಿಮೆಯ ಹೊದಿಕೆಯನ್ನು ನಿಮ್ಮ ಕಂಬನಿ
ಗಳಿಂದ ತೋಯಿಸಿರಿ.
ಇಲ್ಲಿಯೇ ನನ್ನ ಪ್ರಿಯತಮ ಒಮ್ಮೆ ನನ್ನ ಕನಸಿನಲ್ಲಿ ಕಂಡಿದ್ದ,
ಹಾಗೂ ನಾನು ಎಚ್ಚರಾದೊಡನೆ ಹೊರಟುಹೋಗಿದ್ದ.

ಅಸ್ಟಾರ್ಟೆಯ ಪುತ್ರಿಯರೇ, ಹಾಗೂ ತಮೌಜವನ್ನು ಪ್ರೀತಿಸುವ
ನೀವೆಲ್ಲರೇ, ನಾನು ನಿಮ್ಮನ್ನಾರೋಪಿಸುವೆ
ನಿಮ್ಮ ಹೃದಯದೆರೆದು ಅತ್ತು ನನ್ನನ್ನು ಸಾಂತ್ವನಗೊಳಿಸಿರಿ.
ಏಕೆಂದರೆ ನಾಝರೆಥದ ಜೀಸಸ್ ಮರಣವನ್ನೈದಿದ್ದಾನೆ.

# ೭೮. ಮೇರಿ ಮ್ಯಾಗ್ಡಾಲೀನ: ಮೂವತ್ತು ವರ್ಷಾನಂತರ

ಇನ್ನೂ ಒಮ್ಮೆ ನಾನು ಸಾರಿಹೇಳುವೆ; ಜೀಸಸ್ ಮರಣದಿಂದಲೇ ಮರಣವನ್ನು ಗೆದ್ದ. ಗೋರಿಯಿಂದ ಆತ್ಮನಾಗಿ ಶಕ್ತಿಯಾಗಿ ಎದ್ದ. ನಮ್ಮ ಏಕಾಂತದಲ್ಲಿ ಅವನು ನಡೆದಾಡಿದ ; ನಮ್ಮ ಆಕಾಂಕ್ಷೆಯ ಉಪವನಗಳನ್ನು ಸಂದರ್ಶಿಸಿದ.

ಆ ಕಲ್ಲ ಹಿಂದೆ ಅಂಟಿದ್ದ ಬಂಡೆಗಲ್ಲಿನಲ್ಲಿ ಅವನಿಲ್ಲ.

ಅವನನ್ನು ಪ್ರೀತಿಸುವ ನಾವೆಲ್ಲರೂ ಅವನೇ ಕಾಣಲು ಕಲಿಸಿದ ನಮ್ಮ ಕಂಗಳಲ್ಲಿ ಅವನನ್ನು ಇಟ್ಟುಕೊಂಡಿದ್ದೇವೆ; ಹಾಗೂ ಸೋಂಕಲು ಕಲಿಸಿದ ಈ ಕೈಗಳಿಂದಲೇ ನಾವವನನ್ನು ಸೋಂಕಿದ್ದೇವೆ.

ಅವನಲ್ಲಿ ನಂಬಿಗೆಯಿಲ್ಲದ ನಿಮ್ಮದೂ ನನಗೆ ಗೊತ್ತು. ನಾನೂ ನಿಮ್ಮಂತಿದ್ದೆ. ನೀವು ಬಹಳ ಜನರಿದ್ದೀರಿ. ಆದರೂ ನಿಮ್ಮ ಸಂಖ್ಯೆ ಅಳಿಸಿ ಹೋಗುವದು.

ನಿಮ್ಮ ವೀಣೆ ನಿಮ್ಮ ಕೊಳಲುಗಳಲ್ಲಡಗಿದ ಗಾನವನ್ನು ಕಂಡು ಹಿಡಿಯಲೆಂದು ನೀವವುಗಳನ್ನು ಮುರಿಯಲೇಬೇಕೆ ?

ಅಥವಾ ಹಣ್ಣು ಬಿಡುವವೆಂದು ನಂಬುವ ಮೊದಲೇ ಗಿಡವನ್ನು ಕೆಡವಬೇಕೆ ?

ಉತ್ತರದೇಶದ ಯಾವನೋ ಜೀಸಸ್‌ನನ್ನು 'ದೇವಪುತ್ರ'ನೆಂದು ಕರೆದನೆಂದು ನೀವವನ್ನು ದ್ವೇಷಿಸಿದಿರಿ. ಅಂತೆಯೇ ನೆರೆಯವನ ಬಂಧು ವೆನಿಸುವದಕ್ಕಿಂತಲೂ ನಾವು ಎಷ್ಟೋ ದೊಡ್ಡವರೆಂದು ತಿಳಿದುಕೊಳ್ಳುವ ನೀವೂ ಒಬ್ಬರನ್ನೊಬ್ಬರು ದ್ವೇಷಿಸುವಿರಿ.

ಯಾವನೋ ಒಬ್ಬನು, ಜೀಸಸ್‌ನು ಮಾನವ ಬೀಜವಿಲ್ಲದೆ ಕನ್ಯೆಯಲ್ಲಿ ಜನಿಸಿದನೆಂದು ಹೇಳಿದಕ್ಕಾಗಿ ನೀವು ಜೀಸಸ್‌ನನ್ನು ದ್ವೇಷಿಸಿದಿರಿ.

ಆದರೆ ಕನ್ಯೆತನದಲ್ಲಿಯೇ ಗೋರಿಯನ್ನೈದುವ ತಾಯಂದಿರ, ಹಾಗೂ ತಮ್ಮ ದಾಹದಿಂದಲೇ ಗಂಟಲುಗಟ್ಟಿ ಗೋರಿಗಿಳಿಯುವ ಮನುಜರ ಬಗ್ಗೆ ನಿಮಗೆ ಗೊತ್ತಿಲ್ಲ.

ಬುವಿಯನ್ನು ರವಿಗೆ ಕೊಟ್ಟು ಮದುವೆಯಾದುದು ನಿಮಗೆ ಗೊತ್ತಿಲ್ಲ.

ಮತ್ತು ಗುಡ್ಡಕ್ಕೋ ಮರುಭೂಮಿಗೋ ನಮ್ಮನ್ನು ಕಳಿಸುವದು ಭೂಮಿಯೇ ಎಂಬುದೂ ನಿಮಗೆ ತಿಳಿದಿಲ್ಲ.

ಅವನನ್ನು ಪ್ರೀತಿಸುವವರ ಹಾಗೂ ಅವನನ್ನು ದ್ವೇಷಿಸುವವರ ಮಧ್ಯೆ, ಮತ್ತು ಅವನನ್ನು ನಂಬಿದವರ ಹಾಗೂ ಅವನನ್ನು ನಂಬದವರ ಮಧ್ಯೆ ಒಂದು ಕಂದರವೇ ಬಾಯಿದೆರೆದಿದೆ.

ಆದರೆ ಕಾಲವು ಆ ಕಂದರಕ್ಕೆ ಸಂಕಗಟ್ಟಿದಾಗ, ನಮ್ಮೊಳಗೇ ಜೀವಿಸಿದ್ದ ಅವನು ಮರಣರಹಿತನೆಂಬುದೂ ನಾವೆಲ್ಲರೂ ದೇವರ ಮಗುಗಳಿದ್ದಂತೆ ಅವನೂ 'ದೇವಪುತ್ರ' ನಿದ್ದನೆಂಬುದೂ ಮತ್ತು ನಾವೆಲ್ಲರೂ ಈ ಪತಿರಹಿತ ಭೂಮಿಯಿಂದ ಜನಿಸಿದಂತೆ ಅವನೂ ಕನ್ಯೆಯಿಂದ ಜನಿಸಿದನೆಂಬುದೂ ನಿಮಗೆ ತಿಳಿದುಬಂದೀತು.

ತನ್ನೆದೆಯಿಂದ ಹಾಲು ಹೀರುವ ಬೇರುಗಳನ್ನು ಅಥವಾ ಎತ್ತರಕ್ಕೆ ಹಾರಿ ತನ್ನಾಕಾಶದಲ್ಲಿರುದ ಹನಿಗುಡಿದು ತೃಪ್ತಿಗೊಳ್ಳುವಂತೆ ರೆಕ್ಕೆಗಳನ್ನು ಭೂಮಿತಾಯಿಯು ಅಶ್ರದ್ಧೆಯವರಿಗೆ ಕೊಡದಿರುವದು ನಡೆಯುತ್ತಿರುವ ಒಂದು ಮೋಜು.

ಆದರೆ ನನಗೇನು ಗೊತ್ತಿದೆಯೆಂಬುದು ನನಗೆ ಗೊತ್ತಿದೆ. ಇಷ್ಟೇ ಸಾಕು.

## ೭೯. ಲೆಬನಾನದ ಒಬ್ಬ ಮಾನವ: ಹತ್ತೊಂಬತ್ತು ಶತಮಾನಗಳ ನಂತರ

ಗುರುವೇ ಗುರು ಗೀತಗಾರಾ,
ಆಡದ ನುಡಿಗಳ ಒಡೆಯಾ,
ಏಳು ಸಲ ನಾ ಜನಿಸಿಬಂದೆ, ಮತ್ತೇಳುಸಲ ಮರಣವನ್ನೈದಿದೆ
ನಿನ್ನ ಶೀಘ್ರಸಂದರ್ಶನ ಹಾಗೂ ನಮ್ಮ ಸಂಕ್ಷಿಪ್ತಸ್ವಾಗತದಂದಿನಿಂ:
ನೋಡಿಲ್ಲಿ ಮತ್ತೆ ನಾ ಜನಿಸಿ ಬಂದಿರುವೆ.
ನಿನ್ನ ಕಲ್ಲೋಲಗಳೆಮ್ಮನ್ನೆತ್ತಿ ಹಿಡಿದ ಆ

ಗುಡ್ಡದ ಮೇಲಿನ ಆ ಒಂದು ಹಗಲು ಒಂದು ಇರುಳುಗಳ ನೆನೆಯುತ್ತ.
ಆ ದಿನದಿಂದ ಅನೇಕ ನಾಡುಗಳ, ಅನೇಕ ಸಾಗರಗಳ ದಾಟಿದೆ
ಕುದುರೆಯ ಮೇಲಾಗಲಿ, ಹಡಗಿನ ಮೇಲಾಗಲಿ ನಾನು ಹೋದ
ಹೋದಲ್ಲೆಲ್ಲ
ನಿನ್ನ ನಾಮವೇ, ಪ್ರಾರ್ಥನೆಯೋ, ವಾದವೋ ಆಗಿತ್ತು.
ನಿನ್ನನ್ನು ಕೆಲ ಜನ ಹರಸುತ್ತಿದ್ದರು, ಕೆಲ ಜನ ಶಪಿಸುತ್ತಿದ್ದರು;
ಆ ಶಾಪವೋ, ಸೋತುದರ ಪ್ರತಿರೋಧ
ಆ ಹರಕೆಯೋ, ತನ್ನ ಸಹಚರಿಗಾಗಿ ಬೇಟೆ ಹೊಡೆದುಕೊಂಡು
ಗುಡ್ಡದಿಂದ ತಿರುಗಿ ಬರುತ್ತಿರುವ
ಬೇಟೆಗಾರನ ಸ್ತೋತ್ರ.

* * * *

ಸಾಂತ್ವನಕ್ಕೂ, ಸಹಾಯಕ್ಕೂ ನಿನ್ನ ಗೆಳೆಯರಿನ್ನೂ ನಮ್ಮೊಡನಿದ್ದಾರೆ;
ಹಾಗೂ ನಿನ್ನ ವೈರಿಗಳೂ ಕೂಡ, ಸಾಮರ್ಥ್ಯ-ಭದ್ರತೆಗಳಿಗಾಗಿ
ನಮ್ಮೊಡನಿದ್ದಾರೆ.
ನಿನ್ನ ತಾಯಿಯೂ ನಮ್ಮೊಡನಿದ್ದಾಳೆ.
ಎಲ್ಲ ತಾಯಂದಿರ ಮುಖಮುದ್ರೆಯಲ್ಲಿಯೂ ಆಕೆಯ ಮುಖದ
ಪ್ರಕಾಶವನ್ನು ನಾನು ಕಂಡಿದ್ದೇನೆ.
ಆಕೆಯ ಕೈ ತೊಟ್ಟಿಲನ್ನು ನಯವಾಗಿ ತೂಗುತ್ತಲಿವೆ
ಆಕೆಯ ಕೈ ಮೃತ-ವಸ್ತ್ರಗಳನ್ನು ಮೃದುಲತೆಯಿಂದ ಮಡಿಚುತ್ತಲಿದೆ.
ಬಾಳಿನ ವಿಷವನ್ನೀಂಟಿ ಬಳಿಕದರ ಮಧುವನ್ನೀಂಟಿದ
ಮತ್ತಾ ಮೇರಿ ಮ್ಯಾಗ್ಡಾಲೀನಳೂ ನಮ್ಮ ಮಧ್ಯೆ ಇದ್ದಾಳೆ.
ಕ್ಷುದ್ರಾಭಿಮಾನದ, ಪೀಡಕ ಮಾನವನಾದಾ ಜುಡಾಸ
ಅವನೂ ಈ ಭೂಮಿಯ ಮೇಲೆ ಬದುಕಿದ್ದಾನೆ.
ಅವನ ಹಸಿವೆಗೇನೇನೂ ಸಿಗದಿರಲು ತನ್ನನ್ನೇ ತಾನಿನ್ನೂ ಅವನು
ಬಲಿ ಕೊಡುತ್ತಿದ್ದಾನೆ
ತನ್ನ ವಿನಾಶದಲ್ಲಿಯೇ ತನ್ನ ವಿಶಾಲಾತ್ಮವನ್ನು ಶೋಧಿಸುತ್ತಿದ್ದಾನೆ.

† † † †

ಮತ್ತಾ ಜಾನ್, ಯಾರ ಯೌವನವು ಚೆಲುವನ್ನು ಪ್ರೀತಿಸಿತೊ
ಅವನೂ ಇಲ್ಲಿದ್ದಾನೆ.
ಯಾರೂ ಲಕ್ಷಿಸದಿದ್ದರೂ ಅವನು ಹಾಡುತ್ತಲೇ ಇದ್ದಾನೆ.
ಮತ್ತಾ ಶೀಘ್ರಕೋಪಿ ಸಾಯ್‌ಮನ್ ಪೀಟರನೂ ನಿನಗಾಗಿ ಒಂದು
ದಿನ ಬದುಕಬೇಕೆಂದು ನಿನ್ನನ್ನೇ ಅಲ್ಲಗಳೆದವನು,
ಅವನೂ ಕೂಡ ನಮ್ಮೊ ಒಲೆಯ ಬಳಿ ಕುಳಿತಿದ್ದಾನೆ.
ಇನ್ನೊಂದು ದಿನದರುಣೋದಯದ ಮೊದಲು ಮತ್ತವನು ನಿನ್ನನ್ನಲ್ಲ
ಗಳೆಯಬಹುದು
ಮತ್ತೆ ಕೆಯಾಫಸರೂ, ಆ್ಯನಾಗಳೂ ಇನ್ನೂ ಬದುಕಿದ್ದಾರೆ.
ಅಪರಾಧಿಗಳ ಹಾಗೂ ನಿರಪರಾಧಿಗಳ ನ್ಯಾಯನಿರ್ಣಯ
ಮಾಡುತ್ತಿದ್ದಾರೆ.
ಅವರಿನ್ನೂ ಕುತನಿಯ ಗಾದಿಯ ಮೇಲೆ ಮಲಗುತ್ತಿದ್ದಾರೆ.
ಆದರವರಿಂದ ನಿರ್ಣಯಕ್ಕೊಳಪಟ್ಟವರು ಬೆತ್ತದೇಟನ್ನೇ
ಡೊಣ್ಣೆಯೇಟನ್ನೇ ತಿನ್ನುತ್ತಲಿದ್ದಾರೆ.

* * * *

ವ್ಯಭಿಚಾರಕ್ಕಿಳಿದವಳೆನಿಸಿದ ಆ ಹೆಂಗಸು
ಆಕೆ ಕೂಡ ನಮ್ಮ ಪಟ್ಟಣವೀಥಿಗಳಲ್ಲಿ ನಡೆಯುತ್ತಿದ್ದಾಳೆ.
ಇನ್ನೂ ಬೇಯಿಸದ ರೊಟ್ಟಿಯ ಹಸಿವಿನಿಂದ
ಒಂದು ಬರಿಮನೆಯಲ್ಲಿ ಏಕಾಕಿಯಾಗಿದ್ದಾಳೆ.
ಮತ್ತಾ ಪಾಂಟಿನಸ್ ಪಾಯಲಾಟಸ್ ಕೂಡ ಇಲ್ಲಿಯೇ ಇದ್ದಾನೆ:
ಅವನು ಭಯದಿಂದ ನಿನ್ನೆದುರು ನಿಂತಿದ್ದಾನೆ,
ಇನ್ನೂ ನಿನ್ನನ್ನು ಪ್ರಶ್ನಿಸುತ್ತಿದ್ದಾನೆ,
ಆದರವನು ತನ್ನ ಸ್ಥಾನವನ್ನು ಗಂಡಾಂತರಕ್ಕೀಡುಮಾಡಲೂ
ಪರಕೀಯ ಜನಾಂಗವನ್ನು ತಿರಸ್ಕರಿಸಲೂ ಹೆದರುತ್ತಿದ್ದಾನೆ.
ಅವನಿನ್ನೂ ತನ್ನ ಕೈತೊಳೆದುಕೊಳ್ಳುತ್ತಿದ್ದಾನೆ.
ಈಗೂ ಕೂಡ, ಜೆರೂಸಲೇಮು ಗಂಗಾಳವನ್ನೂ ರೋಮು
ಮೊಗೆಯನ್ನೂ ಹಿಡಿದು ನಿಂತಿವೆ.

ಇವೆರಡರ ಮಧ್ಯೆ ಸಾವಿರ ಸಾವಿರ ಕೈಗಳು ತೊಳೆದು ಜಳಜಳ
ವಾಗಬೇಕಾಗಿದೆ.

ಗುರುವೇ, ಕವಿಗುರುವೇ,
ಆಡಿದ ಹಾಗೂ ಹಾಡಿದ ನುಡಿಗಳ ಪ್ರಭುವೇ,
ನಿನ್ನ ಹೆಸರ ಮನೆಗೊಳಿಸಲು ಅವರು ಗುಡಿಗಳನ್ನು ಕಟ್ಟಿದ್ದಾರೆ,
ಹಾಗೂ ಪ್ರತಿ ಶಿಖರದ ಮೇಲೂ ನಿನ್ನ ಶಿಲುಬೆ ನಿಲ್ಲಿಸಿದ್ದಾರೆ,
ಆದರದು ಬೀದಿಗಿಳಿದ ಅವರ ಹೆಜ್ಜೆಗಳನ್ನು ನಡೆಸುವ ಚಿಹ್ನೆಯಿಂದಲ್ಲದೆ
ನಿನ್ನ ಆನಂದಕ್ಕಾಗಿ ಅಲ್ಲ.
ನಿನ್ನ ಆನಂದವು ಅವರ ದಿಟ್ಟಿಗೆಟಕದ ಬೆಟ್ಟವಾಗಿದೆ,
ಹಾಗೂ ಅದು ಅವರನ್ನು ಸಾಂತ್ವನಗೊಳಿಸುವುದಿಲ್ಲ.
ತಮಗೆ ಅರಿಯದ ಮಾನವನನ್ನೇ ಅವರು ಮಾನಿಸುತ್ತಾರೆ
ಅವರಂಥ ಒಬ್ಬನಲ್ಲಿ, ಯಾರ ದಯಾವಂತಿಕೆಯು ಕೇವಲ ಅವರ
ದಯಾವಂತಿಕೆಯಂತಿದೆಯೋ
ಅವರ ಪ್ರೇಮದಂಥದೇ ಅವರ ದೇವರ ಪ್ರೇಮವಿದೆಯೋ,
ಅವರ ದಯೆಯಂಥದೇ ಯಾರ ದಯೆಯಿದೆಯೋ ಅಂಥವರಲ್ಲಿ
ಏನು ದುಃಖೋಪಶಮನವಿದ್ದೀತು ?
ಅವರು, ಮನುಷ್ಯನನ್ನು, ಜೀವಂತ ಮನುಷ್ಯನನ್ನು,
ಯಾವ ಮನುಷ್ಯ—ಪ್ರಪ್ರಥಮ ಮನುಷ್ಯ, ತನ್ನ ಕಂಗಳನ್ನು ತೆರೆದು
ರೆಪ್ಪೆ ಬಡಿಯದೆ ಸೂರ್ಯನನ್ನು ನೋಡಿದ್ದನೋ ಅಂಥವನನ್ನು
ಮಾನಿಸಲಾರರು.
ಇಲ್ಲ, ಅವರು ಅವನನ್ನು ಅರಿಯಲಾರರು, ಅವನಂತಾಗಲಾರರು.

ಗೊತ್ತುಗುರಿಯಿಲ್ಲದ ಮೆರವಣಿಗೆಯಲ್ಲಿ ಹೊರಡುತ್ತ ಅವರು ನಿರ್ನಾಮ
ರಾಗುತ್ತಾರೆ.
ತಮ್ಮ ದುಃಖವನ್ನೇ ತಾವು ಅನುಭವಿಸುತ್ತಾರೆ.
ನಿನ್ನ ಆನಂದದಲ್ಲಿ ಅವರಿಗೆ ಸಾಂತ್ವನ ಸಿಗುವುದಿಲ್ಲ.

ಅಳುಕುತ್ತಿರುವ ಅವರ ಹೃದಯವು ನಿನ್ನ ನುಡಿಗಳಲ್ಲಿ ಹಾಗೂ ಅದ
ರಿಂದೊಗೆದ ಗೀತದಲ್ಲಿ ಸಾಂತ್ವನವನ್ನು ಶೋಧಿಸುವದಿಲ್ಲ.
ಅವರ ನೋವು ಮೂಕವೂ ನಿರಾಕಾರವೂ ಆಗಿದ್ದು
ಅವರನ್ನು ಏಕಾಕಿ ಹಾಗೂ ಕುರುಡು ಪ್ರಾಣಿಗಳನ್ನಾಗಿ ಮಾಡುತ್ತದೆ.
ಬಂಧುಬಳಗ ವರ್ಗದಿಂದ ಸುತ್ತುಗಟ್ಟಿದಂತಿದ್ದರೂ ಅವರು
ಭಯದಲ್ಲಿಯೂ, ಸಹಚರರಿಲ್ಲದಂತೆಯೂ ಬದುಕುತ್ತಾರೆ.
ಆದರೂ ಅವರು ಏಕಾಕಿಯಾಗಿರಲಾರರು.
ಪಡುವಗಾಳಿ ಬೀಸಿದಾಗ ಅವರು ಮೂಡಣದೆಡೆಗೆ ಬರುತ್ತಾರೆ.
ಅವರು ನಿನ್ನನ್ನು ಅರಸನೆಂದು ಕರೆಯುತ್ತಾರೆ.
ಅವರು ನಿನ್ನ ದರಬಾರದಲ್ಲಿ ಬರುತ್ತಾರೆ.
ಅವರು ನಿನ್ನನ್ನು 'ಮೆಸ್ಸೀಹ' ನೆಂದು ನುಡಿಯುತ್ತಾರೆ.
ಆ ಪವಿತ್ರ ತೈಲದಿಂದ ತಮ್ಮನ್ನೇ ತಾವು ಅಭ್ಯಂಜಿಸಿಕೊಳ್ಳುತ್ತಾರೆ.
ಹೌದು, ನಿನ್ನ ಬದುಕಿನ ಮೇಲೆಯೇ ಅವರು ಬದುಕುತ್ತಾರೆ.

× × × ×

ಗುರುವೇ ಗುರುಗೀತಗಾರಾ,
ನಿನ್ನ ಕಂಬನಿಗಳು ಚೈತ್ರದ ಮಳೆ ಹನಿಯಂತಿವೆ.
ನಿನ್ನ ನಗೆ ಶ್ವೇತಸಾಗರದ ತೆರೆಗಳಂತಿದೆ.
ನೀನು ನುಡಿದಾಗ, ನಿನ್ನ ನುಡಿಗಳು, ಯಾರ ತುಟಿಗಳು ಉರಿಯಿಂದ
ಹೊತ್ತಿವೆಯೋ ಅಂಥವರ ತುಟಿಯ ದೂರದ ಕಿವಿಮಾತುಗಳಾಗಿವೆ.
ಇನ್ನೂ ನಗಲು ಸಿದ್ಧವಿರದ ಅವರ ಎಲುವಿನ ಮೇಲಿನ ನೆಣವನ್ನು
ಕಂಡು ನೀನು ನಕ್ಕಿದ್ದೀಯಾ.
ಅವರ ಒಣಕಲ ಕಂಗಳನ್ನು ಕಂಡು ನೀನು ಅತ್ತಿದ್ದೀಯಾ.
ಅವರ ವಿಚಾರ ಅವರ ತಿಳಿವಳಿಕೆಗಳಿಗೆ ನಿನ್ನ ದನಿಯೇ ಜನಕನಾಗಿದೆ.
ಅವರ ಉಸಿರು ಅವರ ನುಡಿಗಳಿಗೆ ನಿನ್ನ ದನಿಯೇ ಜನನಿಯಾಗಿದೆ.
ಏಳು ಸಲ ನಾ ಜನಿಸಿ ಬಂದೆ,ಮತ್ತೇಳು ಸಲ ನಾ ಮರಣವನ್ನೈದಿದೆ.
ಈಗ ಮತ್ತೆ ನಾನು ಜೀವಿಸಿರುವೆ, ನಿನ್ನನ್ನು ಕಾಣುತ್ತಿರುವೆ.
ಯೋಧರೊಳಗಿನ ಯೋಧ,

ಕವಿಗಳ ಕವಿ,
ಸಕಲ ಭೂಪತಿಗಳ ಮೇಲಿನ ಭೂಪ,
ನಿನ್ನ ದಾರಿಕಾರರೊಡನಿರುವ ಅರೆಬತ್ತಲೆ ಮಾನವ,
ನಿನ್ನ ನಾಮೋಚ್ಚಾರಣೆಯನ್ನು ಮಾಡುತ್ತಿರುವ ಹೊತ್ತಿನಲ್ಲಿ
ಪ್ರತಿದಿನವೂ ಬಿಶಪ್ಪನು ತನ್ನ ತಲೆಯನ್ನು ಕೆಳಬಗ್ಗಿಸುತ್ತಾನೆ.
ಪ್ರತಿದಿನವೂ ಭಿಕ್ಷುಕರೆನ್ನುತ್ತಾರೆ :
" ಜೀಸಸ್‌ನ ಹೆಸರಿನಲ್ಲಿಯಾದರೂ,
ರೊಟ್ಟಿಯನ್ನು ಕೊಳ್ಳಲು ನಮಗೊಂದಾಣೆ ನೀಡಿ. "
ನಮ್ಮ ಕೊರತೆ ಬಯಕೆಗಳ ಮಳೆಗಾಲದ ಮಹಾಪೂರದ ತೆರೆಗಳಂತೆ,
ಹಾಗೂ ನಮ್ಮ ಚಳಿಗಾಲ ಬಂತೆಂದರೆ, ಓಹಟೆಯ ತೆರೆಗಳಂತೆ
ನಾವು ಒಬ್ಬರನ್ನೊಬ್ಬರು ಭೆಟ್ಟಿಯಾಗುತ್ತೇವೆ,
ಆದರೆ ನಿಜವಾಗಿ ಹೇಳಬೇಕೆಂದರೆ ನಿನ್ನನ್ನೇ ಕಾಣುತ್ತೇವೆ,
ಉನ್ನತಿಯಿರಲಿ, ಅವನತಿಯಿರಲಿ, ನಿನ್ನನಾಮ ನಮ್ಮ ನಾಲಗೆಯ ಮೇಲಿದೆ.
ಅನಂತ ಪ್ರೇಮದ ಪ್ರಭುವೇ

‡ ‡ ‡ ‡

ಗುರುವೇ, ನಮ್ಮೇಕಾಂತದ ಗಳಿಗೆಗಳ ಪ್ರಭುವೇ,
ಇಲ್ಲಿ, ಅಲ್ಲಿ, ತೊಟ್ಟಿಲಿಂದ ಚಟ್ಟದವರೆಗೂ, ನಿನ್ನ ಮೌನೀ ಬಂಧುಗಳೇ ನನಗೆ ಕಾಣುತ್ತಾರೆ.
ಅವರು ಮುಕ್ತಾತ್ಮರು, ಬಂಧವಳಿದವರು
ನಿನ್ನ ಭೂಮಿತಾಯಿಯ ಹಾಗೂ ಆಕಾಶದ ಪುತ್ರರವರು,
ಅವರು ಬಾನೊಳಗಿನ ಹಕ್ಕಿಯಂತಿದ್ದಾರೆ,
ನೆಲದ ಮೇಲಿನ ಹೂವಿನಂತಿದ್ದಾರೆ.
ಅವರು ನಿನ್ನ ಬದುಕನ್ನೇ ಬಾಳುತ್ತಾರೆ, ನಿನ್ನ ವಿಚಾರಗಳ ಕುರಿತೇ ಯೋಚಿಸುತ್ತಾರೆ,
ನಿನ್ನ ಗೀತವನ್ನೇ ಪ್ರತಿಧ್ವನಿಸುತ್ತಾರೆ.
ಆದರವರು ಬರಿಗೈಯವರಾಗಿದ್ದಾರೆ.

ಮತ್ತು ನಿನ್ನ ಮಹಾ ಮರಣದಂತಹ ಮರಣದಂಡನೆ
ಅವರಿಗಾಗಿಲ್ಲ
ಅದಕ್ಕಾಗಿಯೇ ಅವರಿಗೆ ನೋವೆನಿಸಿದೆ.
ಲೋಕವವರನ್ನು ಪ್ರತಿದಿನವೂ ಶಿಲುಬೆಗೇರಿಸುತ್ತಲಿದೆ,
ಆದರದು ತೀರ ಕ್ಷುದ್ರರೀತಿಯಲ್ಲಿ.
ಆಕಾಶವಿನ್ನೂ ಅಲುಗಾಡಿಲ್ಲ,
ಭೂಮಿಯಿನ್ನೂ ತನ್ನ ಮೃತರ ಪ್ರಸವವೇದನೆಯನ್ನು ಪಡೆದಿಲ್ಲ.
ಅವರನ್ನು ಶಿಲುಬೆಗೇರಿಸಲಾಗಿದೆ; ಅವರ ವೇದನೆಗೆ ಒಬ್ಬರೂ
ಸಾಕ್ಷಿಯಿಲ್ಲ.
ಅವರು ತಮ್ಮ ಮುಖವನ್ನು ಅತ್ತಿತ್ತ ಎಡಬಲಕ್ಕೆ ತಿರುಗಿಸುತ್ತಾರೆ.
ಆದರೆ ತಮ್ಮ ರಾಜ್ಯದಲ್ಲಿ ಸ್ಥಾನವನ್ನೀಯುವ ಭರವಸೆ ಕೊಡುವ
ಯಾರೂ ಅವರಿಗೆ ಇನ್ನೂ ಕಂಡಿಲ್ಲ.
ಆದರೂ, ನಿನ್ನ ದೇವರೇ ಅವರ ದೇವರಾಗಬಹುದೆಂದು
ನಿನ್ನ ಮಹಾಪಿತನೇ ಅವರ ಮಹಾ ಪಿತನಾಗಬಹುದೆಂದು
ಅವರು ಮತ್ತೆ ಮತ್ತೆ ಶಿಲುಬೆಗೇರಿಸಲ್ಪಡುತ್ತಾರೆ.

ಗುರುವೇ, ಪ್ರೇಮಪ್ರಭುವೇ,
ರಾಜಕನ್ಯೆಯು ತನ್ನ ಸೌಗಂಧಿತ ಸೌಧದಲ್ಲಿ,
ಮದುವೆಯಾದ ಹಾಗೂ ಕನ್ಯೆಯರಾದ ಹೆಂಗಳೆಯರು,
ಅನ್ನಕ್ಕಾಗಿ ತನ್ನ ಮಾನಗೇಡಿತನದಲ್ಲಿ ಬೀದಿಗಿಳಿದ ವಾರಾಂಗನೆಯರು
ತಮ್ಮ ಪಂಜರಗೃಹದಲ್ಲಿ,
ಪತಿಯಿರದ ಪಾದ್ರಿಣಿಯು ತನ್ನ ಮಠದಲ್ಲಿ, ನಿನ್ನ ಬರವನ್ನೆದುರು
ನೋಡುತ್ತಿದ್ದಾರೆ.
ಮಕ್ಕಳಿಲ್ಲದ ಮಹಿಳೆ ಕೂಡ ಕಾಜುಳ್ಳ ತನ್ನ ಕಿಟಕಿಯಿಂದ
ಮಂಜುವನಿ ಮಹಾರಣ್ಯವನ್ನು ಚಿತ್ರಿಸುತ್ತಿರುವ
ಆ ಸಮಸೂತ್ರದಲ್ಲಿ ನಿನ್ನನ್ನು ಕಾಣುತ್ತಾಳೆ;

ಮತ್ತು ತಾನು ನಿನ್ನ ತಾಯಿಯೆಂದು ತಿಳಿದುಕೊಂಡು ಸಾಂತ್ವನ
ಗೊಳ್ಳುತ್ತಾಳೆ.

† † † †

ಗುರುವೇ, ಕವಿಗುರುವೇ,
ನಮ್ಮ ಮೂಕ ಬಯಕೆಗಳ ಪ್ರಭುವೇ,
ನಿನ್ನ ಎದೆಮಿಡಿತದೊಡನೆ ಜಗದ ಎದೆಯೂ ಅಲುಗಾಡಿಹೋಗುತ್ತಿದೆ.
ಆದರದು ನಿನ್ನ ಗೀತದಿಂದ ಉರಿದು ಹೋಗುವದಿಲ್ಲ.
ಜಗತ್ತು ನಿನ್ನ ದನಿಯನ್ನು ಪ್ರಶಾಂತಾನಂದದಿಂದ ಕೇಳುತ್ತ
ಕೂಡುತ್ತದೆ.
ಆದರದು ತನ್ನ ಸ್ಥಾನ ಬಿಟ್ಟಿದ್ದು
ನಿನ್ನ ಬೆಟ್ಟಗಳಂಚುಗಳನ್ನು ಅಳೆಯ ಹೊರಡುವದಿಲ್ಲ.
ನಿನ್ನ ಕನಸನ್ನು ಮಾನವನೂ ಕನಸಿಸುತ್ತಾನೆ, ಆದರನನು ನಿನ್ನ
ಪ್ರಭಾತದಲ್ಲಿ ಎಚ್ಚರಗೊಳ್ಳುವದಿಲ್ಲ;
ಅದೇ ಅವನ ಮಹತ್ತರ ಕನಸಾಗಿದೆ.
ಅವನು ನಿನ್ನ ದರ್ಶನವನ್ನು ಕಾಣುತ್ತಾನೆ.
ಆದರೆ ಅವನು ತನ್ನ ಜಡಜಡಿತ ಪಾದಗಳನ್ನು ನಿನ್ನ
ಸಿಂಹಾಸನದತ್ತ ಬೆಳೆಸುವದಿಲ್ಲ.
ಆದರೂ, ನಿನ್ನ ಹೆಸರಿನಲ್ಲಿ ಅನೇಕರು ಸಿಂಹಾಸನವೇರಿದ್ದಾರೆ
ಹಾಗೂ ನಿನ್ನ ಶಕ್ತಿಯಿಂದ ಬಿಶಪ್ ಕಿರೀಟ ಧರಿಸಿದ್ದಾರೆ.
ನಿನ್ನ ಹೊನ್ನ ಸಂದರ್ಶನವನ್ನವರು
ತಮ್ಮ ತಲೆಗಳಿಗೆ ಕಿರೀಟವನ್ನಾಗಿಯೂ ಕೈಗೆ
ರಾಜದಂಡವನ್ನಾಗಿಯೂ ಮಾರ್ಪಡಿಸಿಕೊಂಡಿದ್ದಾರೆ.
ಗುರುವೇ, ಪ್ರಕಾಶ ಪ್ರಭುವೇ.
ನಿನ್ನ ಕಂಗಳು ಕುರುಡರ ಬೆರಳುಗಳ ಶೋಧದಲ್ಲಿಯೇ ಇರುವವು.
ಆದರೂ ದ್ವೇಷಿಗಳಾಗಲು ನೀನಿನ್ನೂ ಅಭದ್ರ, ಅಶಕ್ತನೆಂದು,
ಮಾನವನು ನಿನ್ನನ್ನು ದೇವರಂತೆ ಪೂಜಿಸುವುದು ಬಹಳ ಬಹಳ
ಅತಿಯೆಂದು,

ಅವರು ನಿನ್ನನ್ನಿನ್ನೂ ಅಣಕಿಸುತ್ತಾರೆ, ಹೀಯಾಳಿಸುತ್ತಾರೆ,
ಅವರ ಯಾಗ, ಅವರ ಗೀತ,
ಅವರ ಪುಣ್ಯಸಂಸ್ಕಾರ, ಅವರ ಜಪಮಾಲೆ
ಸಕಲವೂ ಅವರ ಬಂಧಿತ ಸ್ವತಃಕ್ಕಾಗಿಯೇ ಇವೆ.
ನೀನಿನ್ನೂ ಅವರಿಗೆ ದೂರದ ಆತ್ಮ, ಅವರ ಅತಿ ದೂರದ
ಕೂಗು, ಆಕಾಂಕ್ಷೆ.

ಆದರೆ ಪ್ರಭುವೇ, ಬಾನೆಡೆಯವನೇ, ನಮ್ಮ ಸುಂದರತರ ಸ್ವಪ್ನದ
ನಾಯಕನೇ.

ನೀನಿಂದಿಗೂ ಇನ್ನೂ ಅಡಿಯಾಡುತ್ತಿದ್ದೀ;
ಬಿಲ್ಲಾಗಲಿ, ಬರ್ಚಿಯಾಗಲಿ ನಿನ್ನ ಹೆಜ್ಜೆಯನ್ನು ತಡೆಯಲಾರವು.
ನಮ್ಮೆಲ್ಲಂಬುಗಳ ಮಧ್ಯೆಯೂ ನೀನು ನಡೆದಾಡುತ್ತಿದ್ದೀ.
ನಮ್ಮನ್ನು ಕಂಡು ನಗುತ್ತಿದ್ದೀ;
ನಮ್ಮೆಲ್ಲರಿಗಿಂತಲೂ ನೀನು ಬಹಳ ಚಿಕ್ಕವನಾಗಿದ್ದರೂ,
ನಮ್ಮೆಲ್ಲರ ಜನಕನಾಗಿದ್ದೀ.
ಕವಿಯೇ. ಗೀತಗಾರಾ ವಿಶಾಲಹೃದಯೀ,
ನಮ್ಮ ದೇವರೇ ನಿನ್ನ ಹೆಸರನ್ನು ಆಶೀರ್ವದಿಸಲಿ.
ನಿನ್ನನ್ನು ಹೆತ್ತ ಹೊಟ್ಟೆಯನ್ನು, ನಿನಗೆ ಹಾಲೂಡಿದ ಹೃದಯವನ್ನು
ಆಶೀರ್ವದಿಸಲಿ.

ಹಾಗೂ ಆ ದೇವರೇ ನಮ್ಮೆಲ್ಲರನ್ನೂ ಕ್ಷಮಿಸಲಿ.



# ಅಹಿಂಸಾ ಜೇನುತುಪ್ಪ

## ಶುದ್ಧವಾದ ಜೇನುತುಪ್ಪ

- ಶಕ್ತಿಯನ್ನೂ ಉತ್ಸಾಹವನ್ನೂ ಕೊಡುತ್ತದೆ.
- ಅನೇಕ ವ್ಯಾಧಿಗಳಿಗೆ ಅಮೃತಸಮಾನವು.

**ಅಶುದ್ಧವಾದದ್ದು ವಿಷಸಮಾನವು.**
**ಅಹಿಂಸಾ ಜೇನುತುಪ್ಪವನ್ನೇ**
**ಉಪಯೋಗಿಸಿರಿ.**

ನಿಮ್ಮೂರಿನ ಖಾದೀಭಾಂಡಾರ ಮತ್ತು
ಔಷಧದ ಅಂಗಡಿಗಳಲ್ಲಿ ವಿಚಾರಿಸಿರಿ.

ವಿವರಗಳಿಗಾಗಿ
ಕೆಳಗಿನ ವಿಳಾಸಕ್ಕೆ ಬರೆಯಿರಿ.

ಮುಂಬಯಿ ಗ್ರಾಮೋದ್ಯೋಗ ಮಂಡಳ
**ಕರ್ನಾಟಕ ಶಾಖೆ, ಧಾರವಾಡ**